### Author Guidelines

- Online submission of the article should be sent as an attachment only in MS word to: editor@srujani.in
- Articles should be in Kannada or English
- Article should be 4,000 - 8,000 words in length
- It should be typed in Times New Roman Font for English and Nudi 01 e Font for Kannada Article, Text type should be 12 Font size, 1.5 lines spaced.
- Covering letter declaring that the submitted article is original work of the author and is unpublished must be sent on a separate page
- Abstract of 150 words along with key words should be given on the separate sheet
- Text Organization: The main text should begin on a separate page preferably divided into separate sections such as Introduction, Materials and Methodology, main Subject of the article and conclusion.
- References must be according to APA 7th Edition guidelines.
- Visit our website for more details: www.srujani.in

MOB: +91-7411851852 and +91-9164061581

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 1-3
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಶಾಸನೋಕ್ತ ಬನ್ನೂರು ಸ್ಥಳನಾಮ

**ಪುಟ್ಟರಾಜು ಸಿ. ಆರ್**

ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

***Abstract:***

*ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕಿಗೆ ಸೇರಿರುವ ಮೈಸೂರಿನ ಪೂರ್ವದಲ್ಲಿ 25 ಕಿ.ಮೀ ದೂರದಲ್ಲಿರುವ, ಪ್ರಾಚೀನ ಕಾಲದಲ್ಲಿ ವಹ್ನಿಪುರ ಎಂದು ಪ್ರಸಿದ್ಧಿ ಪಡೆದು ಕಾವೇರಿ ನದಿಯ ಎಡದಂಡೆಯ ಮೇಲಿರುವ ಬನ್ನೂರು ಪೌರಾಣಿಕ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಸುಮಾರು ಐದು ಸಾವಿರ ವರ್ಷಗಳ ಕುರು-ಪಾಂಡವರ ಕಾಲದಲ್ಲಿದ್ದ ಮಯೂರ ಧ್ವಜ ಮತ್ತು ತಾಮ್ರ ಧ್ವಜದ ಕಾಲದಲ್ಲಿ ರಾಜಧಾನಿಯಾಗಿತ್ತು ಎಂದು ಪೌರಾಣಿಕವಾಗಿ ಹೇಳಲಾಗುತ್ತದೆ. ಗಂಗರ ಕಾಲದಲ್ಲಿ ಪ್ರಮುಖ ಆಡಳಿತ ಕೇಂದ್ರವಾಗಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತವೆ. ಬನ್ನೂರನ್ನು ಪ್ರಾಚೀನ ಕಾಲದಲ್ಲಿ ವಿವಿಧ ಹೆಸರುಗಳಿಂದ ಕರೆಯುತ್ತಿದ್ದರು ಎಂಬುದಕ್ಕೆ ಶಾಸನಗಳು ಆಧಾರಗಳಾಗಿವೆ. ಈ ಪ್ರದೇಶವನ್ನು ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರ ಕಾಲದ ಆಡಳಿತಕ್ಕೆ ಒಳಪಟ್ಟಿದ್ದು, ಈ ರಾಜಮನೆತನಗಳ ಹಲವಾರು ಶಾಸನಗಳಲ್ಲಿ ಬನ್ನೂರು ಸ್ಥಳನಾಮದ ಉಲ್ಲೇಖಗಳು ದೊರೆಯುತ್ತವೆ.*

***Keywords:*** *ಕನ್ನಡ ಸಾಹಿತ್ಯ, ಶಾಸನ, ಸ್ಥಳನಾಮ, ಬನ್ನೂರು, ವನ್ನಿಯೂರು, ಜನನಾದಚತುರ್ವೇದಿಮಂಗಲ.*

**ಪೀಠಿಕೆ**

ಒಂದು ಸ್ಥಳ ಅಥವಾ ಪ್ರದೇಶದ ಇತಿಹಾಸದ ಕುರುಹುಗಳು ಕಣ್ಮರೆಯಾಗುತ್ತಿರುವ ಇಂದಿನ ದಿನಗಳಲ್ಲಿ ಅವುಗಳ ಮೇಲೆ ಬೆಳಕು ಚೆಲ್ಲುವ ನಿಟ್ಟಿನಲ್ಲಿ ಸ್ಥಳನಾಮ ಅಧ್ಯಯನ ಸಹಕಾರಿಯಾಗಿದೆ. ಪ್ರತಿಯೊಂದು ಸ್ಥಳನಾಮಕ್ಕೂ ಅರ್ಥವಿರುತ್ತದೆ. ಸ್ಥಳನಾಮದ ಮೇಲೆ ಸುತ್ತಮುತ್ತಲಿನ ಭೌಗೋಳಿಕ ಪರಿಸರ, ಐತಿಹಾಸಿಕ ವಿಷಯ, ಆ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ರಾಜ-ಮಹಾರಾಜರು, ದೇವಾಲಯಗಳು, ಧರ್ಮಗಳು, ಐತಿಹಾಸಿಕ ವೀರರ ಪ್ರಭಾವವು ಬೀರಿರುತ್ತದೆ. ಸ್ಥಳನಾಮಗಳ ಅಧ್ಯಯನವು ಇಂದು ಬಹುಶಿಸ್ತಿಯ ನೆಲೆಯಲ್ಲಿ ಕಂಡುಬರುತ್ತಿದ್ದು ವಿಶ್ಲೇಷಣೆಗೆ ತೊಡಗಿದಂತೆ ಇದರ ಬೇರು ಬಹುಗಟ್ಟಿತನದಿಂದ ಕೂಡಿರುವುದು ಕಂಡುಬರುತ್ತದೆ.

ಶಾಸನಗಳ ಹಿನ್ನೆಲೆಯಲ್ಲಿ ಬನ್ನೂರು ಸ್ಥಳನಾಮವನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಬನ್ನೂರು ಸ್ಥಳವನ್ನು ಶಾಸನಗಳಲ್ಲಿ ವಿವಿಧ ಹೆಸರುಗಳಿಂದ ಕರೆಯಲಾಗಿದೆ. "ಕ್ರಿ.ಶ. ಸುಮಾರು 11ನೇ ಶತಮಾನದ ಜನಾರ್ಧನ ದೇವಾಲಯದಲ್ಲಿರುವ ಹೊಯ್ಸಳರ ಕಾಲದ್ದಿರಬಹುದಾದ ಶಾಸನದಲ್ಲಿ 'ವನ್ನಿಯೂರು, ಜನನಾದಚತುರ್ವೇದಿಮಂಗಲ' ಎಂದು

***Please cite this article as:*** ಪುಟ್ಟರಾಜು, ಸಿ. ಆರ್. (2024). ಶಾಸನೋಕ್ತ ಬನ್ನೂರು ಸ್ಥಳನಾಮ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(2), 1–3

ಉಲ್ಲೇಖವಾಗಿದೆ."[1] ಈ ಶಾಸನವು ಬನ್ನೂರಿನ ಸ್ಥಳದ ನಾಮವನ್ನು ಉಲ್ಲೇಖವಾಗಿರುವ ಮೊದಲ ಶಾಸನವಾಗಿದ್ದು ವನ್ನಿಯೂರಿಗೆ ಜನನಾಥಚತುರ್ವೇದಿಮಂಗಲ ಎಂಬ ಪ್ರತಿನಾಮದೇಯವಿತ್ತು ಎಂಬುದು ತಿಳಿಯುತ್ತದೆ.

"ಕ್ರಿ.ಶ. 1135ರ ಹೊಯ್ಸಳರ ರಾಜ ವಿಷ್ಣುವರ್ಧನನ ಕಾಲದ ಶಾಸನದಲ್ಲಿ ಬನ್ನಿಯೂರು, ಜನನಾಥಚತುರ್ವೇದಿಮಂಗಲ ಎಂದು ಕರೆಯಲಾಗಿದೆ."[2] "ಕ್ರಿ.ಶ.1192ರ ಹೊಯ್ಸಳ 2ನೇ ವೀರಬಲ್ಲಾಳನ ಕಾಲದ ಶಾಸನದಲ್ಲಿ ಜನನಾದ ಚತುರ್ವೇದಿಮಂಗಲ ಮದುರಾಂಕಚತುರ್ವೇದಿಮಂಗಲ ಎಂಬ ಹೆಸರಿನಿಂದ ಉಲ್ಲೇಖಿಸಿದೆ"[3] "2ನೇ ಬಲ್ಲಾಳನ ಕಾಲದ ಕ್ರಿ.ಶ. 1199ರ ಶಾಸನದಲ್ಲಿ ಬಂನಿಯೂರು ಎಂದು ಕರೆಯಲಾಗಿದೆ."[4] "ಕ್ರಿ.ಶ. 1367ರ ಕಾಲದ ಅತ್ತಿಹಳ್ಳಿಯ ಎರಡು ಶಾಸನಗಳಲ್ಲಿ ಶ್ರೀರಾಮಪುರವಾದ ಬಂನೂರು ಎಂದು ಬಳಕೆಯಾಗಿದೆ."[5]

"ಕ್ರಿ.ಶ. 1421ರ ಮೈಸೂರು ಒಡೆಯರ ಕಾಲದ ಶಾಸನದಲ್ಲಿ 'ಬಂನಿಯೂರ' ಎಂಬ ಹೆಸರು ಉಲ್ಲೇಖವಿದೆ."[6] "ಕ್ರಿ.ಶ. 1541ರ ವಿಜಯನಗರ ಅಚ್ಯುತರಾಯನ ಕಾಲದಲ್ಲಿ 'ವಹ್ನಿಪುರ ಎಂದು ಕರೆಯಲಾಗಿದೆ."[7] "ಕ್ರಿ.ಶ. 1553ರ ಶಾಸನದಲ್ಲಿ ವಹ್ನಿಪುರಕ್ಕೆ ಪ್ರತಿನಾಮದೇಯ ಬಂನುರ"[8] ಎಂದು ಉಲ್ಲೇಖವಾಗಿದೆ. "ಕ್ರಿ.ಶ 1615ರ ವಿಜಯನಗರದ ಅರಸ ವೆಂಕಟಪತಿಯ ಕಾಲದ ಶಾಸನದಲ್ಲಿ ವಹ್ನಿಪುರ ಪ್ರತಿನಾಮದೇಯ ಬಂನೂರ ಎಂದು ಉಲ್ಲೇಖವಾಗಿದೆ."[9]

ಶಾಸನಗಳಲ್ಲಿ ಬನ್ನೂರು ಪ್ರತಿನಾಮಧೇಯವಾಗಿ ದೇವರ ಹೆಸರಿನಲ್ಲಿ ಮತ್ತು ಧಾರ್ಮಿಕ ಸೂಚಕವಾಗಿ ಬಳಸುತ್ತಿದ್ದರು. ಕ್ರಿ.ಶ. 11ನೇ ಶತಮಾನದ ಹೊಯ್ಸಳರ ಕಾಲದ ಶಾಸನದಲ್ಲಿ ಜನನಾದಚತುರ್ವೇದಿಮಂಗಲವೆಂತಲೂ ವಿಷ್ಣುವರ್ಧನನ ಕಾಲದಲ್ಲಿ ಜನನಾಥಚತುರ್ವೇದಿ ಮಂಗಲ, ಮಧುರಾಂತಕಚತುರ್ವೇದಿಮಂಗಲವೆಂತಲೂ ವಿಜಯನಗರದ ಕಾಲದಲ್ಲಿ ಶ್ರೀರಾಮಪುರವೆಂದು ಬಳಕೆಯಾಗಿದೆ.

ಬನ್ನೂರಿನ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಸಂಶೋಧನ ಗ್ರಂಥಗಳು ಮತ್ತು ಲೇಖನಗಳಲ್ಲಿ ಇದು ಸಸ್ಯ ಸೂಚಕವಾಗಿ ಬಳಕೆಯಾಗಿದೆ. ಪ್ರಾಚೀನ ಕಾಲದಲ್ಲಿ ಬನ್ನೂರು ಸುತ್ತಮುತ್ತಲು ಬನ್ನಿಮರಗಳು ಅತಿಹೆಚ್ಚು ಇದ್ದವು ಆದ್ದರಿಂದ ಬನ್ನಿಯೂರು ಕಾಲಕ್ರಮೇಣ ಬನ್ನೂರು ಆಗಿದೆ ಎಂದು ಹೇಳಲಾಗಿದೆ.

"ಕನ್ನಡ ಮೂಲದ ಬನ್ನಿಮರದಿಂದ ಈ ಊರಿಗೆ ಬನ್ನೂರು ಎಂಬ ಹೆಸರು ಬಂದಿದೆ."[10] ಆದರೆ ಪ್ರಾಚೀನ ಶಾಸನಗಳಲ್ಲಾಗಲಿ ಅಥವಾ ಯಾವ ಕೃತಿಗಳಲ್ಲಾಗಲಿ ಬನ್ನಿಮರಗಳು ಇದ್ದವು ಎಂಬುದಕ್ಕೆ ಆಧಾರಗಳು ದೊರೆಯುವುದಿಲ್ಲ.

ಬನ್ನೂರು ಸ್ಥಳದ ಉಲ್ಲೇಖವು ಕ್ರಿ.ಶ. 11ನೇ ಶತಮಾನದ ಹೊಯ್ಸಳರ ಕಾಲದ ತಮಿಳು ಮಿಶ್ರಿತ ಕನ್ನಡ ಶಾಸನದಲ್ಲಿ 'ವನ್ನಿಯೂರು' ಎಂದು ಮೊದಲು ಬಳಕೆಯಾಗಿದೆ. ವನ್ನಿ ಎಂಬುದು ತಮಿಳು ಪದವಾಗಿದ್ದು ಅಗ್ನಿ, ಬೆಂಕಿ ಎಂಬ ಅರ್ಥವಿದೆ. ವನ್ನಿ

[1] ಗೋಪಾಲ್ ಬಾ.ರಾ. *ಎಪಿಗ್ರಾಫಿಯ ಕರ್ನಾಟಿಕ ಸಂಪುಟ-5, ತಿ.ನರಸೀಪುರ ಶಾ-68, ಬನ್ನೂರು.* ಪುಟ.459

[2] ಗೋಪಾಲ್ ಬಾ.ರಾ. *ಎಪಿಗ್ರಾಫಿಯ ಕರ್ನಾಟಿಕ ಸಂಪುಟ-5, ತಿ.ನರಸೀಪುರ ಶಾಸನ ಸಂಖ್ಯೆ-69.* ಬನ್ನೂರು, ಪುಟ.460

[3] ಅದೇ. *ಶಾಸನ ಸಂಖ್ಯೆ-67, ಬನ್ನೂರು.* ಪುಟ.458

[4] ಅದೇ. *ಶಾಸನ ಸಂಖ್ಯೆ-64, ಬನ್ನೂರು.* ಪು.456

[5] ಅದೇ. *ಶಾಸನ ಸಂಖ್ಯೆ-73-74, ಬನ್ನೂರು.* ಪುಟ.464

[6] ಅದೇ. *ಶಾಸನ ಸಂಖ್ಯೆ-60, ಬನ್ನೂರು.* ಪುಟ.545

[7] ಅದೇ. *ಶಾಸನ ಸಂಖ್ಯೆ-55, ಬನ್ನೂರು.* ಪುಟ.451

[8] ಅದೇ. *ಶಾಸನ ಸಂಖ್ಯೆ-45, ಬನ್ನೂರು.* ಪುಟ.445

[9] ಅದೇ. *ಶಾಸನ ಸಂಖ್ಯೆ-50, ಬನ್ನೂರು.* ಪುಟ.448

[10] ರಾಜೇಂದ್ರಪ್ಪ ಎಸ್. *ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರ್.* ಪುಟ.222

ಎಂಬ ಪದವು ಸಂಸ್ಕೃತದ 'ವಹ್ನಿ' ಎಂಬ ಪದದಿಂದ ಬಂದಿದ್ದು ವಹ್ನಿ ಎಂದರೆ ಅಗ್ನಿ, ಬೆಂಕಿ ಮತ್ತು ಶೌರ್ಯಶಕ್ತಿ ಎಂಬ ಅರ್ಥವನ್ನು ಪಡೆಯುತ್ತದೆ. ತಮಿಳು ನಾಡಿನಲ್ಲಿ ವನ್ನಿಯಾರ್ ಎಂಬ ಸಮುದಾಯ ಇಂದು ಇನ್ನೂ ವಾಸಿಸುತ್ತಿದ್ದು ತಮ್ಮನ್ನು ಅಗ್ನಿಕುಲದವರು ಎಂದು ಹೇಳಿಕೊಳ್ಳುತ್ತಾರೆ. 11ನೇ ಶತಮಾನದಲ್ಲಿ ಬಳಕೆಯಾದ ವನ್ನಿಯೂರು 12ನೇ ಶತಮಾನದ ವಿಷ್ಣುವರ್ಧನನ ಕಾಲಕ್ಕಾಗಲೇ ಬನ್ನಿಯೂರು (ವ>ಬ) ಆಗಿ ಬಳಕೆಯಾಗಿದೆ. 12ನೇ ಶತಮಾನದ ಅಂತ್ಯದಲ್ಲಿ ಬಿಂದುಸಹಿತವಾಗಿ ಬಂನಿಯೂರಾಗಿ, 14ನೇ ಶತಮಾನದಲ್ಲಿ ಬಂನೂರ ಎಂಬ ಹೆಸರು 16ನೇ ಶತಮಾನದಲ್ಲಿ ಬಂನುರ ಎಂಬ ಹೆಸರುಗಳು ಬಳಕೆಯಾಗಿದ್ದು ಕಾಲನಂತರ ಬನ್ನೂರು ಆಗಿದೆ.

**ವನ್ನಿಯೂರು>ಬನ್ನಿಯೂರು>ಬಂನಿಯೂರು> ಬಂನೂರು>ಬಂನುರು>ಬನ್ನೂರು**

ವಿಜಯನಗರ ಮೈಸೂರು ಒಡೆಯರ ಕಾಲದ ಶಾಸನದಲ್ಲಿ ವಹ್ನಿಪುರ ಪ್ರತಿನಾಮದೇಯವಾದ ಬಂನೂರ ಎಂದು ತಿಳಿಸಿದ್ದು ವಹ್ನಿ ಎಂಬುದು ಸಂಸ್ಕೃತ ಪದವಾಗಿದ್ದು ಅಗ್ನಿ, ಬೆಂಕಿ ಎಂಬ ಅರ್ಥವಿದೆ. ಕ್ರಿ.ಶ. 12ನೇ ಶತಮಾನದ ಹೊಯ್ಸಳರ ಕಾಲದ ಬನ್ನೂರಿನ ಶಾಸನದಲ್ಲಿ ಅಗ್ಗಿಷ್ಟಿಕೆಯ ಉಲ್ಲೇಖವಿದೆ. ಡಾ.ಚಿದಾನಂದಮೂರ್ತಿ ಪ್ರಕಾರ "ಅಗ್ಗಿಷ್ಟಿಕೆ ಎಂದರೆ ಬೆಂಕಿಯನ್ನು ಆರದಂತೆ ನೋಡಿಕೊಳ್ಳಲು ಮತ್ತು ಮನೆಮನೆಗೆ ವಿತರಣೆ ಮಾಡಲು ಗ್ರಾಮದ ಜನ ಮಾಡಿದ ಸಾಮೂಹಿಕ ಪ್ರಯತ್ನದ ಫಲ ಎಂದು ತಿಳಿಸಿದ್ದಾರೆ."[11] ಇದರಿಂದ ನಮಗೆ ಬನ್ನೂರು ಪ್ರಾಚೀನ ಕಾಲದಿಂದಲೂ ಬೆಂಕಿಯು ಆರದಂತೆ ಸಂಗ್ರಹಿಸಿ ಮನೆ ಮನೆಗೆ ಹಂಚುತ್ತಿದ್ದರು ಆದ್ದರಿಂದ ತಮಿಳಿನ ವನ್ನಿ (ಬೆಂಕಿ) ಕನ್ನಡಕ್ಕೆ ಬರುವಾಗ ಬನ್ನಿಯಾಗಿ ಬಳಕೆಗೆ ಬಂದು ವನ್ನಿಯೂರು>ಬನ್ನಿಯೂರು>ಬನ್ನೂರಾಗಿದೆ.

[11] ಚಿದಾನಂದಮೂರ್ತಿ ಎಂ. *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಪುಟ.497

ಹೀಗೆ 10ನೇ ಶತಮಾನದಿಂದ 16ನೇ ಶತಮಾನದವರೆಗೆ ದೊರೆಯುವ ಶಾಸನಗಳಲ್ಲಿ ಬನ್ನೂರು ಸ್ಥಳನಾಮವು ಕಾಲಕಾಲಕ್ಕೆ ಸ್ಥಿತ್ಯಂತರಗೊಂಡಿರುವುದನ್ನು ಕಾಣಬಹುದು.

**ಪರಾಮರ್ಶನ ಗ್ರಂಥಗಳು**


- ಚಿದಾನಂದಮೂರ್ತಿ ಎಂ. (2020). *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ 450–1150).* ಸಪ್ನ ಬುಕ್‌ಹೌಸ್.
- ಗೋಪಾಲ್ (ಸಂ.) ಬಾ.ರಾ (1976). *ಎಪಿಗ್ರಾಫಿಯ ಕರ್ನಾಟಿಕ ಸಂಪುಟ–5.* ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.
- ಮಂಜುಶ್ರೀ ಎಸ್.ಪಿ. (2018). *ಮೈಸೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ನಯನ ಪ್ರಕಾಶನ.
- ನಾಯಕ ಹಾ.ಮಾ. (ಸಂ.). *ಕನ್ನಡ ವಿಶ್ವಕೋಶ ಸಂಪುಟ–09.* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 4-8
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸ್ವಾತಂತ್ರ್ಯಪೂರ್ವ ಕರ್ನಾಟಕದ ಅಭಿವೃದ್ಧಿಯ ಮಾದರಿಗಳು

**ಕಿರಣ್ ಡಿ**
ಸಂಶೋಧನಾ ವಿದ್ಯಾರ್ಥಿ, ಗಾಂಧಿ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

***Abstract:***
*ಒಂದು ದೇಶದ ರಾಷ್ಟ್ರೀಯ ವರಮಾನ ಹಾಗೂ ತಲಾದಾಯ ಹೆಚ್ಚಿದ್ದರೆ ಅಭಿವೃದ್ಧಿ ಹೊಂದಿದೆ ಎಂದು ಪರಿಭಾವಿಸಲಾಗುತ್ತದೆ. ಆದರೆ ಕೇವಲ ರಾಷ್ಟ್ರೀಯ ಆದಾಯದ ಹೆಚ್ಚಳ ಹಾಗೂ ತಲಾ ಆದಾಯದ ಹೆಚ್ಚಳವನ್ನಷ್ಟೇ ಅಭಿವೃದ್ಧಿ ಎಂದು ವ್ಯಾಖ್ಯಾನಿಸಿದರೆ ಅದರ ವ್ಯಾಪ್ತಿ ಸಂಕುಚಿತವಾಗುತ್ತದೆ. ಸಮಾಜದಲ್ಲಿ ಎಲ್ಲಾ ವರ್ಗಗಳನ್ನೂ (ಬಡವರು, ಶ್ರೀಮಂತರು, ಮಧ್ಯಮ ವರ್ಗದವರು, ಮಹಿಳೆಯರು, ಪರಿಶಿಷ್ಟರು, ಅಲ್ಪಸಂಖ್ಯಾತರು), ಎಲ್ಲಾ ಪ್ರದೇಶಗಳನ್ನೂ (ಗುಡ್ಡಗಾಡು, ಗ್ರಾಮೀಣ, ಪಟ್ಟಣ, ನಗರ,) ಎಲ್ಲಾ ವೃತ್ತಿಗಳನ್ನೂ (ಕೃಷಿ, ಉದ್ದಿಮೆ, ಸೇವಾವಲಯ ಆಡಳಿತ ಇತ್ಯಾದಿ) ಮತ್ತು ಎಲ್ಲಾ ಲಿಂಗಗಳನ್ನೂ (ಮಹಿಳೆಯರು, ಪುರುಷರು ಮತ್ತು ಮೂರನೆಯ ಲಿಂಗಿಗಳು) ಅಭಿವೃದ್ಧಿಯು ಒಳಗೊಂಡಿರುತ್ತದೆ. ಪ್ರಸ್ತುತ ಲೇಖನದಲ್ಲಿ ಸ್ವಾತಂತ್ರ್ಯ ಪೂರ್ವ ಕರ್ನಾಟಕದ ಅಭಿವೃದ್ಧಿಯ ಮೇಲೆ ಬೆಳಕು ಚೆಲ್ಲಲಾಗಿದೆ.*

***Keywords:*** *ರಾಷ್ಟ್ರೀಯ ಆದಾಯ, ತಲಾದಾಯ, ಅಭಿವೃದ್ಧಿ, ಸ್ವಾತಂತ್ರ್ಯ ಪೂರ್ವಕಾಲ, ಅಭಿವೃದ್ಧಿ ಮಾದರಿಗಳು ಚುನಾವಣೆ.*

**ಪೀಠಿಕೆ**

ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದ ಎಲ್ಲಾ ಜಿಲ್ಲೆಗಳು ಏಕರೂಪ ಆಡಳಿತಕ್ಕೆ ಒಳಪಟ್ಟಿರಲಿಲ್ಲ. ಕರ್ನಾಟಕದ ವಿವಿಧ ಪ್ರದೇಶಗಳು ವಿವಿಧ ಆಡಳಿತ ವಿಭಾಗಕ್ಕೆ ಒಳಪಟ್ಟಿದ್ದವು. ಹಾಗೂ ವಿವಿಧ ಆಡಳಿತ ವಿಭಾಗಗಳಲ್ಲಿ ವಿವಿಧ ರೀತಿಯ ಅಭಿವೃದ್ಧಿಯ ಮಾದರಿಗಳಿದ್ದವು.

ದಕ್ಷಿಣ ಭಾರತದಲ್ಲಿ ವಿಜಯನಗರದ ಪತನದೊಂದಿಗೆ ಅನೇಕ ಸಂಸ್ಥಾನಗಳು ಏಳಿಗೆಗೆ ಬಂದವು. ಅವುಗಳಲ್ಲಿ 1399ರಲ್ಲಿ ಸ್ಥಾಪನೆಯಾದ ಮೈಸೂರು ರಾಜ್ಯವು ಒಂದು. 1761ರಲ್ಲಿ ಹೈದರಾಲಿಯು ದಕ್ಷಿಣದಲ್ಲಿ ಮುಸ್ಲಿಂ ಅಧಿಪತ್ಯವನ್ನು ಸ್ಥಾಪಿಸಿದನು. 1761 ರಿಂದ 1799 ರವರೆಗೆ ಹೈದರ್ ಹಾಗೂ ಟೀಪು ವಸಾಹತುಶಾಹಿ ವಿರೋಧದ ನಡುವೆಯೂ ರಾಜ್ಯವನ್ನು ವಿಸ್ತರಿಸಿದರು.

ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಟೀಪು ಮಡಿದ ನಂತರ ಕರ್ನಾಟಕವನ್ನು ಬ್ರಿಟಿಷರು ತಮ್ಮ ಅನುಕೂಲಕ್ಕೆ ತಕ್ಕಂತೆ ಹಲವು ಭಾಗಗಳಾಗಿ ವಿಭಾಗಿಸಿ ವಿವಿಧ ಆಡಳಿತಗಳಿಗೆ ಒಳಪಡಿಸಿದರು. ಮೈಸೂರು ರಾಜ್ಯದ ಉತ್ತರದ ಭಾಗಗಳು ಮರಾಠರ ಅಧೀನಕ್ಕೆ ಒಳಪಟ್ಟವು. ಬ್ರಿಟಿಷರು 1818 ರಲ್ಲಿ ಪೇಶ್ವೆಗಳಿಂದ ಧಾರವಾಡ, ಬಿಜಾಪುರ ಮತ್ತು ಬೆಳಗಾವಿ ಪ್ರದೇಶವನ್ನು ವಶಪಡಿಸಿಕೊಂಡು ಅವುಗಳನ್ನು ಬಾಂಬೆ ಸಂಸ್ಥಾನದಲ್ಲಿ ವಿಲೀನಗೊಳಿಸಿದರು. ಕರ್ನಾಟಕದ ಕರಾವಳಿ ಪ್ರದೇಶ

***Please cite this article as:*** ಕಿರಣ್ ಡಿ. (2024). ಸ್ವಾತಂತ್ರ್ಯಪೂರ್ವ ಕರ್ನಾಟಕದ ಅಭಿವೃದ್ಧಿಯ ಮಾದರಿಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 4–8

ಮತ್ತು ಬಳ್ಳಾರಿ ಜಿಲ್ಲೆಗಳನ್ನು 1800ರಲ್ಲಿ ಮದರಾಸು ಸಂಸ್ಥಾನಕ್ಕೆ ಸೇರಿಸಿದರು. ಕರ್ನಾಟಕದ ಕರಾವಳಿ ಪ್ರದೇಶವನ್ನು 1862 ರಲ್ಲಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡೆಂದು ವಿಭಾಗಿಸಿ ಉತ್ತರ ಕನ್ನಡವನ್ನು ಬಾಂಬೆ ಸಂಸ್ಥಾನಕ್ಕೂ ಹಾಗೂ ದಕ್ಷಿಣ ಕನ್ನಡವನ್ನು ಮದರಾಸು ಸಂಸ್ಥಾನಕ್ಕೆ ಸೇರಿಸಿದರು. ಕೊಡಗು ಪ್ರಾಂತ್ಯವನ್ನು 1834 ರಲ್ಲಿ ವಶಪಡಿಸಿಕೊಂಡು ಅದರ ಆಡಳಿತವನ್ನು ಮದ್ರಾಸ್ ಗೌರ್ನರ್ ನೇತೃತ್ವದ ಚೀಫ್ ಆಫ್ ಕಮಿಷನರ್ ವಶಕ್ಕೆ ನೀಡಿದರು. ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಜಿಲ್ಲೆಗಳನ್ನು ಹೈದರಾಬಾದ್ ನಿಜಾಮನ ಸಂಸ್ಥಾನಕ್ಕೆ ನೀಡಿದರು. ಹಾಗೂ ಹಳೆಯ ಮೈಸೂರು ಜಿಲ್ಲೆಗಳನ್ನು ಪುನಃ ಒಡೆಯರಿಗೆ ನೀಡಲಾಯಿತು.

ಹೀಗೆ ವಿವಿದ ಆಡಳಿತ ವಿಭಾಗಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ವಿವಿದ ರೀತಿಯ ಅಭಿವೃದ್ಧಿ ಮಾದರಿಗಳನ್ನು ಕಾಣಬಹುದು (ಟಿ. ಆರ್. ಚಂದ್ರಶೇಖರವರು ಗುರುತಿಸಿರುವಂತೆ) ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ 3 ರೀತಿಯ ಅಭಿವೃದ್ಧಿ ಮಾದರಿಗಳಿದ್ದವು.

- ಕರ್ನಾಟಕದ ಮೈಸೂರು ಪ್ರಾಂತ್ಯದಲ್ಲಿದ್ದ (ಸರ್ ಎಮ್ ವಿಶ್ವೇಶ್ವರಯ್ಯ) ಅಭಿವೃದ್ಧಿ ಮಾದರಿ.
- ಕರ್ನಾಟಕದ ಬ್ರಿಟಿಷ್ ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ.
  - *ಕರ್ನಾಟಕದ ಬಾಂಬೆ ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ*
  - *ಕರ್ನಾಟಕದ ಮದರಾಸು ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ*
- ಕರ್ನಾಟಕದ ಹೈದರಾಬಾದ್ ಪ್ರಾಂತ್ಯದಲ್ಲಿದ್ದ ಅರಸೊತ್ತಿಗೆ ಸಾಮ್ರಾಜ್ಯಶಾಹಿ ಅಭಿವೃದ್ಧಿ ಮಾದರಿ.

ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಮೂರು ಪ್ರದೇಶಗಳಲ್ಲಿ ಮೂರು ವಿಧದ ಅಭಿವೃದ್ಧಿ ಮಾದರಿಗಳ ಪ್ರಯೋಗ ನಡೆದದ್ದನ್ನು ಗುರುತಿಸಬಹುದಾಗಿದೆ. 1881 ರಿಂದ 1950ರ ವರೆಗೆ ಮೈಸೂರು ಪ್ರಾಂತ್ಯ ಶಾಂತಿ ಸಮೃದ್ಧತೆ, ಸೌಹಾರ್ದತೆ ಅಭಿವೃದ್ಧಿಯನ್ನು ಅನುಭವಿಸಿದರೆ, ಮುಂಬೈ ಕರ್ನಾಟಕದ ಪ್ರದೇಶವು 1850–1947 ರವರೆಗೆ ಒಂದು ರೀತಿಯಲ್ಲಿ ವಸಾಹತುಶಾಹಿ ಆಡಳಿತವನ್ನು ಅನುಭವಿಸಿತು ಮತ್ತು ಅನೇಕ ಬರಗಳಿಂದ ಕೂಡಿತು.

ಭೂಮಾಲಿಕತ್ವದ ದೃಷ್ಟಿಯಿಂದ ಮೈಸೂರು ಪ್ರಾಂತ್ಯದಲ್ಲಿ ರೈತಾಪಿ ವ್ಯವಸ್ಥೆಯಿದ್ದರೆ ಬಾಂಬೆ ಕರ್ನಾಟಕ ಪ್ರದೇಶದಲ್ಲಿ ಜಮೀನ್ದಾರಿ ಪದ್ಧತಿ ಜಾರಿಯಲ್ಲಿತ್ತು ಆದರೆ ಹೈದರಬಾದ್ ಕರ್ನಾಟಕ ಪ್ರದೇಶದಲ್ಲಿ ಉಳಿಗಮಾನ್ಯ ವ್ಯವಸ್ಥೆಯ ಆಳ್ವಿಕೆಯಿತ್ತು.

**ಮೈಸೂರು ರಾಜ್ಯದ ಅಭಿವೃದ್ಧಿ ಮಾದರಿ**

ಅಭಿವೃದ್ಧಿ ಮತ್ತು ಆಡಳಿತದ ದೃಷ್ಟಿಯಿಂದ ಮೈಸೂರು ಸಂಸ್ಥಾನದಲ್ಲಿ ಅತ್ಯಂತ ಅನುಕೂಲ ಸ್ಥಿತಿಯಿತ್ತು. ಚಾರಿತ್ರಿಕವಾಗಿ ಅಭಿವೃದ್ಧಿಯ ಪ್ರಯತ್ನಗಳು ವ್ಯವಸ್ಥಿತವಾಗಿ ಆರಂಭವಾದವು ಟಿ.ಆರ್ ಚಂದ್ರಶೇಖರ್ ರವರು 1881ರಿಂದ 1950ರವರೆಗಿನ ಅವಧಿಯಲ್ಲಿ ಮೈಸೂರು ಸಂಸ್ಥಾನ ಅನುಸರಿಸಿಕೊಂಡು ಬಂದ ಅಭಿವೃದ್ಧಿ ಪ್ರಕ್ರಿಯೆಯನ್ನು ಸರ್ ಎಮ್ ವಿಶ್ವೇಶ್ವರಯ್ಯ ಅಭಿವೃದ್ಧಿ ಮಾದರಿ ಎಂದು ಕರೆದಿದ್ದಾರೆ. ಸರ್ ಎಮ್ ವಿಶ್ವೇಶ್ವರಯ್ಯ ಅಭಿವೃದ್ಧಿ ಮಾದರಿ ಎನ್ನುವದು ಸರಿಯಾಗಿ ಅಮೇರಿಕಾ, ಇಂಗ್ಲೆಂಡ್, ಜರ್ಮನಿ, ಜಪಾನ್ ಮುಂತಾದ ದೇಶಗಳು ತಮ್ಮ ಆರ್ಥಿಕತೆಗಳ ಅಭಿವೃದ್ಧಿಗೆ ಅಂದು ಅಳವಡಿಸಿಕೊಂಡಿದ್ದ ಮಾದರಿಯೇ ಅದಾಗಿತ್ತು. ಅಭಿವೃದ್ಧಿ ವರಮಾನದ ಏರಿಕೆಗಳು ಉತ್ಪಾದನೆಯಲ್ಲಿನ ಏರಿಕೆ ತಮ್ಮಷ್ಟಕ್ಕೆ ತಾವು ಸಮಾಜದಲ್ಲಿನ ಬಡತನ, ಹಸಿವು, ಅಸಮಾನತೆಗಳನ್ನು ನಿವಾರಿಸಿ ಬಿಡುತ್ತವೆ ಎಂಬುದರಲ್ಲಿ ಸರ್ ಎಮ್ ವಿಶ್ವೇಶ್ವರಯ್ಯನವರಿಗೆ ವಿಶ್ವಾಸವಿತ್ತು.

1881 ರಿಂದ 1947 ರವರೆಗೆ ಮೈಸೂರಿನಲ್ಲಿ ಬ್ರಿಟಿಷರ ಅಪ್ರತ್ಯಕ್ಷ ಆಡಳಿತವಿತ್ತು. ದಿವಾನ್ ಪೂರ್ಣಯ್ಯನ ದಿವಾನಗಿರಿ ಕಾಲದಲ್ಲಿ ರೆವಿನ್ಯೂ ಸಂಗ್ರಹಕ್ರಮ ಸುವ್ಯವಸ್ಥಿತಗೊಂಡಿತು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನ ಸುವರ್ಣಯುಗವನ್ನು ಕಂಡಿತು. ಸರ್ ಎಂ ವಿಶ್ವೇಶ್ವರಯ್ಯನವರು ತಮ್ಮ ದಿವಾನ ಪದವಿಯ ಅವಧಿಯಲ್ಲಿ ಕೈಗಾರೀಕರಣ ಕಾರ್ಯಕ್ರವನ್ನು ಅನುಷ್ಠಾನಗೊಳಿಸಿದರು. ಪೌರವಾದ, ರಾಷ್ಟ್ರೀಯವಾದ, ಕೈಗಾರೀಕರಣ ಮುಂತಾದ ವಿಚಾರಗಳನ್ನು ಆಧಾರವಾಗಿಟ್ಟುಕೊಂಡು ಮೈಸೂರು ಸಂಸ್ಥಾನ ತನ್ನ ಆರ್ಥಿಕ ಕಾರ್ಯಕ್ರಮಗಳನ್ನು ರೂಪಿಸಿತು.

**ಮೈಸೂರು ಸಂಸ್ಥಾನದ ಅಭಿವೃದ್ಧಿಯ ಕೆಲವು ಹೆಗ್ಗುರುತುಗಳು**

- 1881 ಇಡೀ ದೇಶದಲ್ಲಿ ಪ್ರಥಮ ಎನ್ನಬಹುದಾದ ಜನಪ್ರತಿನಿದಿ ಸಭೆ
- 1904 ಇಡೀ ದೇಶದಲ್ಲಿ ಪ್ರಥಮ ಜಲವಿದ್ಯುತ್ ಯೋಜನೆ
- 1916 ಮೈಸೂರು ವಿಶ್ವವಿದ್ಯಾನಿಲಯ
- 1915 ದಲಿತ ಮಕ್ಕಳಿಗೆ ಶಾಲೆಯಲ್ಲಿ ಪ್ರವೇಶ
- 1913 ಮೈಸೂರು ಬ್ಯಾಂಕ್
- 1911 ಮೈಸೂರು ಎಕನಾಮಿಕ್ ಕಾನ್ಸರೆನ್ಸ್
- 1892 ಮೈಸೂರು ಸಿವಿಲ್ ಸರ್ವಿಸ್

**ಕರ್ನಾಟಕದ ಬ್ರಿಟಿಷ್ ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ**

**1. ಮದರಾಸು ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ :**

ಕರಾವಳಿ ಜಿಲ್ಲೆಗಳಾದ ಉಡುಪಿ, ಕಾಸರಗೂಡು, ಮಂಗಳೂರು ಹಾಗೂ ಬಯಲು ಪ್ರದೇಶವಾದ ಬಳ್ಳಾರಿಯು ಮದರಾಸು ಪ್ರಾಂತ್ಯದ ಭಾಗಗಳಾಗಿದ್ದವು. ಇಲ್ಲಿನ ಮುಖ್ಯ ಕಸುಬು ಕೃಷಿ. ಕೃಷಿಯಲ್ಲಿ ಭೂಮಾಲೀಕತ್ವಕ್ಕೆ ಸಂಬಂಧಿಸಿದಂತೆ ವಸಾಹತು ಸರ್ಕಾರವು ಅನೇಕ ಬಗೆಯ ಬದಲಾವಣೆಗಳನ್ನು ಜಾರಿಗೊಳಿಸಿತು. ವಸಾಹತು ಸರ್ಕಾರಕ್ಕೆ ಕೃಷಿಯು ಕೇವಲ ಕಂದಾಯ ತರುವ ಮೂಲವಾಗಿತ್ತು ಗೋದಾವರಿ ಮತ್ತು ಕೃಷ್ಣಾ ನದಿ ನೀರಾವರಿಯಿಂದ ರೈತರ ಆದಾಯ ಏರಿಕೆಯಾಗುತಿತ್ತು. ಥಾಮಸ್ ಮನ್ರಿ ಇಲ್ಲಿ ರೈತಾಪಿ ಭೂಮಾಲೀಕತ್ವವನ್ನು ಜಾರಿಗೊಳಿಸಿ ಮದ್ಯವರ್ತಿಗಳ ಹಾವಳಿಯನ್ನು ತಪ್ಪಿಸಿದನು. ಆದರೆ ಭೂಕಂದಾಯ ವ್ಯವಸ್ಥೆಯು ಅತ್ಯಂತ ಕ್ರೂರವಾಗಿತ್ತು.

ಒಂದು ಕಡೆ ವಸಾಹತು ಸರ್ಕಾರದ ನೀತಿಗಳು ಕೃಷಿಯ ಮೇಲೆ ಮತ್ತು ಸಂಪ್ರದಾಯಿಕ ವೃತ್ತಿಗಳ ಮೇಲೆ ದುಷ್ಪರಿಣಾಮ ಉಂಟು ಮಾಡಿತು. ಆದರೆ ಬ್ರಿಟಿಷ್ ಆಡಳಿತ ಫಲವಾಗಿ ಶಿಕ್ಷಣವು ಸಮಾಜದ ಕೆಳಸ್ತರದವರಿಗೂ ದೊರಕಿತು. 1863 ರಲ್ಲಿ ಮದರಾಸು ಪ್ರಾಂತ್ಯದಲ್ಲಿ ದಿ ಮದರಾಸ್ ಎಜುಕೇಶನ್ ಆಕ್ಟ್ ಜಾರಿಗೆ ತಂದು ಶಿಕ್ಷಣಕ್ಕೆ ಪ್ರೋತ್ಸಾಹಿಸಲಾಯಿತು.

**2. ಬಾಂಬೆ ಪ್ರಾಂತ್ಯದಲ್ಲಿದ್ದ ವಸಾಹತುಶಾಹಿ ಅಭಿವೃದ್ಧಿ ಮಾದರಿ**

ಕರ್ನಾಟಕದ ಕನ್ನಡ ಮಾತನಾಡುವ ಜಿಲ್ಲೆಗಳಾದ ವಿಜಾಪುರ, ಧಾರವಾಡ, ಉತ್ತರಕನ್ನಡ ಮತ್ತು ಬೆಳಗಾವಿ ಜಿಲ್ಲೆಗಳು ಸ್ವಾತಂತ್ರ್ಯಕ್ಕೂ ಮುನ್ನ ಬಾಂಬೆ ಪ್ರಾಂತ್ಯದ ಅಧೀನದಲ್ಲಿದ್ದವು. ಅದನ್ನು ದಕ್ಷಿಣ ಮರಾಠ ಪ್ರದೇಶವೆಂದು ಕರೆಯಲಾಗುತಿತ್ತು. ವಸಾಹತು ಸರ್ಕಾರವು ತಮ್ಮ ಆಡಳಿತಕ್ಕೆ ತೆರಿಗೆ ಸಂಗ್ರಹಕ್ಕೆ ಅನುಕೂಲವಾಗುವ ರೀತಿಯಲ್ಲಿ ಪ್ರದೇಶಗಳನ್ನು ವಿವಿಧ ಆಡಳಿತ ವಿಭಾಗಗಳಲ್ಲಿ ಹಂಚಿಕೆ ಮಾಡಿದ್ದರು. ಅಲ್ಲಿ ಕನ್ನಡಿಗರು ಅಲ್ಪಸಂಖ್ಯಾತರಾಗಿದ್ದು, ಮರಾಠಿಯು ಪ್ರಧಾನ ಭಾಷೆಯಾಗಿತ್ತು.

ಯಾವ ಪ್ರದೇಶಗಳು ಅಭಿವೃದ್ಧಿಯಲ್ಲಿ ಹಿಂದೆ ಬಿದ್ದಿದ್ದವೋ, ಸಂಪನ್ಮೂಲಗಳ ಕೊರತೆಯನ್ನು ಅನುಭವಿಸುತ್ತಿದ್ದವೋ ಅವುಗಳ ಬಗ್ಗೆ ವಸಾಹತು ಆಡಳಿತ ಯಾವ ಗಮನವನ್ನೂ ನೀಡಲಿಲ್ಲ. ಕೈಗಾರಿಕೆಗಳ ಅಭಿವೃದ್ಧಿ ಎನ್ನುವುದು ಅಲ್ಲಿ ಆದ್ಯತೆಯ ಸಂಗತಿಯಾಗಿರಲಿಲ್ಲ. ಕೈಗಾರಿಕೆಗಳು ಆರಂಭವಾಗುತ್ತಿದ್ದವು ಆದರೆ ಅವು ಪ್ರಾಸಂಗಿಕವಾಗಿದ್ದವೇ ವಿನಾಃ ಸರ್ಕಾರದ ಪ್ರೋತ್ಸಾಹದ ಪರಿಣಾಮಕಾರಿಯಾಗಿರಲಿಲ್ಲ. ಜೊತೆಗೆ 19ನೇ ಶತಮಾನದಲ್ಲಿ ಬಿಜಾಪುರ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳು ತೀವ್ರವಾದ ಬರಗಳನ್ನು ಎದುರಿಸಿದವು.

**ಹೈದರಾಬಾದ್ ಕರ್ನಾಟಕ ಪ್ರದೇಶದ ಅಭಿವೃದ್ಧಿ ಮಾದರಿ**

ಕರ್ನಾಟಕದ ಬೀದರ್, ಗುಲ್ಬರ್ಗಾ (ಯಾದಗಿರಿ), ರಾಯಚೂರು (ಕೊಪ್ಪಳ) ಜಿಲ್ಲೆಗಳು ಹೈದರಾಬಾದ್ ನಿಜಾಮನ ಅಧೀನದಲ್ಲಿದ್ದವು. ಟೀಪು ಸುಲ್ತಾನನ ಮರಣದ ನಂತರದಿಂದ ಹಿಡಿದು 1956ರ ವರೆಗೂ ಅವು ಹೈದರಾಬಾದ್ ಸಂಸ್ಥಾನದ ಅಧೀನಕ್ಕೆ ಒಳಪಟ್ಟಿದ್ದವು. 1724ರಲ್ಲಿ ನಿಜಾಂ ಅಲಿಖಾನ್‌ನಿಂದ ಸ್ಥಾಪಿತವಾದ ಹೈದರಾಬಾದ್ ಸಂಸ್ಥಾನದಲ್ಲಿ 85% ಪ್ರಜೆಗಳು ಹಿಂದುಗಳಾಗಿದ್ದರು. ಇನ್ನುಳಿದ ಶೇ.10 ರಿಂದ 15 ರಷ್ಟು ಮುಸ್ಲಿಂ ಸಮುದಾಯದವರಿದ್ದರು. ಸಂಸ್ಥಾನದ ಆಡಳಿತ ಭಾಷೆ ಉರ್ದು ಆಗಿತ್ತು. ಕರ್ನಾಟಕದ ಶೇ.22 ರಷ್ಟು ಈ ಪ್ರಾಂತ್ಯದ ವ್ಯಾಪ್ತಿಗೆ ಒಳಪಟ್ಟಿತ್ತು ಹಾಗೂ ಕನ್ನಡ ಭಾಷಿಕರ ಸಂಖ್ಯೆ ಶೇ.12 ರಷ್ಟಿತ್ತು.

ಇಲ್ಲಿ ಅರಸೊತ್ತಿಗೆ ಸಾಮ್ರಾಜ್ಯಶಾಹಿ ಅಭಿವೃದ್ಧಿ ಮಾದರಿ ಇತ್ತು. ಈ ಸಂಸ್ಥಾನದ ವಿಶೇಷತೆಯೆಂದರೆ ನೇರ ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟಿರಲಿಲ್ಲ. ಇಲ್ಲಿ ಬ್ರಿಟಿಷರ ಅಪ್ರತ್ಯಕ್ಷ ಆಳ್ವಿಕೆಯಿತ್ತು. ಇದು ಸಹಾಯಕ ಸೈನ್ಯಪದ್ಧತಿಗೆ ಒಳಗಾದ ಮೊದಲ ಸಂಸ್ಥಾನವಾಗಿತ್ತು ಹಾಗಾಗಿ ಸಂಸ್ಥಾನದ ಎಲ್ಲಾ ಆಗು–ಹೋಗುಗಳ ಮೇಲೆ ಬ್ರಿಟಿಷರ ನಿಯಂತ್ರಣವಿತ್ತು.

ಸಾಲಾರ್ ಜಂಗ್ ಹೈದರಾಬಾದ್ ಸಂಸ್ಥಾನದ ದಿವಾನರಾಗಿ ಸುಮಾರು 40 ವರ್ಷಗಳ ಕಾಲ ಆಡಳಿತ ನಡೆಸಿದರು. ಇವರ ಆಡಳಿತಾವಧಿಯಲ್ಲಿ ಅನೇಕ ಸಾಮಾಜಿಕ ಸುಧಾರಣೆಗಳು ಅಭಿವೃದ್ಧಿ ಕಾರ್ಯಗಳು ನಡೆದವು. ಶಿಕ್ಷಣದ ಬೆಳವಣಿಗೆಗೆ ಮಹತ್ವ ನೀಡಿದ್ದರಿಂದ ಇವನ ಆಳ್ವಿಕೆಯ ಕಾಲದಲ್ಲಿ ಉದ್ದಿಮೆಗಳು, ವ್ಯಾಪಾರ, ನಾಗರಿಕ ಸೌಲಭ್ಯಗಳು ತೀವ್ರ ಬೆಳವಣಿಗೆ ಕಂಡವು.

ಹೈದರಾಬಾದ್ ನಿಜಾಮ ಸಂಸ್ಥಾನವು ಜನಸಂಖ್ಯೆ ಮತ್ತು ರೆವಿನ್ಯೂ ಸಂಗ್ರಹ ದೃಷ್ಟಿಯಲ್ಲಿ ಭಾರತದಲ್ಲಿದ್ದ ಅತಿದೊಡ್ಡ ರಾಜ ಸಂಸ್ಥಾನವಾಗಿತ್ತು. ಅದರ ಜನಸಂಖ್ಯೆಯು 144.36 ಲಕ್ಷ ಮತ್ತು ರೆವಿನ್ಯೂ ಸಂಗ್ರಹ ವಾರ್ಷಿಕ ರೂ 842.72 ಲಕ್ಷ. ಅಂದು ಮೈಸೂರು ಸಂಸ್ಥಾನದಲ್ಲಿದ್ದ ಜನಸಂಖ್ಯೆ 65.57 ಲಕ್ಷ ಮತ್ತು ಅದರ ರೆವಿನ್ಯೂ ಸಂಗ್ರಹ 354.41 ಲಕ್ಷ. ಇದು ಮೂಲಭೂತವಾಗಿ ಅರಸೊತ್ತಿಗೆ ಅಭಿವೃದ್ಧಿ ಮಾದರಿ. ಇಲ್ಲಿದ್ದುದು ಒಂದು ರೀತಿಯ ನಿರಂಕುಶ ಆಡಳಿತ. ಇಲ್ಲಿ ಜನರ ಸಹಭಾಗಿತ್ವಕ್ಕೆ ಯಾವುದೇ ಅವಕಾಶವಿರಲಿಲ್ಲ. ಪ್ರಭುತ್ವಕ್ಕೆ ಪೂರಕವಾಗಿ ಊಳಿಗಮಾನ್ಯ ಉತ್ಪಾದನಾ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಹೈದ್ರಾಬಾದ್ ಪ್ರಾಂತ್ಯದಲ್ಲಿ ಒಟ್ಟು ಸಾಗುವಳಿ ಭೂಮಿ 531 ಲಕ್ಷ ಎಕರೆಯಿತ್ತು. ಅದರಲ್ಲಿ 300 ಲಕ್ಷ ಎಕರೆ ಕಂದಾಯ, 150 ಲಕ್ಷ ಎಕರೆ ಜಾಗೀರುದಾರರ, 80 ಲಕ್ಷ ಎಕರೆ ನಿಜಾಮನ ಸ್ವಂತ ಭೂಮಿಯಾಗಿತ್ತು. ಇದರಿಂದಾಗಿ ಇಲ್ಲಿ ಅರಸೊತ್ತಿಗೆ ಅಭಿವೃದ್ಧಿ ಮಾದರಿ ಕಾಣುತ್ತದೆ ಹಾಗೂ ಇಲ್ಲಿ ಊಳಿಗಮಾನ್ಯ ಸ್ವರೂಪ ಪಡೆದಿರಬಹುದು.

ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ವಿವಿಧ ರೀತಿಯ ಅಭಿವೃದ್ಧಿ ಮಾದರಿಗಳಿದ್ದವು ಎಂಬುದು ನಿರ್ವಿವಾದ. ಒಂದು ಪ್ರದೇಶದ ಅಭಿವೃದ್ಧಿಯು ಅಲ್ಲಿನ ಆಡಳಿತ, ಸರ್ಕಾರ ಹಾಗೂ ಭೌಗೋಳಿಕ ಅಂಶಗಳ ಮೇಲೆ ನಿರ್ಧಾರವಾಗುತ್ತದೆ. ಸ್ವಾತಂತ್ರ

ಪೂರ್ವದಲ್ಲಿ ಮೈಸೂರು ಸಂಸ್ಥಾನವು ತನ್ನ ಅಭಿವೃದ್ಧಿಯಿಂದಾಗಿ ಮಾದರಿ ರಾಜ್ಯ ಎನಿಸಿಕೊಂಡಿತು. ಇದರ ಅಭಿವೃದ್ಧಿಗೆ ಅಲ್ಲಿನ ದಿವಾನರುಗಳ ಹಾಗೂ ಒಡೆಯರುಗಳ ಸಮರ್ಥವಾದ ಆಳ್ವಿಕೆಯೇ ಕಾರಣವಾಗಿತ್ತು. ಆದರೆ ಹೈದರಾಬಾದ್ ಕರ್ನಾಟಕದಲ್ಲಿ ಒಂದು ರೀತಿಯ ನಿರಂಕುಶ ಆಳ್ವಿಕೆಯಿಂದಾಗಿ ಅಲ್ಲಿ ಅರಸೊತ್ತಿಗೆ–ಸಾಮ್ರಾಜ್ಯಶಾಹಿ ಅಭಿವೃದ್ಧಿ ಮಾದರಿ ಇತ್ತು. ನಿಜಾಮರು ಪ್ರಜೆಗಳ ಆಶೋತ್ತರಗಳಿಗೆ ಹೆಚ್ಚು ಒತ್ತು ನೀಡದೆ ತಮ್ಮ ಸುಖಗಳಲ್ಲಿಯೇ ಹೆಚ್ಚು ಕಾಲ ಕಳೆಯುತ್ತಿದ್ದರು. ಅಲ್ಲದೇ ಭೂಮಿಯು ಸಹ ಉಳುವವರಲ್ಲಿ ಹೆಚ್ಚು ಹಂಚಿಕೆಯಾಗದೇ ಒಂದು ರೀತಿಯ ಉಳಿಗಮಾನ್ಯ ವ್ಯವಸ್ಥೆಯಂತಿದ್ದು ತೀರಾ ಹಿಂದುಳಿದಿತ್ತು. ಈಗಲೂ ಸಹ ಆ ಪ್ರದೇಶ ಹಿಂದುಳಿದಿರುವಿಕೆಗೆ ನಿಜಾಮರ ಅಸಮರ್ಥ ಆಳ್ವಿಕೆಯೇ ಕಾರಣವಾಗಿದೆ ಜೊತೆಗೆ ಬಾಂಬೆ ಮತ್ತು ಮದರಾಸು ಪ್ರಾಂತಗಳಲ್ಲಿ ವಸಾಹತುಶಾಹಿ ಅಭಿವೃದ್ಧಿ ಮಾದರಿ ಇತ್ತು. ಇಲ್ಲಿ ವಸಾಹತುಶಾಹಿಗಳ ದಬ್ಬಾಳಿಕೆಯಿಂದ ಅಭಿವೃದ್ಧಿಯು ಮಧ್ಯಮ ಸ್ಥಿತಿಯಲ್ಲಿತ್ತು.

**ಪರಾಮರ್ಶನ ಗ್ರಂಥಗಳು**


- A Narayana, & A Narayana. (2022, August 14). *Karnataka paradox: Economic modernity versus depravity*. Deccan Herald. https://www.deccanherald.com
- Datla, K. S. (2015). The origins of indirect rule in India: Hyderabad and the British Imperial Order. *Law and History Review*, *33*(2), 321–350.
- Developments in the 19th and 20th Century (n.d). https://gazetteer.karnataka.gov.in/storage/pdf-
- Karmarkar, A. P. (1947). *Cultural history of Karnataka: Ancient and Medieval*.
- Know our patron Nalwadi Krishnaraja Wadiyar. (2021). In *Century Club*. https://circulars.centuryclub.in
- Sheshidhar, M. (2012). *Historical places in Hyderabad Karnataka*.
- Wilks, M. (1996). *History of Mysore*. Asian Educational Services.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 9-13
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕುವೆಂಪು ಅವರ 'ಜಲಗಾರ' ನಾಟಕ: ಒಂದು ವಿಶ್ಲೇಷಣೆ

**ಜಯಕೀರ್ತಿ**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ.

**Abstract:**
*ಕುವೆಂಪು ಇಪ್ಪತ್ತನೆಯ ಶತಮಾನ ಕಂಡ ದೈತ್ಯ ಪ್ರತಿಭೆ. ವರಕವಿ ಬೇಂದ್ರೆಯವರಿಂದ 'ಯುಗದ ಕವಿ ಜಗದ ಕವಿ ಎನಿಸಿಕೊಂಡವರು. ವಿಶ್ವಮಾನವ ಸಂದೇಶ ನೀಡಿದವರು. ಕನ್ನಡದ ಎರಡನೆಯ 'ರಾಷ್ಟ್ರಕವಿ' ಜ್ಞಾನಪೀಠ ಪ್ರಶಸ್ತಿಯನ್ನೂ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಮೊದಲ ಬಾರಿಗೆ ಕನ್ನಡಕ್ಕೆ ತಂದುಕೊಟ್ಟವರು. ಕರ್ನಾಟಕ ರತ್ನ, ಪಂಪ ಪ್ರಶಸ್ತಿಗಳನ್ನು ಮೊದಲ ಬಾರಿಗೆ ಪಡೆದವರು. ನವೋದಯ ಸಾಹಿತ್ಯ ಸಂದರ್ಭದಲ್ಲಿ ಸಾಂಸ್ಕೃತಿಕ ರೂವಾರಿಯಾಗಿ ಕುವೆಂಪು ರವರಿಗೆ ವಿಶಿಷ್ಟ ಸ್ಥಾನಮಾನವಿದೆ. ಆಧುನಿಕ ಕನ್ನಡ ಸಾಹಿತ್ಯದ ಮೊದಲ ಶ್ರೇಷ್ಠ ಅವೈದಿಕ ಪ್ರತಿಭೆಯಾದ ಕುವೆಂಪು ತನ್ನ ಕಾಲದ ಸಾಂಸ್ಕೃತಿಕ ಯಜಮಾನಿಕೆಯ ವಿರುದ್ಧ, ಪುರೋಹಿತಶಾಹಿ ವ್ಯವಸ್ಥೆಯ ವಿರುದ್ಧ, ಪ್ರಧಾನ ಸಂಸ್ಕೃತಿ ಪ್ರತಿಪಾದಿಸುತ್ತಿದ್ದ ಮೌಲ್ಯಗಳ ವಿರುದ್ಧ ಸೆಣಸಬೇಕಾಯಿತು. ಭಿನ್ನ ಜಗತ್ತಿನಿಂದ ಬಂದ ಅವರು ಪ್ರಬಲವಾಗಿ ಬೇರೂರಿದ್ದ ಸಾಂಸ್ಥಿಕ ಶಕ್ತಿಯನ್ನು ಸೃಜನಶೀಲ ನೆಲೆಯಲ್ಲಿ ಸಮರ್ಥವಾಗಿ ಎದುರಿಸಿದರಿಂದ ಸಾಂಸ್ಕೃತಿಕವಾಗಿ ಅವರಿಗೆ ಅತ್ಯಂತ ಪ್ರಮುಖ ಸ್ಥಾನವಿದೆ. ಈ ಹಿನ್ನಲೆಯಲ್ಲಿ ಕುವೆಂಪುರವರ ಜಲಗಾರ ನಾಟಕ ಕುರಿತು ಪ್ರಸ್ತುತ ಲೇಖನದಲ್ಲಿ ವಿವರಿಸಲಾಗಿದೆ.*

**Keywords:** *ಕನ್ನಡ ಸಾಹಿತ್ಯ, ಕುವೆಂಪು, ಜಲಗಾರ, ರೈತ, ನೇಗಿಲಯೋಗಿ.*

## ಪೀಠಿಕೆ

ಕುವೆಂಪು ಅವರ ಜಲಗಾರ ನಾಟಕ ಮುಖ್ಯ ಕೃತಿಯಾಗಿದೆ. ಈ ನಾಟಕದಲ್ಲಿ ವೈಯಕ್ತಿಕವಾಗಿ ಅನುಭವಿಸಿದ ನೋವನ್ನೆ ವಸ್ತುವಾಗಿ ಮಾಡಿಕೊಂಡು ತಾತ್ವಿಕ ನೆಲೆಯಲ್ಲಿ ಪ್ರಶ್ನಿಸುವ ಪ್ರಯತ್ನ ಮಾಡಿದ್ದಾರೆ. ಓದು–ಬರಹದಿಂದ ವಂಚಿತರಾಗಿದ್ದ ಜನ ಸಮುದಾಯದ ಪ್ರತಿನಿಧಿಯಾಗಿ ವ್ಯವಸ್ಥೆಗೆ ಮುಖಾಮುಖಿಯಾಗಿದ್ದಾರೆ. ಯಜಮಾನ್ಯ ಸಂಸ್ಕೃತಿಗೆ ಪರ್ಯಾಯವಾದ ಸಾಧ್ಯತೆಗಳನ್ನು ಕಲ್ಪಿಸುವ ಚಿಂತನೆಯನ್ನು ಜಲಗಾರ ನಾಟಕದ ಮೂಲಕ ಮಾಡಿದ್ದಾರೆ.

ಧರ್ಮ ಹಾಗೂ ರಾಜಕೀಯ ಅನಾದಿಕಾಲ ದಿಂದಲೂ ಸಮಾಜವನ್ನು ತಮ್ಮ ನಿಯಂತ್ರಣದಲ್ಲಿರಿಸಿ ಕೊಂಡಿವೆ. ಇವೆರಡು ಸಹ ಅಧಿಕಾರದ ಕೇಂದ್ರಗಳು. ಪ್ರಸ್ತುತ ಸಂದರ್ಭದಲ್ಲೂ, ನಮ್ಮ ಸಾಮಾಜಿಕ ಬದುಕಿನ ಮೇಲೆ ಇವು ಬೀರುತ್ತಿರುವ ಪ್ರಭಾವ ಅಪಾರವಾದುದಾಗಿದೆ. ಭಾರತ ದೇಶದ ಶ್ರೇಣೀಕರಣ ವ್ಯವಸ್ಥೆಯ ಸಾಮಾಜಿಕ ರಚನೆಯಲ್ಲಿ ಮೇಲ್ವರ್ಗದಲ್ಲಿರುವವರಿಗೆ ಮಾತ್ರ ಇವೆರಡನ್ನು ನಿಯಂತ್ರಣ ಮಾಡುವ ಅವಕಾಶವಿದ್ದು, ಇವುಗಳನ್ನು ಪಡೆಯುವ ಹಕ್ಕು ಕೆಳವರ್ಗದವರಿಗಿಲ್ಲ. ಅಧಿಕಾರ ಪಡೆಯುವುದು ಹಾಗಿರಲಿ, ವಿದ್ಯೆಯನ್ನು ಈ

***Please cite this article as:*** ಜಯಕೀರ್ತಿ. (2024). ಕುವೆಂಪು ಅವರ 'ಜಲಗಾರ' ನಾಟಕ: ಒಂದು ವಿಶ್ಲೇಷಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್,* 3(2), 9–13

ತಳವರ್ಗದ ಜನ ಕಲಿಯುವಂತಿರಲಿಲ್ಲ. ಒಂದು ವೇಳೆ ಹಾಗೇನಾದರೂ ಕಲಿತರೆ ಸಾಮಾಜಿಕವಾಗಿ ಅದೊಂದು ಬುಡಮೇಲು ಕೃತ್ಯ, ಶಿಕ್ಷಾರ್ಹ ಅಪರಾಧ, ಕುವೆಂಪು ಈ ನಾಟಕದಲ್ಲಿ ಈ ರೂಢಿಯ ನಂಬಿಕೆಯ ಬಗ್ಗೆ ಪ್ರಶ್ನೆ ಎತ್ತುತ್ತಾರೆ. 'ಅಧಿಕಾರದ ಕೇಂದ್ರ'ಗಳಿಗೆ ಮುಖಾಮುಖಿಯಾಗುತ್ತಾರೆ. 'ಜಲಗಾರ' ನಾಟಕದಲ್ಲಿ ಪುರೋಹಿತಶಾಹಿ ವ್ಯವಸ್ಥೆಯನ್ನು ನೇರ ನೆಲೆಯಲ್ಲಿ ಎದುರಿಸಿದ್ದಾರೆ.

ಕುವೆಂಪು ಅವರ ನಿಲುವು ಪೆರಿಯಾರರಂತೆ ಹಿಂದೂ ಧರ್ಮದ ಬಗ್ಗೆ ಸಮಗ್ರ ದ್ವೇಷ, ತಿರಸ್ಕಾರದಿಂದ ಕೂಡಿಲ್ಲ. ಬದಲಿಗೆ ಇವರ ನಿಲುವು ನಾರಾಯಣಗುರು ಅವರ ನಿಲವಿಗೆ ಹತ್ತಿರವೆನಿಸುತ್ತದೆ. ಹಿಂದೂ ಧರ್ಮದೊಳಗಿದ್ದುಕೊಂಡೆ ವರ್ಣವ್ಯವಸ್ಥೆಯನ್ನು ವಿರೋಧಿಸುವ ಕ್ರಮವನ್ನು ಕುವೆಂಪು ಅವರಲ್ಲಿ ನಾವು ಕಾಣುತ್ತೇವೆ. 'ಜಲಗಾರ' ನಾಟಕ ಕುವೆಂಪು ಅವರ ವರ್ಣವಿರೋಧಿ ನೆಲೆಯ ಪಯಣದ ಮೊದಲ ಹಂತದ ಕೃತಿ. ಇಲ್ಲಿ ವಚನ ಚಳುವಳಿಯ ವಚನಕಾರರ ಕಾಯಕ ತತ್ವ ತುಂಬಾ ಪ್ರಭಾವ ಬೀರಿದೆ. ಕಾಯಕದ ಮಹತ್ವವನ್ನು ಇಲ್ಲಿ ಹೇಳುತ್ತಾ, ಪರಂಪರಾಗತವಾಗಿ ಬಂದ ದೇಗುಲದ ಪರಿಕಲ್ಪನೆಯನ್ನು ನಿರಾಕರಿಸುವುದು 'ಜಲಗಾರ' ನಾಟಕದಲ್ಲಿ ಕಾಣಿಸುವ ಪ್ರಮುಖ ಸಂಗತಿ ನಾಟಕದ ಪ್ರಧಾನ ವಸ್ತು.

'ಜಲಗಾರ' ಎರಡು ದೃಶ್ಯಗಳ ಪುಟ್ಟ ನಾಟಕ. ಮೊದಲನೆಯದು ದೇವಸ್ಥಾನಕ್ಕೆ ಹೋಗುವ ದೃಶ್ಯವಾದರೆ, ಎರಡನೆಯದು ದೇವಸ್ಥಾನದಿಂದ ಹಿಂದಿರುಗಿ ಬರುವ ದೃಶ್ಯ. ಹೀಗಾಗಿ ಇಲ್ಲಿ ದೇವಸ್ಥಾನವೇ ಈ ನಾಟಕದ ಕೇಂದ್ರ ಬಿಂದು.

ನಾಟಕದ ಪ್ರಾರಂಭದಲ್ಲಿ ಜಲಗಾರನೊಬ್ಬ ಪೊರಕೆ ಬುಟ್ಟಿಯೊಡನೆ ತನ್ನ ದಿನ ನಿತ್ಯದ ಕೆಲಸಕ್ಕೆ ಸಿದ್ದನಾಗುತ್ತಾನೆ. ಆಗ ಅದೇ ದಾರಿಯಲ್ಲಿ ರೈತನೊಬ್ಬ ಹಾಡಿಕೊಂಡು ಬರುತ್ತಾನೆ. ಆ ಹಾಡು ಹೀಗಿದೆ.

*ನೇಗಿಲ ಯೋಗಿಯು ನಾನು:*
*ಮಣ್ಣಿನ ಭೋಗಿಯು ನಾನು!*
*ಕೆರಗಳ ತೊರೆಗಳ ಗೆಳೆಯನು ನಾನು*
*ಹೊಲಗಳ ಬನಗಳ ದೊರೆ ನಾನು.*
*ಹೊಯ್ಯುವೆ, ಗೆಯ್ಯುವೆ, ಕೊಯ್ಯುವೆ ನಾನು;*
*ಉಣ್ಣುವೆ, ಊಣಿಸೀಯುವೆ ನಾನು.*
*ನೇಗಿಲ ಗೆರೆಯೇ ತೋರುವುದೆನಗೆ*
*ಮುಕ್ತಿಯ ಹಾದಿಯನು;*
*ವೇದಗಳೆಲ್ಲಾ ನೆಗೆನೆಗೆದರಿಯದ*
*ಅಂತ್ಯದ ಆದಿಯನು.*
*ನನ್ನಿಯನರಿಯುವೆ ಕರ್ಮದಲ್ಲಿ;*
*ಸೊಗವನು ಕಾಣುವೆ ಧರ್ಮದಲ್ಲಿ!*

ರೈತನ ಈ ಹಾಡು ಸಹಜವಾಗಿ 'ಕಾಯಕತತ್ವ'ವನ್ನು ಪ್ರತಿಪಾದಿಸುತ್ತದೆ. ಇಲ್ಲಿ ಜಲಗಾರ ಹಾಗೂ ರೈತ ಇಬ್ಬರೂ ವೈದಿಕ ಪರಂಪರೆಯನ್ನು ವಿರೋಧಿಸುವ, ಕಾಯಕ ಸಂಸ್ಕೃತಿಯನ್ನು ಪ್ರತಿಪಾದಿಸುವ ಪ್ರತಿನಿಧಿಗಳಂತೆ ಕಾಣಿಸುತ್ತಾರೆ. ಹಾಗೂ ರೈತ ಹೇಳುವ 'ಉಣ್ಣುವೆ, ಊಣಿಸೀಯುವೆ ನಾನು' ಎಂಬ ಮಾತು ರೈತರ ಉದಾರ ನಿಲುವಿನ ಪ್ರತೀಕದಂತಿದೆ. ಅಂದರೆ ರೈತ ತಾನು ಬದುಕಿ ಇತರರನ್ನು ಬದುಕಲು ಬಿಡುವ ಹೃದಯ ವೈಶಾಲ್ಯವನ್ನು ಇಲ್ಲಿ ಗುರುತಿಸಬಹುದು. ಆದರೆ ಮುಂದೆ ರೈತ–ಜಲಗಾರರ ಸಂಭಾಷಣೆಯಲ್ಲಿ ರೈತ ಶ್ರೇಣಿಕೃತ ಸಮಾಜದ ಕಟ್ಟುಪಾಡುಗಳನ್ನು ಪಾಲಿಸುವವನಂತೆ ಕಂಡುಬರುತ್ತಾನೆ. ಈತ ಹೋಗುತ್ತಿರುವುದು ಶಿವನ ಗುಡಿಗೆ, ಜಾತ್ರೆಗೆ. ಜಲಗಾರ–ರೈತ ಇವರೀರ್ವರ ಸಂಭಾಷಣೆ ಹೀಗಿದೆ

**ಜಲಗಾರ:** ಮುಂಜಾನೆಯೊಳೆಲ್ಲಿ ಹೋಗುತಿಹೆ ರೈತ?

**ರೈತ:** (ಹಿಂತಿರುಗಿ ನೋಡಿ)

ಓಹೋ ನೀನರಿಯೆಯಾ? ಇಂದು ನಮ್ಮೂರ ಶಿವಗುಡಿಯ ಜಾತ್ರೆ. ಬರುವುದಿಲ್ಲವೆ ನೀನು?

ತೇರಳೆಯಲೆಂದನಿಬರೂ ಬರುತಿಹರು

***ಜಲಗಾರ:*** ನನಗೇಕೆ ಶಿವಗುಡಿಯ ಜಾತ್ರೆ? ಜೋಯಿಸರು ದೇಗುಲದ ಬಳಿಗೆನ್ನ ಸೇರಿಸರು.

***ರೈತ:*** ದೂರದಲ್ಲಿಯೆ ನಿಂತು ಕೈಮುಗಿದು ಬಾ.

***ಜಲಗಾರ***: ಕರ್ಮವಾರಾಧನೆ, ಸೇವೆಯೇ ಪೂಜೆ.

ನನ್ನ ಭಾಗಕೆ ಪೊರಕೆ ಆರತಿ. ಗುಡಿಸುವುದೆ

ನನ್ನ ದೇವರ ಪೂಜೆ! ನಿನ್ನೆ ದೇಗುಲದೆಡಗೆ

ಹೋದೆನ್ನ ಕಂದನಂ ಬೈದಿರಿದು ನೂಕಿದರು.

ಶಿವಗುಡಿಯ ಶಿವನು ಜೋಯಿಸರ ಶಿವನಂತೆ

ನನ್ನ ಶಿವನೀ ಮಣ್ಣಿನಲ್ಲಿಹು. ನನ್ನ ಶಿವ

ಕೊಳೆತ ಕಸದೊಳಗಿಹನು. ಕಪ್ಪುರದೊಳಿಲ್ಲ

ಮಂಗಳಾರತಿಯೊಳಿಲ್ಲ; ಹೂವುಗಳಲಿಲ್ಲ.

ಯಾವೆಡೆಯೊಳಾನಿಹೆನೊ ಅವನಲ್ಲಿಯೇ ಇಹನು

ನನ್ನೆದೆಯ ದೇಗುಲ; ನನ್ನೊಲ್ಮೆಯದೆ ಪೂಜೆ.

ಇಲ್ಲಿ ಜಲಗಾರ ತಾನು ಮಾಡುತ್ತಿರುವ ಕಾಯಕದಲ್ಲಿಯೇ ಶಿವನ ಕಾಣುವುದಾಗಿ ರೈತನಿಗೆ ಹೇಳುತ್ತಾನೆ. ಅದರೆ ರೈತ ಹಣ್ಣು ಕಾಯಿ ಕರ್ಪೂರ ಹೂವುಗಳನ್ನು ತೆಗೆದುಕೊಂಡು ಪೂಜೆಗೆ ಶಿವಗುಡಿಗೆ ಹೊರಟಿದ್ದಾನೆ ಅದು ಜೋಯಿಸರ ಶಿವನನ್ನು ನೋಡಲು. ಆಗ ಜಲಗಾರ ಹೇಳುತ್ತಾನೆ

***ಶಿವನ ಕಾಣಲು ನೀನು***

***ಗುಡಿಗೆ ಹೋಗುವಿಯೇನು? ನಿನ್ನ ನೇಗಿಲ ಗೆರೆಯ***

***ದಿವ್ಯ ದೇವಾಲಯದಿ ಶಿವನ ಕಾಣೆಯಾ ನೀನು?***

ಎಂದು ಜಲಗಾರ ರೈತನನ್ನು ಪ್ರಶ್ನೆ ಮಾಡುತ್ತಾನೆ. ಆದರೆ ಇಲ್ಲಿ ರೈತ ಮೊದಲು ಹಾಡಿಕೊಂಡು ಬರುವಾಗ ಈ ಅರ್ಥವತ್ತಾದ ಮಾತುಗಳೇ ಬರುತ್ತವೆ 'ನೇಗಿಲ ಗೆರೆಯೇ ತೋರುವುದೆನಗೆ ಮುಕ್ತಿಯ ಹಾದಿಯನು' ಎಂದು ರೈತ ಹಾಡಿದರೂ, ತನ್ನ ಹಾಡಿಗೂ ತನಗೂ ಸಂಬಂಧವಿಲ್ಲವೆನ್ನುವಂತೆ ಆತ ದೇವಾಲಯಕ್ಕೆ ಹೊರಟಿದ್ದಾನೆ. ಅಷ್ಟು ಮಾತ್ರವಲ್ಲದೇ ಜಲಗಾರನ ಬಗ್ಗೆ ಹೀಗೆ ಅಂದುಕೊಳ್ಳುತ್ತಾನೆ.

***ಸೊಗದ ಮೋರೆಯನೆ ಕಂಡರಿಯನೀ ಜಲಗಾರ***

***ಪೂಜೆಯೆಂಬುದನರಿಯ; ದೇವರೆಂಬುದನರಿಯ***

***ಹುಟ್ಟುಗುಣ ಸುಟ್ಟರೂ ಹೋಗುವುದೆ?***

ರೈತ ಇಲ್ಲಿ ಶ್ರೇಣೀಕೃತ ಸಮಾಜದ ಪ್ರತಿನಿಧಿಯಂತೆ– ಸ್ವತಃ ತಾನೆ ಈ ಸಮಾಜದ ಕೆಳತುದಿಯಲ್ಲಿ ಶೋಷಣೆಗೆ ಒಳಗಾಗಿದ್ದರೂ ಈ ರೀತಿ ಮಾತನಾಡುವುದು ಆಶ್ಚರ್ಯವೆನಿಸುತ್ತದೆ. ಮುಂದೆ ಪಾರ್ವರ ಪ್ರವೇಶವಾಗುತ್ತದೆ ಜಲಗಾರ ಹಾಡುತ್ತಿದ್ದ ಹಾಡು ಕೇಳಿದ ಇವರು ಮೊದಲು

***ಮೊದಲನೆಯ ಪಾರ್ವ:*** ಕೊಳಲ ಇನಿದನಿಯಂತೆ ಸವಿಗೊರಲಿನಿಂದೊಗೆವ ಗಾಯನವದು ಏನಿತಿಂಪು! ಹಾಡಿದವರಾರೊ?

***ಎರಡನೆಯ ಪಾರ್ವ***: ಯಾರೊ ದಿವ್ಯಾತ್ಮನಿರಬೇಕು, ಮಧುರತಮ ಗಾಯನವು ಅಮಲತಮ ಹೃದಯದಿಂದಲ್ಲದೆ ಹೊರಹೊಮ್ಮಲರಿಯದು!

***ಮೊದಲನೆಯ ಪಾರ್ವ***: (ಜಲಗಾರನನ್ನು ನೋಡಿ)

ಜಲಗಾರ ಹಾಡಿದವರಾರೊ?

***ಜಲಗಾರ:*** (ಕೈ ಮುಗಿದು) ನಾನೇ ಮಹಾಸ್ವಾಮಿ; ತಮ್ಮನುಗ್ರಹದಿಂದ.

***ಎರಡನೆಯ ಪಾರ್ವ:*** ಅವನಂತೆ ಬರಿಯ ಸಟೆ ಬಾ ಹೋಗೋಣ.

***ಮೊದಲನೆಯ ಪಾರ್ವ:***

ಸಂಗೀತವು ಅನಿತೇನು ಮನಮೋಹಿಪಂತೆ ಇರಲಿಲ್ಲ.

ಗಾನದೇವಿಯು ಹೀಗೆ ಜಲಗಾರನನ್ ಒಲಿಯುವಳೆ?

ಎಂದಿಗೂ ಇಲ್ಲ.

***ಎರಡನೆಯ ಪಾರ್ವ:***

ಶೂದ್ರರೊಳ್ ಕವಿವರ್ಯರುದಿಸುವರೆ? ಹುಟ್ಟುವರೆ

ಪಂಡಿತರ್? ಜನಿಸುವರೆ ಶಿಲ್ಪಿಗಳ್? ನಾಯಕರ್?

ಯೋಗಿಗಳ್? ಅಸದಳಂ! ಹೊತ್ತಾಯ್ತು ಹೋಗೋಣ.

ಹುಟ್ಟಿಗೂ ಪ್ರತಿಭೆಗೂ ಸಂಬಂಧ ಕಲ್ಪಿಸುವ ರೂಢಿಯ ವ್ಯವಸ್ಥೆಯನ್ನು ಕುವೆಂಪು ಇಲ್ಲಿ ಪ್ರಸ್ತಾಪಿಸುತ್ತಿದ್ದಾರೆ; ವ್ಯಂಗ್ಯವಾಡುತ್ತಿದ್ದಾರೆ. ಅದಲ್ಲದೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ, ಆಧುನಿಕ ಶಿಕ್ಷಣ ಆಗತಾನೇ ಹೊಸ ಆಲೋಚನೆಗಳನ್ನು ರೂಪಿಸುತ್ತಿದ್ದ ಕಾಲದಲ್ಲಿ ಜಾತಿ ವ್ಯವಸ್ಥೆಯಲ್ಲಿ 'ವಿದ್ಯೆ' ಕೆಲವರ ಸ್ವತ್ತು, ಕೆಲವರ ಹಕ್ಕು ಎಂಬ ನಿಲವನ್ನು ಸಾಮಾಜಿಕ ವ್ಯವಸ್ಥೆ ಉಳಿಸಿಕೊಳ್ಳಲು ಹೆಣಗುತ್ತಿದ್ದಂತೆ ತೋರುತ್ತದೆ. ಕುವೆಂಪು ಸಹ ಸ್ವತಃ ಶೂದ್ರ ಸಮುದಾಯದ ಪ್ರತಿಭಾವಂತರು ಸಹಜವಾಗಿಯೇ ಇದನ್ನು ಪ್ರಶ್ನಿಸುತ್ತಿದ್ದರು, ಮಾತ್ರವಲ್ಲ, ತಮ್ಮ ಪ್ರತಿಭೆಯಿಂದಲೇ ಅದಕ್ಕೆ ಉತ್ತರ ಕೊಡಲು ಪ್ರಯತ್ನಿಸುತ್ತಿದ್ದರು.

ಇನ್ನು ಎರಡನೆಯ ದೃಶ್ಯದಲ್ಲಿ ದೇವಸ್ಥಾನಕ್ಕೆ ಹೋದವರು ಹಿಂತಿರುಗಿ ಬರುತ್ತಾರೆ, ಹಾಗೆ ಬಂದವರು, ಬರುವಾಗ ಮತ್ತೆ ಜಲಗಾರನನ್ನು ಭೇಟಿಯಾಗುತ್ತಾರೆ. ರೈತ ಜಾತ್ರೆಯ ವೈಭವವನ್ನು ಅದ್ಭುತವೆಂದು ಕೊಂಡಾಡುತ್ತಾನೆ. ಆಗ ಜಲಗಾರ ಮತ್ತೆ ಮತ್ತೆ ಕೇಳುತ್ತಾನೆ:

ಶಿವನ ಗುಡಿಯಿಂದೇನು ತಂದಿರುವೆ, ಹೇಳು?

ಶಿವನ ತರಲಿಲ್ಲವೆ?

ಜಲಗಾರನ ಈ ಮಾತುಗಳು ರೈತನಿಗೆ ಅವಿವೇಕದ ಮಾತುಗಳಂತೆ ಎನಿಸುತ್ತವೆ. ಪಾರ್ವರು ದಕ್ಷಿಣೆಯ ಹಣವನ್ನು ಹಂಚಿಕೊಂಡು ಸಂಭ್ರಮದಿಂದ ಬರುತ್ತಿರುತ್ತಾರೆ. ನಂತರ ಗುಂಪು ಗುಂಪಾಗಿ ಜನ ದೇವಸ್ಥಾನದಿಂದ ಹೋದ ನಂತರ ಜಲಗಾರ ಒಬ್ಬನೇ ಕುಳಿತಿದ್ದಾಗ ಶಿವ ಜಲಗಾರನ ವೇಷ ಧರಿಸಿ ಆತನ ಮುಂದೆ ಪ್ರತ್ಯಕ್ಷನಾಗುತ್ತಾನೆ. ಆಗ ಜಲಗಾರ ಅಚ್ಚರಿಯಿಂದ

ನೀನಾರು? ನೀನಾರು ಆಕೃತಿಯೆ

ಮಾನುಷವಾಗಿ ಕಂಡರೂ ಅಮಾನುಷವಾಗಿ ತೋರುತಿಹೆ?

ಎಂದು ಪ್ರಶ್ನೆ ಮಾಡಿದಾಗ

***ಶಿವ:*** ಅಂಜದಿರು ಸೋದರನೆ ಅಂಜದಿರು

ನಾ ನಿನ್ನ ಬಂಧು ಎನ್ನುತ್ತಾನೆ.

***ಜಲಗಾರ*** : (ವಿಸ್ಮಿತನಾಗಿ) ಏನು? ನೀನೆನ್ನ ಬಂಧು

ನಾನರಿಯದಿಹ ಬಂಧು

***ಶಿವ:*** ನಾ ನಿನ್ನ ಜಾತಿ?

***ಜಲಗಾರ:*** ನೀನೆನ್ನ ಜಾತಿ?

ಊರ ಜಲಗಾರ ನಾನು!

***ಶಿವ:*** ನಾನೊಬ್ಬ ಜಲಗಾರ

ಅಂಜದಿರು ಸೋದರನೆ ಜಗದ ಜಲಗಾರ ನಾನು

ಶಿವನೆಂದು ಕರೆಯುವರು ಎನ್ನ!

ಜಲಗಾರ ಅನುಮಾನದಿಂದ ನೀನೇ ಶಿವ ಎಂದು ಹೇಗೆ ನಂಬುವುದು ಎಂದು ಪ್ರಶ್ನೆ ಮಾಡುತ್ತಾನೆ. ತಿಳಿದವರು, ಪಂಡಿತರು ಶಿವನನ್ನು ಬೇರೆಯೇ ರೀತಿ ವರ್ಣಿಸಿದ್ದಾರೆ, ಹಾಗಿಲ್ಲ ನೀನು ಎನ್ನುತ್ತಾನೆ. ಆಗ ಶಿವ

ಸೋದರನೆ, ಶಿವನು ಶಾಸ್ತ್ರಗಳ ಶಿವನಲ್ಲ!

ಕಾವ್ಯಗಳ ಶಿವನಲ್ಲ! ಕವಿತೆಯಾ ಶಿವನಲ್ಲ

ಬೆಟ್ಟಗಳ ಮೇಲೆ ಗಿರಿಜೆಯೊಡಗೂಡಿ

ಸರಸವಾಡುವ ರಸಿಕ ಶಿವನಲ್ಲ! ಬ್ರಹ್ಮಾಂಡ

ಒತ್ತುತ್ತಿಹ ಕಸದ ರಾಶಿಯ ಮೇಲೆ ಹತ್ತಿ,

ನಿಂತು, ನರ್ತನವೆಸಗುತಿಹ ತೋಟಿ ನಾನು

ನಿಜ ಶಿವನು ಜಲಗಾರ! ನಿನ್ನ ಮುಂದಿಹನು ನೋಡು.

ಕೂತುಹಲಕರವಾದ ವಿಚಾರವೆಂದರೆ 'ಜಲಗಾರ' ನಾಟಕದಲ್ಲಿ ಕುವೆಂಪು ಯಾವುದನ್ನು ಪ್ರಜ್ಞಾಪೂರ್ವಕ ವಿರೋಧಿಸುತ್ತಾರೋ, ಅದನ್ನೇ ಸಮರ್ಥಿಸುವ ಮನೋಭಾವವೂ ನಾಟಕದಲ್ಲಿ ವ್ಯಕ್ತವಾಗುತ್ತದೆ. ಜಾತಿಪದ್ಧತಿಯ ಮೂಲ ಸಂವಿಧಾನವನ್ನು ನಾಶಮಾಡಲು ಪ್ರಯತ್ನಿಸದೆ, ಅದರ ಚೌಕಟ್ಟಿನಲ್ಲಿಯೇ ವಿರೋಧ ವ್ಯಕ್ತವಾಗುವ ಕ್ರಮವನ್ನು ನಾವು ಇಂಥ ಕಡೆಗಳಲ್ಲಿ ಕಾಣುತ್ತೇವೆ.'ಜಲಗಾರ' ನಾಟಕದಲ್ಲಿ

ಒಂದು ಕಡೆ ಶ್ರೇಣಿಕೃತ ಸಮಾಜದ ಜಾತಿಪದ್ಧತಿ ವ್ಯವಸ್ಥೆ ಬಗ್ಗೆ ಕಡುವಿರೋಧ ವ್ಯಕ್ತವಾದರೆ, ಮತ್ತೊಂದು ಕಡೆ ಇದೇ ವ್ಯವಸ್ಥೆ ಪ್ರತಿಪಾದಿಸುವ ಕರ್ಮ ಸಿದ್ಧಾಂತದ ಬಗ್ಗೆ ನಂಬಿಕೆ ವ್ಯಕ್ತವಾಗುತ್ತದೆ. 'ಕರ್ಮ ಮುಗಿಯುವ ಕಾಲ ಮುಗಿದಿಲ್ಲವಿನ್ನೂ' ಎಂದು ಜಲಗಾರ ಹೇಳುವ ಮಾತುಗಳನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಆಧುನಿಕ ಶಿಕ್ಷಣದ ಫಲಿತವಾಗಿ ಬದಲಾಗುತ್ತಿದ್ದ ಸಾಮಾಜಿಕ ಪರಿಸರ, ಶೂದ್ರ ಚಳುವಳಿ– ಇವೆಲ್ಲವೂ ತರುಣ ಕುವೆಂಪು ವ್ಯಕ್ತಿತ್ವವನ್ನು ಏಕಕಾಲದಲ್ಲಿ ಪ್ರಭಾವಿಸಿದ ಸಂಗತಿಗಳು. ಈ ಎಲ್ಲದರ ದಟ್ಟ ಪರಿಣಾಮ 'ಜಲಗಾರ' ನಾಟಕದಲ್ಲಿದೆ. ಇಲ್ಲಿ ಜಲಗಾರ ಶಿವಭಕ್ತ ಹಾಗೆಂದು ಆತ ಮೋಕ್ಷಪಥವನ್ನು ಬಯಸುವುದಿಲ್ಲ. ಆತನಿಗೆ ಬದುಕಿನ ದೀಕ್ಷೆಯನ್ನು ವಾಸ್ತವದ ಪ್ರಕೃತಿಯೇ ದೈವಕಲ್ಪ. ಇಲ್ಲಿಯ ಜಲಗಾರನು ತನ್ನ ಕಾಯಕದ ಸಿದ್ಧಿ ಸಾಧನೆಯಲ್ಲಿ ತೊಡಗಿಸಿಕೊಂಡು ಮನುಕುಲದ ತೀಕ್ಷ್ಣತೆಗಳನ್ನು ಅರಿಯಲು ಹಾತೊರೆಯುವನು. ಸಾಮಾಜಿಕ ಪಿಡುಗಾಗಿರುವ ಅಸ್ಪೃಶ್ಯತೆಯನ್ನು ಧಿಕ್ಕರಿಸುವ ಮತ್ತು ಅದರ ವಿರುದ್ಧ ಬಂಡೇಳುವ ಹೃದಯಸ್ಪರ್ಶಿ ಕಲಾತ್ಮಕ ನಾಟಕವೇ 'ಜಲಗಾರ' ಕೃತಿ.

**ಆಕರ ಗ್ರಂಥ**


- ಕುವೆಂಪು. (2015). *ಜಲಗಾರ.* ಉದಯ ರವಿ ಪ್ರಕಾಶನ.


**ಪರಾಮರ್ಶನ ಗ್ರಂಥಗಳು**


- ಕುವೆಂಪು ಸಮಗ್ರ ನಾಟಕ. (2004). ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಮರುಳಸಿದ್ಧಯ್ಯ. *ಕನ್ನಡ ನಾಟಕ ವಿಮರ್ಶೆ.*
- ನರಹಳ್ಳಿ ಬಾಲಸುಬ್ರಹ್ಮಣ್ಯ. (2016). *ಕುವೆಂಪು ನಾಟಕಗಳ ಅಧ್ಯಯನ.* ಅಂಕಿತ ಪುಸ್ತಕ.
- ಉತ್ಥಾನ ಭಾರಿಘಾಟ್. (2016) *ಕುವೆಂಪು ನಾಟಕಗಳು ಮುಂದಿಡುವ ರಂಗಕಲ್ಪನೆ.* ಕುವೆಂಪು ಭಾಷಾಭಾರತೀ ಪ್ರಾಧಿಕಾರ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 14-20
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# 'ಮಾಡಿ ಮಡಿದವರು' ಕಾದಂಬರಿಯಲ್ಲಿ ಗಾಂಧಿವಾದದ ಪ್ರಭಾವ

**ಅಶೋಕ ಎಚ್. ಕೆ**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಮಹಿಳಾ ಸರ್ಕಾರಿ ಗೃಹವಿಜ್ಞಾನ ಕಾಲೇಜು,
ಹೊಳೆನರಸೀಪುರ, ಹಾಸನ ಜಿಲ್ಲೆ

**Abstract:**
*ಬಸವರಾಜ ಕಟ್ಟೀಮನಿಯವರು ಪ್ರಗತಿಶೀಲ ಚಳವಳಿಯಲ್ಲಿ ತಮ್ಮದೇ ಆದ ವ್ಯಕ್ತಿತ್ವ ರೂಪಿಸಿಕೊಂಡವರು. ಇವರು ಬರೆದ 40 ಕಾದಂಬರಿಗಳಲ್ಲಿ 'ಮಾಡಿ ಮಡಿದವರು' ಎರಡನೆಯದು. ಇದು 1950ರಲ್ಲಿ ಪ್ರಕಟವಾಯಿತು. 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ಮುಂದುವರಿದ ಭಾಗದಂತಿದೆ. 1942ರ ಆಗಸ್ಟ್‌ನಲ್ಲಿ ಮುಂಬೈಯಲ್ಲಿ ನಡೆದ ಕಾಂಗ್ರೆಸ್ ಸಭೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಕೊನೆಯ ಹೋರಾಟ ನಡೆಸುವ ನಿರ್ಧಾರವನ್ನು ಕೈಗೊಂಡು 'ಮಾಡು ಇಲ್ಲವೆ ಮಡಿ' ಎಂಬ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಈ ವೇಳೆಯಲ್ಲಿ ಗಾಂಧೀಜಿ ಸಹಿತ ನೂರಾರು ಮುಖಂಡರನ್ನು ಬಂಧಿಸಲಾಯಿತು. ಇದರ ಪರಿಣಾಮವಾಗಿ ಅಸಹಕಾರ ಚಳವಳಿ ಭಾರತದ ಎಲ್ಲೆಡೆ ಪ್ರಾರಂಭವಾಯಿತು. ಇದರಿಂದ ಪ್ರಜ್ಞಾವಂತರಾದ ಜನಸಾಮಾನ್ಯರು ಮತ್ತು ವಿದ್ಯಾರ್ಥಿಗಳು ಶಾಲಾಕಾಲೇಜುಗಳಿಗೆ ಹೋಗುವುದನ್ನು ಬಿಟ್ಟು ಈ ಚಳವಳಿಯಲ್ಲಿ ಭಾಗವಹಿಸತೊಡಗಿದರು. ಮುಂದೆ ಏನಾಯಿತು? ಎಂಬುದನ್ನು ಕಾದಂಬರಿ ವಿಶದಪಡಿಸುತ್ತದೆ.*

**Keywords:** *ಕನ್ನಡ ಸಾಹಿತ್ಯ, ಕಾದಂಬರಿ, ಮಾಡಿ ಮಡಿದವರು, ಗಾಂಧಿವಾದ.*

**ಪೀಠಿಕೆ**

ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿಯು 1950ರಲ್ಲಿ ಪ್ರಕಟವಾಯಿತು. ಕಾದಂಬರಿಯಲ್ಲಿ ಪುಣೆಯ ಕಾಲೇಜೊಂದರಲ್ಲಿ ಓದುತ್ತಿರುವ ಸಂದರ್ಭದಲ್ಲಿ 'Do or Die' ಎಂಬ ಗಾಂಧೀಜಿಯವರ ಘೋಷಣೆಯು ಹೇಮಳನ್ನು ಆಕರ್ಷಿಸುತ್ತದೆ. ಹೇಮ ಅಪ್ರತಿಮ ದೇಶಭಕ್ತ ಶ್ಯಾಮರಾಯರ ಏಕಮಾತ್ರ ಪುತ್ರಿ. ಈಕೆ ತಂದೆಯ ಮನಸ್ಸಿಗೆ ವಿರುದ್ಧವಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಲು ನಿರ್ಧರಿಸುವುದು ದೇಶಪ್ರೇಮದ ಉತ್ಕಟತೆಯನ್ನು ಸೂಚಿಸುತ್ತದೆ. ತಂದೆ ಶ್ಯಾಮರಾಯರು ಕಾಂಗ್ರೆಸ್ ನಾಯಕರಾಗಿದ್ದು, ಸ್ವಾತಂತ್ರ್ಯಕ್ಕಾಗಿ ಹೋರಾಡುವುದರ ಜೊತೆಗೆ ದೇಶಾದ್ಯಂತ ಯುವಕ–ಯುವತಿಯರನ್ನು ಹೋರಾಟಕ್ಕೆ ಭಾಗವಹಿಸಲು ಕರೆ ಕೊಡುತ್ತಾರೆ. ಆದರೆ ತಮ್ಮ ಮಗಳು ಸ್ವಾತಂತ್ರ್ಯ ಹೋರಾಟಕ್ಕೆ ದುಮುಕಿದಾಗ ಮಾತ್ರ ವಿರೋಧಿಸುತ್ತಾರೆ. ಇದು ಕೆಲವು ಭಾರತೀಯ ಸ್ವಾತಂತ್ರ್ಯ ಹೋರಾಟಗಾರರ ಇಬ್ಬಗೆಯ ನೀತಿಯನ್ನು ಧ್ವನಿಸುತ್ತದೆ.

ಹೇಮ ಮತ್ತು ವಿಶ್ವನಾಥ ಒಂದೇ ಕಾಲೇಜಿನಲ್ಲಿ ಓದುತ್ತಿದ್ದಾಗ, ಹೇಮಾಳ ಪ್ರಚೋದನಕಾರಿ ಮಾತುಗಳಿಂದ ಸ್ವಾತಂತ್ರ್ಯ ಹೋರಾಟಕ್ಕೆ

**Please cite this article as:** ಅಶೋಕ, ಎಚ್. ಕೆ. (2024). 'ಮಾಡಿ ಮಡಿದವರು' ಕಾದಂಬರಿಯಲ್ಲಿ ಗಾಂಧಿವಾದದ ಪ್ರಭಾವ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 14–20

ಧುಮುಕುತ್ತಾನೆ. ಹೇಮಾಳ ದೇಶಪ್ರೇಮ, ಪ್ರಾಮಾಣಿಕತೆ, ಮತ್ತು ದಿಟ್ಟತನವು ಯುವಕರಿಗೆ ಮಾರ್ಗದರ್ಶನವಾಗುತ್ತದೆ. ಹೇಮಾಳನ್ನು ಮಾದರಿಯಾಗಿಟ್ಟುಕೊಂಡ ಕಾದಂಬರಿಕಾರರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರು ಭಾಗವಹಿಸಿದ್ದರು ಎಂಬುದನ್ನು ಸೂಚ್ಯವಾಗಿ ಧ್ವನಿಸುತ್ತಾರೆ.

ಹೇಮ ಮತ್ತು ವಿಶ್ವನಾಥ ಬೆಳಗಾವಿಗೆ ರೈಲಿನಲ್ಲಿ ಹೋಗುವಾಗ ಆಕಸ್ಮಿಕವಾಗಿ ಶೇಖರನ ಪರಿಚಯವಾಗುತ್ತದೆ. ಶೇಖರ ಈಗಾಗಲೇ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವನು. ಶೇಖರನ ಊರು ಕಲ್ಲಾಪುರ. ಬೆಳಗಾವಿಯಿಂದ ಕಲ್ಲಾಪುರಕ್ಕೆ ಹೋಗಿ ಪರಿಸ್ಥಿತಿಯನ್ನು ನೋಡಿಕೊಂಡು, ಎಲ್ಲಾ ವ್ಯವಸ್ಥೆ ಮಾಡುತ್ತೇನೆ. ನಂತರ ನೀವೂ ಬನ್ನಿ ಎಂದು ಹೇಳಿ ಹೊರಟು ಹೋಗುತ್ತಾನೆ. ಕಲ್ಲಾಪುರದಲ್ಲಿ ಸಂಗಣ್ಣ, ಬಾಳಪ್ಪ, ಹಸನಸಾಬಿ ಸಹಿತ ಎಲ್ಲರು ಚರ್ಚಿಸಿ, ಬ್ರಿಟಿಷ್ ಸರ್ಕಾರದಲ್ಲಿ ಕುಲಕರ್ಣಿಯಾಗಿದ್ದ ರಂಗಣ್ಣನನ್ನು ರಾಜೀನಾಮೆ ನೀಡುವಂತೆ ಕೇಳುತ್ತಾರೆ. ಇವರ ಒತ್ತಾಯಕ್ಕೆ ಕಟ್ಟುಬಿದ್ದ ರಂಗಣ್ಣ ರಾಜೀನಾಮೆ ನೀಡಿ ಬ್ರಿಟಿಷರಿಗೆ ಪತ್ರ ಬರೆದು ನಡೆದ ಎಲ್ಲ ವಿಷಯವನ್ನು ತಿಳಿಸುತ್ತಾನೆ. ಇದನ್ನು ನಿರೀಕ್ಷಿಸಿದ್ದ ಶೇಖರ ಸಹಿತ ಎಲ್ಲಾ ಹೋರಾಟಗಾರರು ಗೌಪ್ಯ ಸ್ಥಳವಾದ ಕಿರುಬನಕೊಳ್ಳಕ್ಕೆ ಹೋಗಿ ಪೋಲಿಸರಿಂದ ತಪ್ಪಿಸಿಕೊಳ್ಳುತ್ತಾರೆ.

ಶೇಖರನ ಗುಂಪನ್ನು ಸೆರೆಹಿಡಿಯಲು ಪೋಲಿಸರಿಂದ ಹುಡುಕಾಟ ಆರಂಭವಾಗುತ್ತದೆ. ವಿಶ್ವನಾಥನ ತಂದೆ ಬಾಬಾಸಾಹೇಬ ದೇಸಾಯಿಯವರು ತಮ್ಮ ಮಗ ಸ್ವಾತಂತ್ರ್ಯ ಹೋರಾಟಕ್ಕೆ ಇಳಿದಿದ್ದನ್ನು ಕಂಡು ಸಿ.ಐ.ಡಿ. ಕೀರ್ತಿನಾಥನ ಮೂಲಕ 'ಕಿರುಬನಕೊಳ್ಳಕ್ಕೆ' ಹುಡುಕಿಕೊಂಡು ಬರುತ್ತಾರೆ. ಇದನ್ನು ಕಂಡ ಹೋರಾಟಗಾರರು ಬಾಳಪ್ಪ ದೇಸಾಯಿಯನ್ನು ಬಿಟ್ಟು ಎಲ್ಲರೂ ಹತ್ತು ಮೈಲಿ ನಡೆದು ಸಮೀಪದ ಮಠವನ್ನು ಸೇರಿ ಆಶ್ರಯ ಪಡೆಯುತ್ತಾರೆ.

ಮಠದಿಂದ ದೂರದ ಕಾಡಿನ ಮಧ್ಯದ ತಾಂಡದಲ್ಲಿ ಲಂಬಾಣಿ ವಸ್ತ್ರಧರಿಸಿ ಕರಪತ್ರಗಳನ್ನು ಹೊರಡಿಸುವ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ. ಪಕ್ಕದ ಹಳ್ಳಿಗೆ ಕಂದಾಯ ವಸೂಲಿಗಾಗಿ ಬ್ರಿಟಿಷ್ ಅಧಿಕಾರಿಗಳು ಬರುತ್ತಾರೆ ಎಂಬ ವಿಷಯ ತಿಳಿದು, ಕಂದಾಯ ನೀಡುವ ರೈತರಂತೆ ಶೇಖರ್ ಸಹಿತ ಕೆಲವರು ಹೋಗಿ ಕಂದಾಯದ ಹಣ ಹಾಗೂ ಬಂದೂಕುಗಳನ್ನು ಕಿತ್ತುಕೊಂಡು ಪರಾರಿಯಾಗುವುದರ ಜೊತೆಗೆ ಪೋಲೀಸ್ ಸ್ಟೇಷನನ್ನು ಸುಟ್ಟು ಹಾಕುತ್ತಾರೆ. ಇದರಿಂದಾಗಿ ಲಂಬಾಣಿ ತಾಂಡದಲ್ಲಿರುವುದು ಪೋಲಿಸರಿಗೆ ತಿಳಿಯುತ್ತದೆ. ಹೇಮ ಮತ್ತು ವಿಶ್ವನಾಥ ತಪ್ಪಿಸಿಕೊಳ್ಳಬೇಕೆಂದು ಪುನಃ ಮಠದ ಕಡೆಗೆ ಹೊರಡುತ್ತಾರೆ. ಮಠದಲ್ಲಿ ಯಾರಾದರೂ ಪೋಲಿಸಿನವರು ಇದ್ದಾರ ಎಂದು ನೋಡಲು ಹೋದ ವಿಶ್ವನಾಥ ಅರಿಯದೇ ಪೋಲಿಸರ ಗುಂಡಿಗೆ ಬಲಿಯಾಗುತ್ತಾನೆ. ಈ ಘಟನೆಯ ನಂತರ ಪುತ್ರನನ್ನು ಕಳೆದುಕೊಂಡ ಬಾಬಾಸಾಹೇಬರು ಕೂಡ ಸ್ವಾತಂತ್ರ್ಯ ಹೋರಾಟಕ್ಕೆ ದುಮುಕುತ್ತಾರೆ. ಬ್ರಿಟಿಷ್ ಕಛೇರಿ ಸುಡಲು ಯತ್ನಿಸಿ ಕಾಡಿನಲ್ಲಿ ಹೋಗುತ್ತಿರುವಾಗ ದುಡುಕುತನದಿಂದ ಸಂಗಣ್ಣ ಸತ್ತಿದಲ್ಲದೆ, ಶೇಖರ ಹೇಮಳಿಗೆ ಗುಂಡು ತಗುಲುತ್ತದೆ. ನಂತರ ಹೇಗೋ ಪ್ರಯಾಸ ಪಟ್ಟು ಹಸನಸಾಬಿ ಲಾರಿಯನ್ನು ಹತ್ತಿ ಹೋಗುವಾಗ ಆ ಲಾರಿಯಲ್ಲೇ ಇಬ್ಬರು ಸಾಯುತ್ತಾರೆ. ಇದಿಷ್ಟು ಕಾದಂಬರಿಯ ಸ್ಥೂಲ ಪರಿಚಯ.

ಶೇಖರ ವಿವೇಕಿ ಹಾಗೂ ಮುಂದಾಲೋಚನೆಯುಳ್ಳ ಧೈರ್ಯವಂತ ಸಾಹಸಿ. ಜೊತೆಗೆ ಮಾನವತಾವಾದಿ. ಕುಲಕರ್ಣಿ ರಂಗಣ್ಣನು ಬ್ರಿಟಿಷರಿಂದ ಅಧಿಕಾರ ಪಡೆದಿದ್ದು ಅಲ್ಲದೆ ಪೋಲಿಸರಿಗೆ ಶೇಖರನ ತಂಡದ ಬಗ್ಗೆ ಮಾಹಿತಿ ನೀಡಿದ್ದಾಗ, ಆ ಕುಲಕರ್ಣಿಯ ಬಗ್ಗೆ ಶೇಖರ

ನಡೆದುಕೊಳ್ಳುವ ರೀತಿ ಮೆಚ್ಚುವಂತದ್ದು. ಸಂಗಣ್ಣ, ವಿಶ್ವನಾಥ, ಹೇಮ ಮುಂತಾದವರಿಗೆ ಮಾರ್ಗದರ್ಶಕನಾಗಿ ಯಾವುದೇ ಕೆಲಸ ಮಾಡಲು ಮುಂದಾಳುತನ ವಹಿಸಿಕೊಂಡವನು. ಕೆಲಸ ಮಾಡುವ ಮೊದಲು ಎಲ್ಲರೊಂದಿಗೆ ಚರ್ಚಿಸಿ ತೊಂದರೆಗೆ ಸಿಲುಕದಂತೆ ಬಹಳ ಎಚ್ಚರಿಕೆ ವಹಿಸುತ್ತಿದ್ದ. ಇದು ಶೇಖರನ ವಿವೇಕ, ಸಂಘಟನಾ ಶಕ್ತಿಯನ್ನು ತಿಳಿಸುತ್ತದೆ. ಸಾಮಾನ್ಯ ರೈತನ ಮಗನಾಗಿದ್ದರು ಗಾಂಧೀಜಿ ಬಗೆಗಿನ ಭಕ್ತಿ, ನಿಷ್ಠೆಗಳು ವಿಸ್ಮಯವನ್ನುಂಟು ಮಾಡುತ್ತದೆ.

ಸಾಮಾನ್ಯವಾಗಿ ಶೇಖರನ ಆದರ್ಶ ವಿಪರೀತವೆನ್ನಿಸಿದರು ಗಾಂಧೀಜಿ ಹಾಗೂ ಭಾರತವು ಸ್ವಾತಂತ್ರ್ಯ ಗಳಿಸುವ ಬಗೆಗಿದ್ದ ಆತನ ಧೃಡ ನಂಬಿಕೆಯನ್ನು ತಿಳಿಸುತ್ತದೆ. ಆತ್ಮವಿಶ್ವಾಸ, ಕಾಯಕದಲ್ಲಿನ ಶ್ರದ್ಧೆಯ ಮೂರ್ತಿಯಂತಿದ್ದ ಶೇಖರ ಎಂದು ಕಾದಂಬರಿಕಾರರು ಹೇಳುವ ಮಾತಿನಲ್ಲಿ ಅತಿಶಯವಿಲ್ಲ. 'ಬದುಕೇ ಬದುಕುತ್ತೇವೆ ಅಂತ ಗಟ್ಟಿ ಆಶಾ ಇರಬೇಕು ಯಾವಾಗಲೂ' (ಪುಟ–198) ಎಂಬ ಆಶಾವಾದಿಯೂ ಕೂಡ. ಮೆರೆಯಲೇಳು ಹೇಮಕ್ಕಾ, ಅವರೇ ಸುಖ ಉಣ್ಣಲಂತೆ, ಆ ಮಂತ್ರಿ ಪದವಿ, ಅಧಿಕಾರ ಆಶ ನಮಗ್ಯಾಕ ಹಳ್ಳೀ ಮಂದಿಗೆ? ಅದೆಲ್ಲಾ ಅವರಿಗೇ ಇರಲೇಳು. ನಮ್ಮ ಪಾಲಿಗೆ ಇದ್ದಾಳಲ್ಲ ನಮ್ಮ ಭೂಮಿತಾಯಿ. ಆಕೆ ಇರುವ ತನಕ ನಮಗೇನು ಚಿಂತಿ? (ಪುಟ–171) ಈ ರೀತಿಯ ಮಾತುಗಳಲ್ಲಿ ಶೇಖರನ ನಿಸ್ವಾರ್ಥ, ಸರಳತೆ, ಅಸದೃಶ್ಯ ಸಂತೃಪ್ತಿ ವ್ಯಕ್ತವಾಗುತ್ತದೆ. 'ಎಲ್ಲಾ ಹಿರಿಯ ಕಾಂಗ್ರೆಸ್ ಮುಖಂಡರು ಸುಮ್ಮನೆ ಸಭೆ, ಸಮಾರಂಭ, ಚಳವಳಿ ಎಂದು ಕುಳಿತಿರುವಾಗ ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ ಬಂದರ ನಿಮ್ಮಂಥ ಬಂಟರಿಂದಲೇ ಬರಬೇಕು' (ಪುಟ–171) ಎಂದು ಹೇಮಳಿಂದ ಹೊಗಳಿಸಿಕೊಳ್ಳುವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಜೊತೆಗೆ 'ನಿನ್ನ ಧೈರ್ಯದ ಮುಂದ ನಮ್ಮದೆಲ್ಲಾ ಏನು ಬಿಡು ಹೇಮಕ್ಕಾ...' (ಪುಟ–172) ಎಂದು ಹೇಳಿ ಎಲ್ಲರನ್ನೂ ಪ್ರೋತ್ಸಾಹಿಸುವ ಆದರ್ಶ ಸಹೃದಯಿ ಈತ.

ಹೇಮ ಕೂಡ ಶೇಖರನಷ್ಟೇ ಧೀರೋದಾತ್ತ ವ್ಯಕ್ತಿತ್ವವನ್ನು ಹೊಂದಿದ ಮಹಿಳೆ. ವಿಶ್ವನಾಥನಂತಹ ತರುಣನಿಗೆ ಚಳವಳಿಯಲ್ಲಿ ಧುಮುಕಲು ಕಾರಣಳಾಗುತ್ತಾಳೆ. 'ನೀ ಏನೇ ಹೇಳು ಹೇಮಾ, ಅಂತೂ ನೀ ಇಲ್ಲದಿದ್ದರೆ ಇದರಾಗ ಬರ್ತಿರಲಿಲ್ಲ' (ಪುಟ–192) ಎಂದು ವಿಶ್ವನಾಥ ಹೇಳುವ ಮಾತುಗಳಲ್ಲಿ ಸತ್ಯವಿದೆ. 'ನನ್ನ ಮಟ್ಟಿಗೆ ಹೇಳಬೇಕಾದರ, ಈ ಚಳವಳಿಯೊಳಗ ಇರೋತನಕ ನಾ ಹೆಣ್ಣು ಅನ್ನೋದನ್ನೇ ಮರೆತು ಇರ್ತೀನಿ. ಈಗ ನನ್ನ ಕಣ್ಣಿಗೆ ನೀನು ಬರೀ ಗಂಡಸಲ್ಲ, ನಾನು ಬರೀ ಹೆಂಗಸಲ್ಲ ಈಗ ನಡೆದಿರೋದು ಯುದ್ಧ. ಈ ಯುದ್ಧದಾಗ ನಾವಿಬ್ಬರು ಸೈನಿಕರು ಅಷ್ಟೇ. ಅರ್ಥ ಆಯ್ತೋ ಇಲ್ಲೋ ನಿನಗೆ?' (ಪುಟ–152) ಎಂಬಂತಹ ಮಾತುಗಳು ವಿಶ್ವನಾಥನನ್ನು ಚಳವಳಿಯಲ್ಲಿ ಕಾರ್ಯೋನ್ಮುಖನನ್ನಾಗಿಸುತ್ತವೆ. ಮುಂದೆ ವಿಶ್ವನಾಥ ಹೇಮಳನ್ನು ಪ್ರೀತಿಸುವ ವಿಚಾರ ಹೇಳಿದಾಗ 'ಈ ಹೋರಾಟ ಮುಗಿಯುವ ತನಕ ನಾನು ಬರೀ ಹೆಣ್ಣಲ್ಲ, ನೀನು ಬರೀ ಗಂಡಲ್ಲ, ಇಬ್ಬರು ಸೈನಿಕರು, ಅಣ್ಣ ತಮ್ಮಂದಿರಿದ್ದ ಹಾಗೆ...' (ಪುಟ–193) ಎಂಬಂತಹ ಮಾತುಗಳು ಹೇಮಾಳ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ. ಈಕೆ ಲಂಬಾಣಿ ವಸ್ತ್ರವನ್ನು ತೊಡಬಲ್ಲಳು. ಕಾಡಿನಲ್ಲೂ ತಿರುಗಬಲ್ಲಳು ಎಂದೂ ಚಳವಳಿಯಿಂದ ಹಿಂದೆ ಸರಿಯುವ ಮಾತುಗಳನ್ನೇ ಆಡದೇ ಪೋಲೀಸರಿಂದ ಗುಂಡೇಟು ತಿಂದು... 'ಹೌದು... ಹೌದು... ನೀ ಹೇಳುವ ಹಾಗೆ ಮತ್ತೆ ಗುಂಪು ಕೂಡಿಸೋಣ ಮತ್ತೆ ಕೆಲಸ ಮಾಡೋಣ. ಇದೆಂಥಾ ಗುಂಡು ಇದು! ಎಂದು ಹೇಳುತ್ತಲೇ ಪ್ರಾಣ ಬಿಟ್ಟ ಧೀರ ಮಹಿಳೆ'.

ವಿಶ್ವನಾಥ ಹೇಮಾಳಿಂದ ಪ್ರೇರಿತನಾಗಿ ಶ್ರೀಮಂತ ಬದುಕನ್ನು ತಿರಸ್ಕರಿಸಿ ಸ್ವಾತಂತ್ರ್ಯ ಚಳವಳಿಗೆ ಧುಮುಕಿದ. ತನ್ನ ತಂದೆ ಬಾಬಾಸಾಹೇಬರನ್ನು ಕಾಣಲು ಹೋಗದೆ, ಹೇಮಾಳೊಂದಿಗೆ ಕರಪತ್ರ

ಹೊರಡಿಸುವ ಕಾರ್ಯದಲ್ಲಿ ಮಗ್ನನಾಗಿದ್ದು, ಶೇಖರನ ಬೆಂಬಲಕ್ಕೆ ನಿಂತವನು. ಚಳಿ, ಮಳೆ ಎನ್ನದೆ ಕಾಡಿನಲ್ಲಿ ಅಲೆದವನು. ಕೊನೆಗೆ ಪೋಲೀಸರಿಗೆ ಮೊದಲು ಬಲಿಯಾದವನು. 'ನನ್ನ ಕಿಸೇದೊಳಗೆ ಪಿಸ್ತೂಲು ಅದ... ತುಂಬಿದ ಪಿಸ್ತೂಲು... ಅಪ್ಪನಿಗೆ ಕೊಡಿರಿ ಅದನ್ನ. ನೀವೇ ಅಪ್ಪಣೆ ಮಾಡ್ರಿ ಅವಗೆ. ಇಂದಿನಿಂದ ನಮ್ಮ ಅಪ್ಪನೂ ಸ್ವಾತಂತ್ರ್ಯದ ಸೈನಿಕ... ಅಪ್ಪಾ... ಅಪ್ಪಾ' ಎಂದು ಹೇಳುತ್ತಲೇ ಮರಣ ಹೊಂದಿದವ (ಪುಟ–214).

'ಮೋಹದ ಬಲೆಯಲ್ಲಿ' ಹಾಗೂ 'ಜರತಾರಿ ಜಗದ್ಗುರು' ಕಾದಂಬರಿಯಲ್ಲಿ ಮಠ ಹಾಗೂ ಸ್ವಾಮೀಜಿಗಳ ಬಗ್ಗೆ ಬಹಳ ಅನುಮಾನದಿಂದ ನೋಡಿದ ಬಸವರಾಜ ಕಟ್ಟೀಮನಿಯವರು ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಮಠದ ಪೀಠಾಧಿಪತಿಗಳು ನೆರವಾಗುತ್ತಾರೆ ಎಂಬುದನ್ನು ಧ್ವನಿಸಿರುವುದು ವಿಶೇಷವಾಗಿದೆ. ಪೋಲೀಸರಿಂದ ತಪ್ಪಿಸಿಕೊಂಡು ಬಂದ ಶೇಖರ, ಹೇಮ, ವಿಶ್ವನಾಥ ಸಹಿತ ಹಲವರಿಗೆ ಆಶ್ರಯ ನೀಡುತ್ತಾರೆ. ಚಳವಳಿಗಾರರಿಗೆ ಆಶ್ರಯ ನೀಡಿದ್ದಕ್ಕಾಗಿ ಅರೆಸ್ಟ್ ಮಾಡಬೇಕಾಗುತ್ತದೆ ಎಂದು ಕೀರ್ತಿನಾಥ ಸ್ವಾಮೀಜಿಯವರಿಗೆ ಹೇಳಿದಾಗ 'ಈ ಮಠದ ಇತಿಹಾಸ ಏನು ಅನ್ನೋದನ್ನ ನೀವು ಮರೆತಂತಿದೆ. ಮೊದಲಿಂದಲೂ ಸ್ವಾತಂತ್ರ್ಯ ಪ್ರಿಯ ಮಠ ನಮ್ಮದು. ಕಿತ್ತೂರು ದೇಸಾಯರ ಗುರುಪೀಠ ಇದು. ಈ ಸರಕಾರಕ್ಕೆ ವಿರುದ್ಧವಾಗಿ ಕತ್ತಿ ಹಿರಿದು ನಿಂತ ಚೆನ್ನಮ್ಮ ರಾಣಿ ಈ ಮಠದ ಭಕ್ತೆಯಾಗಿದ್ದಳು. ಸೆರೆಮನೆಗೆ ಹೋಗುವುದರಿಂದ ಪೀಠದ ಮರ್ಯಾದೆ ಹೆಚ್ಚಾಗುವುದು. ನಮ್ಮ ಪೂಜ್ಯ ಗುರುಗಳ ಪವಿತ್ರ ಆತ್ಮಗಳಿಗೂ ಸಂತೋಷವಾಗುವುದು ಎಂದು ಸ್ವಾಮೀಜಿ' (ಪುಟ–202) ಹೇಳುವ ಮಾತುಗಳನ್ನು ಕೇಳಿದಾಗ ಹಾಗೂ ಗುಂಡೇಟು ತಿಂದು ಬಂದ ವಿಶ್ವನಾಥನನ್ನು ಬದುಕಿಸಲು ನೆಡೆಸುವ ಹೋರಾಟವನ್ನು ನೋಡಿದಾಗ ಕಟ್ಟೀಮನಿಯವರು ಈ ಕಾದಂಬರಿ ಬರೆದಾಗ ಮಠಗಳ ಬಗ್ಗೆ ಅಷ್ಟೊಂದು ದುಃಖ, ಕೋಪ, ಸಿಟ್ಟು ಇರಲಿಲ್ಲವೆಂದು ಕಾಣುತ್ತದೆ.

ಶೇಖರನ ತಾಯಿ ಪಾರ್ವತಮ್ಮ ಅಪ್ರತಿಮ ದೇಶಭಕ್ತೆ. ತನ್ನ ಮಗನ ಕೆಲಸ ಕಾರ್ಯಗಳಿಗೆ ಪ್ರೋತ್ಸಾಹ ನೀಡುವುದರ ಜೊತೆಗೆ ಕುಲಕರ್ಣಿ ಮಾಡುತ್ತಿದ್ದ ಸಂಚುಗಳ ಬಗ್ಗೆ ಗೌಪ್ಯವಾಗಿ ತಿಳಿಸುತ್ತಿದ್ದಳು. 'ನನ್ನ ತೋಳಿನಾಗ ಶಕ್ತಿ ಇರೊತನಕ ಯಾರಿಗೂ ಅಂಜುವಾಕೆ ಅಲ್ಲ ನಾನು. ಕೂಲಿ–ಕುಂಬಳಿ ಮಾಡಿ ಇವರೆಲ್ಲರ ಹೊಟ್ಟೆಗೆ ಹಾಕ್ತೀನಿ... ಆ ಕೆಂಪು ಮಾರಿ ಸರಕಾರಕ್ಕೆ ಮಾತ್ರ ಎಂದೆಂದೂ ಅಂಜುವುದಿಲ್ಲ...' (ಪುಟ–239) ಎಂಬ ಮಾತುಗಳಿಂದ ವೃದ್ದರಲ್ಲೂ ದೇಶಪ್ರೇಮವನ್ನು ಕಾಣುತ್ತೇವೆ.

ಬ್ರಿಟಿಷ್ ಕಾಲಘಟ್ಟದ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಎಲ್ಲರು ಭಾಗವಹಿಸಿ, ಪ್ರೋತ್ಸಾಹದಾಯಕರಾಗಿದ್ದರು ಎಂಬುದು ಸುಳ್ಳು. 'ಊರು ಇದ್ದ ಕಡೆ ಹೊಲಸು ಇರುವಂತೆ ಚಳವಳಿಗಾರರ ವಿರುದ್ಧ ದೂರು ನೀಡಲು, ಆಳುವ ಸರ್ಕಾರಕ್ಕೆ ಸಹಾಯಕರಾಗಿ ಕೆಲವರು ಟೊಂಕ ಕಟ್ಟಿ ನಿಲ್ಲುತ್ತಾರೆ. ಇವರಲ್ಲಿ ಬ್ರಿಟಿಷರ ಬಿರುದು, ಹಣ, ಅಧಿಕಾರ, ಭೂಮಿಗಾಗಿ ಆಸೆ ಪಟ್ಟವರಾದ, ಕುಲಕರ್ಣಿ ರಂಗಣ್ಣ, ಬಾಬಾಸಾಹೇಬ ದೇಸಾಯಿ, ಸೂರನಗೌಡ ಇನ್ನೂ ಮುಂತಾದವರು ಮುಖ್ಯರಾಗುತ್ತಾರೆ. ಕುಲಕರ್ಣಿ ರಂಗಣ್ಣ ಚಳವಳಿಗಾರರ ಮೇಲೆ ದೂರು ನೀಡಿ ಸಂಗಣ್ಣನ ತಾಯಿಯ ಕೊಲೆಗೆ ಕಾರಣನಾಗುತ್ತಾನೆ. ಬಾಬಾಸಾಹೇಬ ದೇಸಾಯಿ ದಿವಾನ್ ಬಹದ್ದೂರ್ ಹುದ್ದೆಗಾಗಿ ಮಗನಾದ ವಿಶ್ವನಾಥನ ಕೊಲೆಗೆ ಸಹಾಯಕನಾದರೆ, ಸೂರನಗೌಡ ತನ್ನ ಮಗಳನ್ನು ಶೇಖರನಿಗೆ ಮದುವೆ ಮಾಡಿಕೊಡುವ ಮಾತೆತ್ತಿ, ಮನೆಗೆ ಊಟಕ್ಕೆ ಆಹ್ವಾನಿಸಿ ಚಳವಳಿಯಲ್ಲಿ ಭಾಗವಹಿಸಿದ ಇಪ್ಪತ್ತು ಮಂದಿಯ ಬಂಧನಕ್ಕೆ ಕಾರಣನಾಗುತ್ತಾನೆ. 'ಇದೊಂದು ನಾಗರಹಾವು. ಉಳಿದ ಹಾಂಗಂತಲ್ಲ ನಮ್ಮ ಊರಾಗ' (ಪುಟ–82)

ಹಾಗೂ ‘ಇಂಥವರಿಂದಲೇ ಹಿಂದುಸ್ತಾನ ಪರತಂತ್ರ ಆಯ್ತು. ಇಂಥವರಿಂದಲೇ ಇನ್ನೂ ಪರತಂತ್ರ ಆಗಿ ಉಳಿದಿರೋದು’ (ಪುಟ–66) ಎಂದು ಲೇಖಕರು ನೇರವಾಗಿಯೇ ಹೇಳಿಕೊಂಡಿದ್ದಾರೆ. ಇದು ಇವತ್ತಿಗು ನಿಜವಾಗಿರುವುದು ವಿಷಾದನೀಯ. ಹಣ, ಅಧಿಕಾರಕ್ಕಾಗಿ ಏನೂ ಬೇಕಾದರೂ ಮಾಡಬಲ್ಲ ರಾಜಕಾರಣಿಗಳು ನಮ್ಮ ದೇಶದಲ್ಲಿ ಈಗಲೂ ಇದ್ದಾರೆ. ಇದರಿಂದಾಗಿಯೇ ಲೇಖಕರು ಇಂಥವರ ವ್ಯಕ್ತಿತ್ವವನ್ನು ಚೆನ್ನಾಗಿಯೇ ಗುರುತಿಸಿದ್ದಾರೆ.

ಸಂಗಣ್ಣ ಬಹಳ ಚತುರ ವ್ಯಕ್ತಿತ್ವ ಹೊಂದಿದ್ದು, ಕೊನೆಗೆ ಭಾವಾತಿರೇಕದ ಕಾರಣದಿಂದಲೇ ದುರ್ಮರಣಕ್ಕೀಡಾಗುತ್ತಾನೆ. ತನ್ನ ತಾಯಿ ಕೊಂದಿದ್ದರ ಕಾರಣಕ್ಕಾಗಿ ‘ಇಂದಿಗೆ ನನ್ನ ಪಣಾ ಮುಗಿದಂಗಾಯ್ತು. ಒಂದು ಜೀವಕ್ಕೆ ಒಂದು ಜೀವಾ ತಕ್ಕೊಂಡೆ. ಹಾ! ಹಾ! ಹಾ! ಹಾ! ನನ್ನ ಅವ್ವಾ! ಅವ್ವಾ!” ಎಂದು ಹೇಳುತ್ತಲೇ ತಾನು ಗುಂಡಿಗೆ ಬಲಿಯಾಗುತ್ತಾನೆ.

ಕೀರ್ತಿನಾಥ ಭಾರತೀಯನಾದರೂ, ಅಧಿಕಾರದ ಆಸೆಗೆ ಸಿ.ಐ.ಡಿ.ಯಾಗಿ ನೇಮಕಗೊಂಡು ತನ್ನ ವ್ಯಕ್ತಿತ್ವವನ್ನೇ ಮಾರಿಕೊಂಡಿದ್ದಾನೆ. ಕೊನೆಯವರೆಗೂ ಹೇಮ, ವಿಶ್ವನಾಥ, ಶೇಖರನ ಸಹಿತ ಚಳವಳಿಗಾರರನ್ನು ಹಿಡಿಯಲು ಪ್ರಯತ್ನಿಸಿ ತಾನು ಮರಣ ಹೊಂದುತ್ತಾನೆ. ಅದೇ ರೀತಿ ಬಾಬಾಸಾಹೇಬ ದೇಸಾಯಿ ಅಧಿಕಾರದ ಆಸೆಗೆ ಬಲಿಯಾಗಿ ತನ್ನ ಮಗ ಸಾವಿಗೆ ಕಾರಣನಾಗುತ್ತಾನೆ.

1942ರ ಸುಮಾರಿನ ಉತ್ತರ ಕರ್ನಾಟಕದ ಹಳ್ಳಿಯ ಬದುಕಿನ ಚಿತ್ರಣ ಈ ಕಾದಂಬರಿಯಲ್ಲಿ ವ್ಯಕ್ತವಾಗಿರುವುದರಿಂದ ಇದೊಂದು ರಾಜಕೀಯ ಕಾದಂಬರಿ ಮಾತ್ರವಲ್ಲ. ಏಕೆಂದರೆ ಲೇಖಕರು ಗ್ರಾಮೀಣ ಬದುಕನ್ನು ಹತ್ತಿರದಿಂದ ಕಂಡವರು. ಒಂದೊತ್ತಿನ ಊಟಕ್ಕೂ ಕಷ್ಟಪಡುವ ರೈತರ ವಾಸ್ತವಿಕ ಬದುಕನ್ನು ನೈಜವಾಗಿಯೇ ಚಿತ್ರಿಸಿದ್ದಾರೆ.

ಬಸವರಾಜ ಕಟ್ಟೀಮನಿಯವರು ಒಬ್ಬ ಸಾಹಿತಿಯಾಗಿ ತಮ್ಮ ಕೃತಿಗಳಲ್ಲಿ ತಾಂತ್ರಿಕತೆಯ ಕಸರತ್ತು ನಡೆಸಿದವರಲ್ಲ. ನೈಜತೆಯನ್ನು ಯಾರಿಗೂ ಹೆದರದೆ, ಬೆದರದೆ ಅಮೂಲಾಗ್ರವಾಗಿ ಬಿಂಬಿಸಿದವರು. ಇದರಿಂದ ಕಾದಂಬರಿಗೊಂದು ಸಹಜ ಗತಿ ಮತ್ತು ಶೈಲಿ ಲಭಿಸಿದೆ. ಕಾದಂಬರಿಯ ಬಹುಭಾಗ ನಿರೂಪಣೆಯ ಧಾಟಿಯಲ್ಲಿಯೇ ಬೆಳೆದಿದ್ದರೂ ಶೇಖರ, ಹೇಮ, ವಿಶ್ವನಾಥ ಮುಂತಾದವರ ಪಾತ್ರ ವಿಶ್ಲೇಷಣೆ ಮಾಡುವಾಗ ಯಾವುದೇ ಪವಾಡ ಪುರುಷರ ರೀತಿಯಾಗಿ ಅಥವಾ ಅತಿರೇಕವಾಗಿ ಇಲ್ಲವೆ ನಾಯಕರಿಗೆ ಕಷ್ಟಗಳೇ ಇಲ್ಲವೇನೋ? ಎಂಬಂತೆ ಚಿತ್ರಿಸಿಲ್ಲ. ಆದರ್ಶ ಹಾಗೂ ಪ್ರೇರಣೆಯಾಗುವಂತೆ ಚಿತ್ರಿಸಿದ್ದಾರೆ. ಯಾವ ಹೋರಾಟವನ್ನು ಮಾಡದೆ ಅಧಿಕಾರಕ್ಕೆ ಹಪಾಹಪಿಸುವರನ್ನು ಕಂಡರೆ ಇವರಿಗೆ ಬಹಳ ಕೋಪವಿದೆ. ಇದಕ್ಕೆ ಕಾದಂಬರಿಯ ಉದ್ದಕ್ಕೂ ಸಾಕ್ಷ್ಯಗಳು ದೊರೆಯುತ್ತವೆ.

ಇನ್ನೂ ಪಟ್ಟಣದಲ್ಲಿ ಕುಳಿತು ಅಧಿಕಾರ ನಡೆಸುವವರ ಬಗ್ಗೆ ಅಸಹನೆಯಿಂದಲೆ ಮಾತನಾಡಿದ್ದಾರೆ. ಪಟ್ಟಣಗಳ ಜನರೇ ಹೀಗೆ ವಿಶ್ವನಾಥ ಎಲ್ಲರು ಆರಂಭ ಶೂರರು. ಮೊದಲು ಹುಯ್ ಅಂತ ಮುಗಿಲು ಮುಟ್ಟುವ ತನಕ ಹಾರ್‍ಯಾಡುತ್ತಾರೆ. ಹಾರ್‍ಯಾಡಿ ಹಾರ್‍ಯಾಡಿ ಕಾಲು ಸೋತು ಅಂದ್ರ, ಬಿಡ್ತಾರ. ಆಮ್ಯಾಲ ಅವರನೆಬ್ಬಿಸೋದು ಬ್ರಹ್ಮನಿಂದಲೂ ಸಾಧ್ಯವಿಲ್ಲ (ಪುಟ–91) ಹೀಗೆ ಹೇಳುತ್ತಾ ಹಳ್ಳಿ ಮಂದಿ ಅಂದ್ರೆ ಮಿಲಿಟ್ರಿಯೊಳಗಿನ್ ಸೈನಿಕರಿದ್ದಾಂಗ ಹೇಮ (ಪುಟ–93) ಎಂಬ ಮಾತುಗಳನ್ನು ಕೇಳಿದಾಗ ಪಟ್ಟಣದವರಿಗೆ ಹಳ್ಳಿಯ ಪರಿಚಯವಿಲ್ಲ, ಸಮಸ್ಯೆಯ ತಿಳಿವಿಲ್ಲ, ಮಾಡು ಇಲ್ಲವೆ ಮಡಿ ಹೋರಾಟಕ್ಕೆ ಇವರು ಹಳ್ಳಿಗರಂತೆ ಧುಮುಕಲಿಲ್ಲ ಎಂಬ ನೋವು ಲೇಖಕರಿಗೆ ಇರುವಂತಿದೆ.

ಕಾದಂಬರಿಯಲ್ಲಿ ಹೇಮಳ ಪಾತ್ರ ಚಿತ್ರಣ ವಿಶಿಷ್ಟತೆಯಿಂದ ಕೂಡಿದೆ. ಸಾಂಪ್ರದಾಯಿಕ ಸ್ತ್ರೀ

ಚಿತ್ರಣದ ಚೌಕಟ್ಟನ್ನು ಮುರಿದು ಕ್ರಾಂತಿಯನ್ನುಂಟು ಮಾಡಿದ್ದಾರೆ. ಸಾಮ್ಯವಾದದಲ್ಲಿ ನಿಷ್ಠೆಯುಳ್ಳ ಲೇಖಕರು ಹೇಮಾಳನ್ನು ಪುರುಷ ಸಮಾನ ಭಾವದಿಂದಲೇ ಹೋರಾಟದಲ್ಲಿ ತೊಡಗಿಸಿದ ರೀತಿ ಮೆಚ್ಚುವಂತದ್ದು.

ಒಟ್ಟಿನಲ್ಲಿ ಮಾಡಿ ಮಡಿದವರು ಕಾದಂಬರಿಯ ಕಥಾವಸ್ತು ಹಳ್ಳಿಗಳಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಒಂದು ಜೀವಂತ ಚರಿತ್ರೆ. ಇಲ್ಲಿ ಅಬಾಲವೃದ್ಧರೆಲ್ಲಾ ದೇಶಕ್ಕಾಗಿ ಹೋರಾಡಿದವರು. ಇವರ ತ್ಯಾಗ ಅಪ್ರತಿಮವಾದದ್ದು. ಶೇಖರ ಸಹಿತ ಎಲ್ಲರು ಪೋಲೀಸರೊಂದಿಗೆ ಹೋರಾಡಿ ಹುತಾತ್ಮರಾಗುತ್ತಾರೆ. ಆದರೆ ಆ ಸ್ಥಳ ರುದ್ರಭೂಮಿಯಂತೆ ಭಯಾನಕವಾಗದೆ, ಸ್ವಾತಂತ್ರ್ಯ ಸೂರ್ಯ ಉದಯಿಸುವ ಬೆಳಗಿನಂತೆ ಆಶಾದಾಯಕವಾಗಿದೆ. ಶೇಖರ ಮತ್ತು ಹೇಮಾಳಂತಹ ಪಾತ್ರಗಳು ಸ್ವಾತಂತ್ರ್ಯ ಹೋರಾಟದ ಸಂದರ್ಭಗಳಲ್ಲಿ ಕಾಮ, ಪ್ರೇಮಗಳಂತಹ ವೈಯಕ್ತಿಕ ವಿಚಾರಗಳಿಗೆ ಅವಕಾಶವಿಲ್ಲದೆ ಸ್ವಾತಂತ್ರ್ಯವೇ ಪರಮ ಗುರಿ ಎಂಬುದನ್ನು ಸಾರುತ್ತವೆ. ಹೀಗಾಗಿ ಅಭಿಮಾನ ಶೂನ್ಯರಲ್ಲೂ ದೇಶಾಭಿಮಾನ ಮೂಡಿಸಲು ಯತ್ನಿಸುತ್ತದೆ.

ಒಂದು ಕೃತಿಯ ಯಶಸ್ವಿಗೆ ಭಾಷೆಯೂ ಒಂದು ಮುಖ್ಯ. ಕಾದಂಬರಿಕಾರರು ಪ್ರಾರಂಭದಿಂದ ಅಂತ್ಯದವರೆಗೂ ಆಡುಮಾತಿನ ಗ್ರಾಮ್ಯ ಶಬ್ದಗಳಿಂದಲೇ ಸರಳ, ಸುಂದರ ವಾಕ್ಯ ರಚಿಸಿದ್ದಾರೆ. ಮುಕ್ತಾಯವು ದುರಂತಮಯವಾಗಿ ಕಾದಂಬರಿಯ ಶೀರ್ಷಿಕೆಗೆ ನ್ಯಾಯ ಒದಗಿಸಿದೆ. ಸ್ವಾತಂತ್ರ್ಯದ ಹೋರಾಟವನ್ನು ಚಿತ್ರಿಸುವ ಕನ್ನಡದ ಅತ್ಯಂತ ವಿರಳ ಕಾದಂಬರಿಗಳ ಸಾಲಿನಲ್ಲಿ ಈ ಕಾದಂಬರಿಗೆ ಪ್ರಮುಖ ಸ್ಥಾನವಿದೆ. ಹಾಗೆಯೇ ಕೇವಲ ಅಂದಿನ ರಾಜಕೀಯ ಚಿತ್ರಣದ ಜೊತೆಗೆ ಅಂದಿನ ಹಳ್ಳಿಗಾಡಿನ ಸಾಮಾಜಿಕ ಬದುಕನ್ನು ಚಿತ್ರಿಸುವುದರಿಂದ ಸಾಮಾಜಿಕ ಮಹತ್ವವು ಬಂದೊದಗಿದೆ.

ಅಂದಿನ ಬ್ರಿಟಿಷ್ ಅಧಿಕಾರಿಗಳ ಮನೋಧರ್ಮ ಒಂದು ರೀತಿಯಾಗಿದ್ದರೆ, ಇಂದಿನ ಅಧಿಕಾರಶಾಹಿ ಹಾಗೂ ರಾಜಕೀಯ ಮನೋಧರ್ಮಕ್ಕೂ ವ್ಯತ್ಯಾಸಗಳು ಬಹಳ ಕಡಿಮೆಯೆಂದು ಹೇಳಬಹುದು. ಈ ದೃಷ್ಟಿಯಿಂದಲೂ ಈ ಕಾದಂಬರಿ ಪರಿಪೂರ್ಣ ದಾಖಲೆಯಾಗುತ್ತದೆ. ಆದರೆ ಬಂದೂಕು ಹಿಡಿದ ಮಾತ್ರಕ್ಕೆ ನಾವು ಹಿಂಸೆ ಮಾಡುವುದಕ್ಕೆ ಹೊರಟಿವಿ ಅಂತ ತಿಳ್ಕೊಬಾರ್ದು ಎಂಬ ನೆಲೆಯಲ್ಲಿ ಹೊರಟು ಕೊನೆಗೆ ಇದನ್ನು ಸಾಧಿಸಲಾರದೆ ವಿಫಲವಾಗುತ್ತದೆ. ಅನೇಕ ಜೀವಗಳ ಬಲಿ ಪಡೆಯುತ್ತದೆ. ಇದು ಈ ಕೃತಿಯ ಮಿತಿಯೂ ಹೌದು. ಲೇಖಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರಿಂದ ಈ ರೀತಿಯಾಗಿ ಅನುಸರಿಸಬಹುದು ಅನ್ನಿಸುತ್ತದೆ.

ಕಟ್ಟೀಮನಿಯವರ ಅವರ ಮೊದಲ ಕಾದಂಬರಿಯಾದ ಸ್ವಾತಂತ್ರ್ಯದೆಡೆಗೆ (1944) ಕೃತಿಯ ಮುಂದುವರೆದ ಭಾಗವೆಂಬಂತೆ ತೋರುವ ಮಾಡಿ ಮಡಿದವರು ಕಾದಂಬರಿಯು ಸ್ವಾತಂತ್ರ್ಯದ ಚಳವಳಿಯ ಕಾಲದ ವಸ್ತುವನ್ನು ಒಳಗೊಂಡಿದೆ. ಕಟ್ಟೀಮನಿಯವರು 1942ರ ಸ್ವಾತಂತ್ರ್ಯದ ಚಳವಳಿಯಲ್ಲಿ ನೇರವಾಗಿ ಧುಮುಕಿ ಸೆರೆಮನೆ ವಾಸವನ್ನು ಅನುಭವಿಸಿದವರು. ಅವರ ಆ ಕಾಲದ ಅನುಭವವನ್ನು ಕಾದಂಬರಿಯಲ್ಲಿ ತರುವ ಪ್ರಯತ್ನ ಮಾಡಿದ್ದಾರೆ. 'ಈ ಕಾದಂಬರಿ ಪ್ರಕಟವಾದಾಗ ಓದಿ ಸಂತೋಷಪಟ್ಟು ಅಂತಹ ಐವತ್ತು–ಅರವತ್ತು ಕಾದಂಬರಿಗಳು ನಮ್ಮಿಂದ ಬರಲಿ ಎಂದು ಅ.ನ.ಕೃ ಪ್ರಶಂಸಿಸಿ ಹರಸಿ ಪ್ರೋತ್ಸಾಹಿಸಿದರು'[1] ಎಂದು ಹೇಳುತ್ತಾರೆ.

ಗೋಪಾಲಕೃಷ್ಣ ಅಡಿಗರು 'ನಿಮ್ಮ ಕೃತಿಗಳಲ್ಲಿ ಎಂಥ ವಿಮರ್ಶೆಯೂ ಕೊಲ್ಲಲಾರದ ಜೀವಶಕ್ತಿಯುಂಟು; ಸಹಜತೆಯುಂಟು; ಸೌಂದರ್ಯ ದೃಷ್ಟಿಯುಂಟು; ಕಲೆಗಾರಿಕೆಯುಂಟು'[2] ಎಂದು ಹೇಳುತ್ತಾರೆ. ಹೀಗಾಗಿ ಬಸವರಾಜ ಕಟ್ಟೀಮನಿಯವರು ಸ್ವಾನುಭವದಿಂದ ಪ್ರೇರೇಪಿತರಾದವರು. ಕಾಲ್ಪನಿಕತೆಯು ಒಂದು

ಭಾಗವೇ ಹೊರತು, ಅವರು ಕಾಲ್ಪನಿಕತೆಯನ್ನು ಹರಸಿ ಹೊರಟವರಲ್ಲ. ವಾಸ್ತವತೆ ನೈಜತೆಯತ್ತ ಹೊರಳಿ ತನ್ನ ಗುರಿ ಮುಟ್ಟಿದವರು.

**ಕೊನೆಟಿಪ್ಪಣಿಗಳು**

1. ನಾಯಕ್ ಜಿ.ಹೆಚ್. (ಸಂ.) (2002). *ಗುಣಗೌರವ.* ಪುಟ. 121
2. ಅದೇ. ಪುಟ.121

**ಆಕರ ಗ್ರಂಥ**


- ಬಸವರಾಜ ಕಟ್ಟೀಮನಿ. (1985). *ಮಾಡಿ ಮಡಿದವರು.* ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ.


**ಪರಾಮರ್ಶನ ಗ್ರಂಥಗಳು**


- ದೇ.ಜ.ಗೌ ಮತ್ತು ಸಿ.ಪಿ.ಕೆ (ಸಂ.) (1969). *ಬಸವರಾಜ ಕಟ್ಟೀಮನಿ ಬದುಕು ಬರಹ.* ಗೀತಾ ಬುಕ್‌ಹೌಸ್.
- ಕೃಷ್ಣಯ್ಯ, ಎಂ.ಹೆಚ್. ಮತ್ತು ಸಿದ್ಧಲಿಂಗಯ್ಯ (ಸಂ.) (2001). *ಸಾಲುದೀಪಗಳು.* ಕನ್ನಡ ಸಾಹಿತ್ಯ ಅಕಾಡೆಮಿ.
- ಮಾಲತಿ ಪಟ್ಟಣಶೆಟ್ಟಿ. (1999). *ಬಸವರಾಜ ಕಟ್ಟೀಮನಿಯವರ ಸಾಹಿತ್ಯ.* ಕೇಂದ್ರ ಸಾಹಿತ್ಯ ಅಕಾಡೆಮಿ.
- ನಾಯಕ್ ಜಿ. ಎಚ್. (2000). *ಶತಮಾನದ ಕನ್ನಡ ಸಾಹಿತ್ಯ.* ರಾಘವೇಂದ್ರ ಪ್ರಕಾಶನ.
- ನಾಯಕ್ ಜಿ.ಎಚ್. (2002). *ಗುಣಗೌರವ.* ಲೋಹಿಯಾ ಪ್ರಕಾಶನ.
- ಪ್ರಭಾಕರ್, ನಾ. (2002). *ತ.ರಾ.ಸು.* ನವ ಕರ್ನಾಟಕ ಪ್ರಕಾಶನ.
- ರಹಮತ್ ತರೀಕೆರೆ (ಸಂ.) (2001). *ಕನ್ನಡ ಸಾಹಿತ್ಯ ಮೀಮಾಂಸೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ರಾಘವೇಂದ್ರರಾವ್ ಎಚ್.ಎಸ್. (2005). *ಪ್ರಗತಿಶೀಲತೆ.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸುಬ್ಬರಾವ್, ತ.ರಾ. (1997). *ಮಂಥನ.* ತ.ರಾ.ಸು. ಪ್ರತಿಷ್ಠಾನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 21-26
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪೋಷಕತ್ವ ವಂಚಿತ ಮಕ್ಕಳ ರಕ್ಷಣೆಗೆ ಸರ್ಕಾರ ನೀಡಿರುವ ಪ್ರಾಶಸ್ತ್ಯ ಮತ್ತು ಪುನರ್ವಸತಿ ವ್ಯವಸ್ಥೆಗಳು: ಒಂದು ಅಧ್ಯಯನ

**ರಾಘವೇಂದ್ರ ಎಚ್. ಸಿ**

ಸಂಶೋಧನಾ ವಿದ್ಯಾರ್ಥಿ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

***Abstract:***

*ಆರೋಗ್ಯ ಸಮಸ್ಯೆ, ಅಕಾಲಿಕ ಮರಣ ಹಾಗೂ ಆಕಸ್ಮಿಕ ಘಟನೆಗಳಿಂದ ಪೋಷಕರನ್ನು ಕಳೆದುಕೊಂಡ ಮಕ್ಕಳು ಸೂಕ್ತ ರಕ್ಷಣೆ ಮತ್ತು ಪೋಷಣೆ ಇಲ್ಲದೆ ಪೋಷಕತ್ವ ವಂಚಿತರಾಗುತ್ತಾರೆ. ಅಂತಹ ಮಕ್ಕಳ ರಕ್ಷಣೆ ಮತ್ತು ಪೋಷಣೆಗೆ ಇರುವ ಏಕೈಕ ಕಾಯ್ದೆಯೇ ಮಕ್ಕಳ ನ್ಯಾಯಕಾಯ್ದೆ–2015. ಈ ಕಾಯ್ದೆಯ ಮೂಲಕ ಮಕ್ಕಳಿಗೆ ಸೂಕ್ತ ಪುನರ್ವಸತಿ ಮತ್ತು ಸಾಮಾಜಿಕ ಭದ್ರತೆ ನೀಡಿ, ಮಕ್ಕಳಿಗೆ ಹೆಚ್ಚು ಪ್ರಾಶಸ್ತ್ಯನೀಡಿ ಮುಖ್ಯವಾಹಿನಿಗೆ ತರುವುದೇ ಈ ಕಾಯ್ದೆಯ ಮುಖ್ಯ ಉದ್ದೇಶವಾಗಿದೆ. ಪ್ರಸ್ತುತ ಲೇಖನದಲ್ಲಿ ಪೋಷಕತ್ವ ವಂಚಿತ ಮಕ್ಕಳಿಗೆ ಸರ್ಕಾರವು ನೀಡಿರುವ ಪ್ರಾಶಸ್ತ್ಯ ಮತ್ತು ಪುನರ್ವಸತಿ ವ್ಯವಸ್ಥೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.*

***Keywords:*** *ಪೋಷಕತ್ವ ವಂಚಿತ ಮಕ್ಕಳು, ಮಕ್ಕಳ ಹಕ್ಕುಗಳು, ಮಕ್ಕಳ ನ್ಯಾಯಕಾಯ್ದೆ–2015, ಮಕ್ಕಳ ರಕ್ಷಣೆ, ಪುನರ್ವಸತಿ.*

**ಪೀಠಿಕೆ**

ಕೋವಿಡ್–19 ಸಾಂಕ್ರಾಮಿಕವು ಮಕ್ಕಳು ಮತ್ತು ಹದಿಹರೆಯದವರು ಸೇರಿದಂತೆ ಪ್ರತಿಯೊಬ್ಬರಿಗೂ ಮಾನಸಿಕ ಆರೋಗ್ಯದ ಮೇಲೆ ನಕರಾತ್ಮಕ ಪರಿಣಾಮಗಳನ್ನು ಬೀರಿದೆ. ಸವಾಲುಗಳಲ್ಲಿ ದುಃಖ, ಭಯ, ಅನಿಶ್ಚಿತತೆ, ಸಾಮಾಜಿಕ ಅಭದ್ರತೆ ಉಂಟಾಗಿ, ಪೋಷಕರನ್ನು ಕಳೆದುಕೊಂಡ ಮಕ್ಕಳು ಪ್ರತ್ಯೇಕವಾದರು. ನೂರಾರು ಕುಟುಂಬಗಳು ಬೀದಿಗೆ ಬಂದವು. ಇದರ ಪರಿಣಾಮ ನೇರವಾಗಿ ಮಕ್ಕಳ ಮಾನಸಿಕ ಆರೋಗ್ಯದ ಮೇಲೆ ನಕಾರಾತ್ಮಕ ಪರಿಣಾಮ ಬೀರಿದವು. ಇದರ ಪರಿಣಾಮ ನೇರವಾಗಿ ಸಂಭವಿಸಿದ್ದು ಕೋವಿಡ್–19 ಸಂದರ್ಭದಲ್ಲಿ, ಭಾರತ ಮಾತ್ರವಲ್ಲದೇ ಇಡೀ ವಿಶ್ವದಲ್ಲಿಯೇ ಅನೇಕ ಮಕ್ಕಳು ತಮ್ಮ ಪೋಷಕರನ್ನು ಕಳೆದುಕೊಂಡು ಬೀದಿಗೆ ಬಂದಿದ್ದಾರೆ.

ಪ್ರಪಂಚದಾದ್ಯಂತ 35 ದಶಲಕ್ಷಕ್ಕೂ ಹೆಚ್ಚು ಮಕ್ಕಳಿಗೆ ರಕ್ಷಣೆಯ ಅಗತ್ಯವಿದೆ ಮತ್ತು 20 ದಶಲಕ್ಷ ಮಕ್ಕಳು ಪೋಷಕರು ಅಥವಾ ಯಾವುದೇ ಕಾನೂನು ಪಾಲಕರಿಲ್ಲದೆ ಪರದಾಡುತ್ತಿದ್ದಾರೆ. ಕೋವಿಡ್–19 ಲಾಕ್‌ಡೌನ್ ಸಮಯದಲ್ಲಿ ಮನೆಯಲ್ಲಿ ಸಿಲುಕಿಕೊಂಡಿದ್ದ ಆರು ತಿಂಗಳ ಹೆಣ್ಣು ಮಗು ತಂದೆಯಿಂದಲೇ ದೌರ್ಜನ್ಯಕ್ಕೆ ಒಳಪಟ್ಟಿರುವುದು ಎಲ್ಲರಿಗೂ ತಿಳಿದಿದೆ. ಪೋಷಕರ ಆರೈಕೆಯಿಂದ ವಂಚಿತರಾದ ಮಕ್ಕಳು ದೈಹಿಕ, ಮಾನಸಿಕ, ಭಾವನಾತ್ಮಕ ಮತ್ತು ಸಾಮಾಜಿಕ ಹಾನಿಯನ್ನು

***Please cite this article as:*** ರಾಘವೇಂದ್ರ, ಎಚ್. ಸಿ. (2024). ಪೋಷಕತ್ವ ವಂಚಿತ ಮಕ್ಕಳ ರಕ್ಷಣೆಗೆ ಸರ್ಕಾರ ನೀಡಿರುವ ಪ್ರಾಶಸ್ತ್ಯ ಮತ್ತು ಪುನರ್ವಸತಿ ವ್ಯವಸ್ಥೆಗಳು: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 21–26

ಸಹಿಸಿಕೊಂಡು, ಹಿಂಸೆ, ನಿಂದನೆ, ನಿರ್ಲಕ್ಷ್ಯ ಮತ್ತು ಶೋಷಣೆಯನ್ನು ಅನುಭವಿಸುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ.

ಶಾಲೆಗಳ ಮುಚ್ಚುವಿಕೆ, ಪಠ್ಯೇತರ ಮತ್ತು ಹೊರಾಂಗಣ ಚಟುವಟಿಕೆಗಳ ಕೊರತೆ, ಬದಲಾದ ಆಹಾರ ಮತ್ತು ಮಲಗುವ ಅಭ್ಯಾಸಗಳು, ಪೀರ್–ಟೈಮ್ ಕೊರತೆಯು ಏಕತಾನತೆ, ವೇದನೆ, ಕಿರಿಕಿರಿ ಮತ್ತು ವೈವಿಧ್ಯಮಯ ನರ–ಮನೋವೈದ್ಯಕೀಯ ರೋಗಲಕ್ಷಣಗಳು ಮಕ್ಕಳ ಬೆಳವಣಿಗೆಯ ಮೇಲೆ ಪರಿಣಾಮ ಬೀರಿವೆ. 2020 ಮತ್ತು 2021ರಲ್ಲಿ ವಿಶ್ವದೆಲ್ಲೆಡೆ ನಡೆದ ಸಮೀಕ್ಷೆಗಳು ಒತ್ತಡ, ನಿದ್ರಾಹೀನತೆ, ಆತಂಕ ಮತ್ತು ಖಿನ್ನತೆ ಸಾಮಾನ್ಯ ಮಟ್ಟಕ್ಕಿಂತ ಹೆಚ್ಚಾಗಿರುವುದು ಕಂಡುಬಂದಿದೆ. ಪೋಷಕರ ಪ್ರತ್ಯೇಕತೆ ಅಥವಾ ವಿಚ್ಛೇದನದ ಸಮಯದಲ್ಲಿ ಮತ್ತು ನಂತರ ಮಕ್ಕಳ ಯೋಗಕ್ಷೇಮದ ಮೇಲೆ ಪರಿಣಾಮ ಬೀರುವ ಮೂರು ದೊಡ್ಡ ಅಂಶಗಳು ಪೋಷಕರ ನಿಯಂತ್ರಣದಲ್ಲಿ ಮಕ್ಕಳು ಸಮರ್ಥರಾಗಿರುತ್ತಾರೆ. ಪ್ರತಿಕೂಲ ಸಂಘರ್ಷದ ಮಟ್ಟ ಮತ್ತು ಅವಧಿ ಕಾಲಾನಂತರದಲ್ಲಿ ಒದಗಿಸಲಾದ ಪೋಷಕರ ಗುಣಮಟ್ಟ ಮತ್ತು ಪೋಷಕರು–ಮಗುವಿನ ಗುಣಮಟ್ಟ ಸಂಬಂಧದಲ್ಲಿ ತುಂಬಾ ವ್ಯತ್ಯಾಸ ಕಂಡುಬಂದಿದ್ದು ಅದು ಮಕ್ಕಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದೆ.

ಕರ್ನಾಟಕದಲ್ಲಿ 10,386 ಮಕ್ಕಳು ಕೋವಿಡ್–19 ಸಂದರ್ಭದಲ್ಲಿ ತಮ್ಮ ತಂದೆ ತಾಯಿಗಳನ್ನು ಕಳೆದುಕೊಂಡಿರುವುದು ಇಲಾಖೆಯ ಮಾಹಿತಿಯಿಂದ ಗೊತ್ತಾಗಿದೆ. ಕೋವಿಡ್–19 ಸಾಂಕ್ರಾಮಿಕ ಸಮಯದಲ್ಲಿ ಭಾರತದಾದ್ಯಂತ ಶಾಲೆಗಳು ಮುಚ್ಚಲ್ಪಟ್ಟಿದ್ದವು. ದೇಶದಲ್ಲಿ ಮಧ್ಯಂತರದಲ್ಲಿ ಶಾಲೆಬಿಟ್ಟ ಮಕ್ಕಳ ಪ್ರಮಾಣ ಮೂರು ಪಟ್ಟು ಹೆಚ್ಚು. 2018ರಲ್ಲಿ 1.8 ಪ್ರತಿಶತದಿಂದ 2020ರಲ್ಲಿ 5.3 ಪ್ರತಿಶತದವರೆಗೆ ಹೆಚ್ಚಾಗಿದೆ. ಇದು ಖಿನ್ನತೆ, ಆತಂಕಕ್ಕೆ ಕಾರಣವಾಗಿದೆ. ಮೊತ್ತೊಂದು ಪ್ರಮುಖ ಋಣಾತ್ಮಕ ಪರಿಣಾಮವೆಂದರೆ ಮುಖ್ಯವಾಹಿನಿಯು ಅದರಲ್ಲಿ ಎಲೆಕ್ಟ್ರಾನಿಕ್ ಮಾಧ್ಯಮವು ಮಕ್ಕಳ ಮೇಲೆ ಪ್ರಭಾವ ಬೀರಿ, ಮಕ್ಕಳು ಮೊಬೈಲ್ ಗೀಳು ಬೆಳಸಿಕೊಂಡಿದ್ದು ಕಲಿಕೆಯಿಂದ ಹಿಂದೆ ಸರಿದು, ಮಕ್ಕಳು ದೈಹಿಕ ಚಟುವಟಿಕೆಗಳು ಇಲ್ಲದೇ, ಆನ್‌ಲೈನ್ ಆಟಗಳಿಗೆ ಬಲಿಯಾಗುತ್ತಿರುವುದು ಹೆಚ್ಚಾಗಿ ಕಂಡುಬಂದಿದೆ. ಮೊಬೈಲ್ ಗೀಳು ಬಿಡಸಲೆಂದೇ ಅನೇಕ ಮೊಬೈಲ್ ವ್ಯಸನ ಮುಕ್ತ ಕೇಂದ್ರಗಳು ಪ್ರಾರಂಭವಾಗಿರುವುದು ಇದಕ್ಕೆ ಸಾಕ್ಷಿಯಾಗಿದೆ. ಇದರ ನಡುವೆ ಕರ್ನಾಟಕ ಸರ್ಕಾರ ಪೋಷಕತ್ವ ರಹಿತ ಮಕ್ಕಳ ಪೋಷಣೆ ಮತ್ತು ರಕ್ಷಣೆಗೆ ಅನೇಕ ಪ್ರಾಶಸ್ತ್ಯ ನೀಡಿರುವುದು ಕಂಡುಬಂದಿದೆ. ಕೆಲವು ತುರ್ತು ಸಂದರ್ಭದಲ್ಲಿ ತುರ್ತು ಕಾರ್ಯಕ್ರಮಗಳನ್ನು ಜಾರಿ ಮಾಡುವುದರ ಮೂಲಕ ಅಂತಹ ಮಕ್ಕಳ ರಕ್ಷಣೆಗೆ ಆದ್ಯತೆ ನೀಡಿದೆ. ಅದರಲ್ಲಿ ನಮ್ಮ ಕರ್ನಾಟಕ ಸರ್ಕಾರ ಈ ಕೆಳಕಂಡ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳನ್ನು ಜಾರಿಮಾಡಿದೆ. ಇದರಲ್ಲಿ ಕೆಲವು ಕೇಂದ್ರ ಸಕಾರದ ಸಹಭಾಗಿತ್ವದೊಂದಿಗೆ ಅವಕಾಶ ನೀಡಿ ಮಕ್ಕಳ ರಕ್ಷಣೆಗೆ ಆದ್ಯತೆ ನೀಡಿದೆ.

## ಪೋಷಕತ್ವ ವಂಚಿತ ಮಕ್ಕಳಿಗೆ ಸರ್ಕಾರ ನೀಡಿರುವ ಸಮಾಜಿಕ ಭದ್ರತಾ ಯೋಜನೆಗಳು

### ಫಾಸ್ಟರ್ ಕೇರ್ ಅಥವಾ ಪೋಷಕತ್ವ ಯೋಜನೆ

ರಕ್ಷಣೆ ಮತ್ತು ಪೋಷಣೆ ಅಗತ್ಯವಿರುವ ಮಕ್ಕಳು, ಕುಟುಂಬಕ್ಕೆ ಮರು ಸೇರ್ಪಡೆಗೊಳ್ಳಲು ಸಾಧ್ಯವಾಗದ, ದತ್ತು ಮುಕ್ತವಾಗಿದ್ದರೂ ದತ್ತು ಹೋಗಲು ಸಾಧ್ಯವಾಗದ ಮಕ್ಕಳನ್ನು, ಪೋಷಕತ್ವ ಯೋಜನೆಯ ಮುಖಾಂತರ ಮಗುವಿನ ಜೈವಿಕ ಪೋಷಕರಲ್ಲದ ಕುಟುಂಬಗಳಲ್ಲಿ, ಕೌಟುಂಬಿಕ ವ್ಯವಸ್ಥೆಯಲ್ಲಿ ಬೆಳಸುವ ಪರ್ಯಾಯ ಪೋಷಣಾ ಯೋಜನೆಯೇ ಪೋಷಕತ್ವ ಯೋಜನೆಯಾಗಿದೆ.

### ಮಿಷನ್ ವಾತ್ಸಲ್ಯದಡಿ ಪ್ರಯೋಜಕತ್ವ ಯೋಜನೆ

ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ–2015, ಸೆಕ್ಷನ್ 15ರ ಅನ್ವಯ ಹಾಗೂ

ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಮಾದರಿ ನಿಯಮಗಳು–2016ರ ನಿಯಮ 24ರ ಅನ್ವಯ ಪ್ರಾಯೋಜಕತ್ವ ಕಾರ್ಯಕ್ರಮವನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಕೇಂದ್ರ ಸರ್ಕಾರ ಪ್ರಯೋಜಕತ್ವ ಕಾರ್ಯಕ್ರಮದ ಮಾರ್ಗಸೂಚಿ ಹಾಗೂ ಸರ್ಕಾರದ ಆದೇಶ ಸಂಖ್ಯೆ.ಮಮಇ159/ಮಭಾಬ2012/ ದಿನಾಂಕ 13/03/2013 ಅನ್ವಯ ಮಕ್ಕಳನ್ನು ಕುಟುಂಬ ವಾತಾವರಣದಲ್ಲಿ ಬೆಳಸಲು ಕೇಂದ್ರ ಪುರಸ್ಕೃತ ಪ್ರಾಯೋಜಕತ್ವ ಕಾರ್ಯಕ್ರಮವನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮವು ಕೇಂದ್ರ ಸರ್ಕಾರದ ಪಾಲು 60% ಮತ್ತು ರಾಜ್ಯ ಸರ್ಕಾರದ ಪಾಲು 40% ಅನುದಾನವನ್ನು ಒಳಗೊಂಡಿದೆ.

ಪ್ರತಿಯೊಂದು ಮಗುವು ಕುಟುಂಬದಲ್ಲಿ ಬೆಳೆಯುವುದು ಮಗುವಿನ ಹಕ್ಕು ಎಂಬುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶ. ಕುಟುಂಬದ ವಾತಾವರಣವನ್ನು ಉತ್ತಮ ಪಡಿಸಲು ಮಕ್ಕಳು ದುಡಿಮೆಗೆ ಹೋಗುವುದನ್ನು ತಪ್ಪಿಸಿ, ಶಿಕ್ಷಣವನ್ನು ಮುಂದುವರಿಸಲು ಉತ್ತೇಜಿಸಲು ಹಾಗೂ ವೈದ್ಯಕೀಯ, ಪೌಷ್ಠಿಕ ಆಹಾರ, ವೃತ್ತಿ ತರಬೇತಿ ಮತ್ತು ಇತರೆ ಅವಶ್ಯಕತೆಗಳನ್ನು ಪೂರೈಸಲು ಕುಟುಂಬಗಳಿಗೆ ಪೂರಕವಾಗಿ ಆರ್ಥಿಕ ನೆರವನ್ನು ಒದಗಿಸಲಾಗುತ್ತಿದೆ. 2021–22ನೇ ಸಾಲಿನಲ್ಲಿ ಈ ಯೋಜನೆಯಡಿ ಒಟ್ಟಾರೆ 3,682 ಫಲಾನುಭವಿಗಳಿಗೆ 3,09,38000/– ಪಿಎಫ್‌ಎಂಎಸ್ ಮೂಲಕ ಒದಗಿಸಲಾಗಿದೆ.

***ಮಿಷನ್ ವಾತ್ಸಲ್ಯದಡಿ ಪ್ರಯೋಜಕತ್ವಕ್ಕೆ ಮಕ್ಕಳನ್ನು ಗುರುತಿಸಲು ಇರುವ ಮಾನದಂಡಗಳು***

ತಾಯಿ ವಿಧವೆ ಅಥವಾ ವಿಚ್ಛೇದಿತ ಅಥವಾ ಕುಟುಂಬದಿಂದ ಪರಿತ್ಯಕ್ತವಾಗಿದ್ದರೆ, ಮಕ್ಕಳು ಅನಾಥರಾಗಿದ್ದು, ವಿಸ್ತೃತ ಕುಟುಂಬದೊಂದಿಗೆ ವಾಸಿಸುತ್ತಿದ್ದರೆ, ಪೋಷಕರು ಮಾರಣಾಂತಿಕ ಕಾಯಿಲೆಯಿಂದ ಬಳಲುತ್ತಿದ್ದರೆ, ಪೋಷಕರು ಮಕ್ಕಳನ್ನು ನೋಡಿಕೊಳ್ಳಲು ದೈಹಿಕವಾಗಿ ಮತ್ತು ಆರ್ಥಿಕವಾಗಿ ಅಸಮರ್ಥರಾಗಿದ್ದರೆ, ಬಾಲನ್ಯಾಕಾಯ್ದೆ–2015 ರ ಪ್ರಕಾರ ಪಾಲನೆ ಮತ್ತು ರಕ್ಷಣೆಯ ಅಗತ್ಯವಿರುವ ಮಕ್ಕಳು ಅಂದರೆ ಮನೆ ಇಲ್ಲದೆ ಯಾವುದೇ ನೈಸರ್ಗಿಕ ವಿಕೋಪಕ್ಕೆ ಒಳಗಾದವರೂ, ಬಾಲಕಾರ್ಮಿಕರು, ಬಾಲ್ಯವಿವಾಹ ಸಂತ್ರಸ್ಥ ಮಕ್ಕಳು, ಕಳ್ಳಸಾಗಣಿಕೆಗೆ ಒಳಗಾದ ಮಕ್ಕಳು, ಹೆಚ್‌ಐವಿ / ಏಡ್ಸ್ ಪೀಡಿತ / ಭಾದಿತ ಮಕ್ಕಳು/ ದೈಹಿಕ ಅಂಗವಿಕಲತೆಉಳ್ಳ ಮಕ್ಕಳು/ ಕಾಣೆಯಾದ ಅಥವಾ ಓಡಿ ಹೋದ ಮಕ್ಕಳು/ ಬಾಲ ಭಿಕ್ಷುಕರು ಅಥವಾ ಬೀದಿಬದಿ ಮಕ್ಕಳು/ ಚಿತ್ರಹಿಂಸೆ ಅಥವಾ ನಿಂದನೆ ಅಥವಾ ಬೆಂಬಲ ಮತ್ತು ಪುನರ್ವಸತಿ ಅಗತ್ಯವಿರುವ ಶೋಷಿತ ಮಕ್ಕಳು ಮಿಷನ್ ವಾತ್ಸಲ್ಯದಡಿ ಸೌಲಭ್ಯ ಪಡೆದುಕೊಳ್ಳಬಹುದಾಗಿದೆ.

**ವಿಶೇಷ ಪಾಲನಾ ಯೋಜನೆ**

ಇದು ಕರ್ನಾಟಕ ಸರ್ಕಾರದ ಕಾರ್ಯಕ್ರಮವಾಗಿದ್ದು, ಹೆಚ್‌ಐವಿ ಸೋಂಕಿತ ಮತ್ತು ಭಾದಿತ ಮಕ್ಕಳಿಗೆ ಅವರ ಆರೈಕೆ, ಪೋಷಣೆಗಾಗಿ ಮಾಸಿಕ ರೂ, 1000 (ಒಂದು ಸಾವಿರ ಮಾತ್ರ) ಆರ್ಥಿಕ ನೆರವು ನೀಡಲಾಗುತ್ತದೆ. ಈ ಮೂಲಕ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹಿಸಿ ಸಾಮಾಜದ ಮುಖ್ಯವಾಹಿನಿಗೆ ತರುವ ಉದ್ದೇಶ ಈ ಯೋಜನೆ ಹೊಂದಿದೆ.

**ಪೋಷಕತ್ವ ವಂಚಿತ ಮಕ್ಕಳಿಗೆ ಪಿಎಂ ಕೇರ್ ಯೋಜನೆ**

ಕೋವಿಡ್–19 ಸಾಂಕ್ರಮಿಕದಿಂದಾಗಿ ಇಬ್ಬರೂ ಪೋಷಕರನ್ನು ಅಥವಾ ಬದುಕಿದ್ದ ಏಕ ಪೋಷಕರನ್ನು ಕಳೆದುಕೊಂಡ ಅನಾಥರಾದ 18 ವರ್ಷದೊಳಗಿನ ಮಕ್ಕಳಿಗೆ ಕೇಂದ್ರ ಸರ್ಕಾರದಿಂದ ಅಂಚೆ ಕಛೇರಿಯಲ್ಲಿ ಠೇವಣೆ ಇಡಲಾಗಿದ್ದು, ಮಗುವಿಗೆ 23 ವರ್ಷಗಳು ಪೂರ್ಣಗೊಂಡ ನಂತರ ರೂ,10.00 (ಹತ್ತು ಲಕ್ಷ) ಪರಿಪಕ್ವ ಮೊತ್ತ ದೊರೆಯುತ್ತದೆ. 18 ವರ್ಷ ತುಂಬುವವರಗೆ ಮಗುವಿನ ಪೋಷಣೆಗಾಗಿ ಮಾಸಿಕ ರೂ, 4000/– (ನಾಲ್ಕುಸಾವಿರ) ಆರ್ಥಿಕ ಬೆಂಬಲ ನೀಡಲಾಗುತ್ತದೆ.

ಪ್ರತಿ ಮಗುವಿಗೂ ಆಯುಷ್ಮಾನ್ ಭಾರತ್ ಆರೋಗ್ಯ ಕಾರ್ಡ್ ಮತ್ತು ಶಿಕ್ಷಣಕ್ಕೆ ನೆರವು ನೀಡಲಾಗುತ್ತಿದೆ.

**ಮುಖ್ಯಮಂತ್ರಿ ಬಾಲಸೇವಾ ಯೋಜನೆ**

ಕೋವಿಡ್–19 ಸೋಂಕು 2019–20ನೇ ಸಾಲಿನಿಂದ ಪ್ರಾರಂಭವಾಗಿದ್ದು, ಸೋಂಕು ಹೆಚ್ಚಾಗುತ್ತಿರುವ ಹಿನ್ನಲೆಯಲ್ಲಿ ಹೆಚ್ಚಿನ ಸಾವು, ನೋವುಗಳು ಸಂಭವಿಸಿದವು, ಕೋವಿಡ್–19 ರಿಂದ ಅನೇಕ ಪಾಲಕರು ಮರಣಹೊಂದಿದ್ದು, ಮಕ್ಕಳ ಭವಿಷ್ಯ ಅನಿಶ್ಚಿತತೆವಾಗಿರುವುದರಿಂದ ರಾಜ್ಯ ಸರ್ಕಾರವು ಮುಖ್ಯ ಮಂತ್ರಿಗಳ "ಬಾಲಸೇವಾ ಯೋಜನೆ" ಜಾರಿಗೆ ತಂದಿದೆ. ಈ ಆದೇಶವನ್ನು 25/06/2021 ರಂದು ಹೊರಡಿಸಲಾಗಿದೆ. ಕೋವಿಡ್–19 ರಿಂದ ಇಬ್ಬರೂ ಪೋಷಕರನ್ನು ಕಳೆದುಕೊಂಡ ಮಕ್ಕಳಿಗೆ ಹಾಗೂ ಒಬ್ಬ ಪೋಷಕರನ್ನು ಅನ್ಯ ಕಾರಣದಿಂದ ಮರಣ ಹೊಂದಿದ್ದು, ಇನ್ನೊಬ್ಬ ಪೋಷಕ ಕೋವಿಡ್–19 ಕಾರಣಗಳಿಂದ ಮರಣ ಹೊಂದಿದ್ದಲ್ಲಿ ಅಂತಹ ಮಕ್ಕಳಿಗೆ ಈ ಯೋಜನೆಯಡಿ 18 ವರ್ಷ ಪೂರ್ಣಗೊಳ್ಳುವವರೆಗೆ ಪ್ರತಿ ತಿಂಗಳು ರೂ, 3500/– (ಮೂರು ಸಾವಿರದ ಐದುನೂರು)ಗಳ ಪ್ರೋತ್ಸಾಹ ಧನ ಸಹಾಯಕ್ಕೆ ಅವಕಾಶವಿರುತ್ತದೆ. ಮಕ್ಕಳು ಎಸ್ಎಸ್ಎಲ್ಸಿ ಪೂರೈಸಿದ್ದಲ್ಲಿ ಉನ್ನತ ಶಿಕ್ಷಣಕ್ಕೆ ಲ್ಯಾಪ್ಟ್ಯಾಪ್ ಅಥವಾ ಟ್ಯಾಬ್ ವಿತರಣೆ ಮಾಡಬಹುದಾಗಿದೆ. ಮಗು ಹೆಣ್ಣು ಮಗು ಆಗಿದ್ದಲ್ಲಿ 21 ವರ್ಷ ತುಂಬಿದ ನಂತರವೂ 1,00,000 (ಒಂದು ಲಕ್ಷ) ಆರ್ಥಿಕ ಸಹಾಯ ನೀಡಬಹುದಾಗಿರುತ್ತದೆ. ಈ ಸಮಿತಿಯಲ್ಲಿ ಮಾನ್ಯ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿದ್ದು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಸದಸ್ಯರಿದ್ದು, ಜಿಲ್ಲಾ ಮಕ್ಕಳ ರಕ್ಷಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.

**ಉಪಕಾರ್ ಯೋಜನೆ**

18 ವರ್ಷ ಪೂರ್ಣಗೊಂಡ ಬಾಲಮಂದಿರದಿಂದ ಸಮಾಜದ ಮುಖ್ಯವಾಹಿನಿಗೆ ಸೇರ್ಪಡೆಗೊಳ್ಳುವ ಮಕ್ಕಳಿಗಾಗಿ 21 ವರ್ಷ ಪೂರ್ಣಗೊಳ್ಳುವವರೆಗೆ ಸ್ವತಂತ್ರ್ಯವಾಗಿ ಬದುಕು ಕಟ್ಟಿಕೊಳ್ಳಲು ಅನುವಾಗುವಂತೆ ಶಿಕ್ಷಣ, ಆರೋಗ್ಯ, ತರಬೇತಿ ಕೌಶಲ್ಯ, ಸ್ವ ಉದ್ಯೋಗ ಕೈಗೊಳ್ಳಲು ರಾಜ್ಯ ಸರ್ಕಾರ ವತಿಯಿಂದ ಮಾಸಿಕ ರೂ, 5000 ಆರ್ಥಿಕ ಬೆಂಬಲ ನೀಡಲಾಗುತ್ತದೆ. ಈ ಯೋಜನೆಯಿಂದ ಅನೇಕ ಮಕ್ಕಳು ಪ್ರಯೋಜನ ಪಡೆಯುತ್ತಿದ್ದಾರೆ.

**ಅನುಪಾಲನಾ ಗೃಹ**

18 ವರ್ಷ ಪೂರ್ಣಗೊಂಡು ಬಾಲ ಮಂದಿರದಿಂದ ಸಮಾಜದ ಮುಖ್ಯವಾಹಿನಿಗೆ ಬಿಡುಗಡೆಗೊಳ್ಳುವ ಮಕ್ಕಳಿಗೆ 21 ವರ್ಷ ತುಂಬುವವರೆಗೆ ಶಿಕ್ಷಣ ಮುಂದುವರಿಸಲು ನೆರವು, ಆಶ್ರಯ, ಕೌಶಲ್ಯ, ವೃತ್ತಿ ತರಬೇತಿ, ಸ್ವಾವಲಂಬಿ ಜೀವನಕ್ಕೆ ಬೆಂಬಲ ನೀಡುವ ರಾಜ್ಯ ಸರ್ಕಾರದ ಯೋಜನೆಯಾಗಿದೆ. ಅವರಿಗಾಗಿಯೇ ಪ್ರತ್ಯೇಕ 07 ಅನುಪಾಲನ ಗೃಹಗಳನ್ನು ಕರ್ನಾಟಕ ಸರ್ಕಾರ ವಿವಿಧ ಜಿಲ್ಲೆಗಳಲ್ಲಿ ಆರಂಭಿಸಿದೆ. ಬಾಲ ಮಂದಿರ ಹಾಗೂ ಇತರೆ ಮಕ್ಕಳ ಪಾಲನಾ ಸಂಸ್ಥೆಯಿಂದ ಬಿಡುಗಡೆ ಹೊಂದಿದ ಮಕ್ಕಳು ಅನುಪಾಲನ ಗೃಹದಲ್ಲಿ ನೋಂದಾಯಿಸಿಕೊಂಡು 21 ವರ್ಷ ಪೂರೈಸುವವರೆಗೆ ಪುನರ್ವಸತಿಗೊಳ್ಳಲು ಅವಕಾಶ ನೀಡಿದೆ.

**ಮಕ್ಕಳ ಪಾಲನಾ ಸಂಸ್ಥೆಗಳು**

ಮಕ್ಕಳ ನ್ಯಾಯಕಾಯ್ದೆ–2015, ಈ ಕಾಯ್ದೆಯ ಸೆಕ್ಷನ್ 41ರ ಪ್ರಕಾರ ರಕ್ಷಣೆ ಮತ್ತು ಪೋಷಣೆ ಅಗತ್ಯವಿರುವ ಮಕ್ಕಳನ್ನು ನೋಡಿಕೊಳ್ಳಲು ಅಥವಾ ಕಾನೂನಿನೊಡನೆ ಸಂಘರ್ಷದಲ್ಲಿರುವ ಮಕ್ಕಳ ಆರೈಕೆಗೆಂದು ರಾಜ್ಯ ಸರ್ಕಾರದಿಂದ ನಡೆಸಲ್ಪಡುವ ಅಥವಾ ಸ್ವಯಂ ಸೇವಾ ಸಂಸ್ಥೆಗಳು ನಡೆಸಲ್ಪಡುವ ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ಧನಸಹಾಯ ಪಡೆಯುತ್ತಿರಲಿ, ಇಲ್ಲದಿರಲಿ ಎಲ್ಲಾ ಸಂಸ್ಥೆಗಳು ಈ ಕಾಯಿದೆಯಡಿ ಸೂಚಿಸಿರುವಂತೆ 6 ತಿಂಗಳೊಳಗೆ ನೊಂದಾಯಿಸಿಕೊಳ್ಳಬೇಕು. ಈ ನಿಯಮದಡಿ ಅನೇಕ

ಸಂಸ್ಥೆಗಳು ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಮಕ್ಕಳ ಪಾಲನಾ ಸಂಸ್ಥೆಗಳನ್ನು ಸ್ಥಾಪಿಸಿವೆ. ಈ ಮೂಲಕ ಆಗತಾನೆ ಹುಟ್ಟಿದ ಮಗುವಿನಿಂದ 18 ವರ್ಷದೊಳಗಿನ ಮಕ್ಕಳಿಗೆ ಪುನರ್ವಸತಿ ಕಲ್ಪಿಸಿ ಅವರ ಪೋಷಣೆ ಮತ್ತು ರಕ್ಷಣೆ ಮಾಡುತ್ತಿವೆ.

ಈ ಕಾಯ್ದೆ ಪ್ರಕಾರ ಮಕ್ಕಳಿಗೆ ಸಂಸ್ಥೆಯ ಆಶ್ರಯ ಕೊನೆಯ ಅವಕಾಶವಾಗಿದ್ದು, ಅವರಿಗೆ ಕೌಟುಂಬಿಕ ವಾತವರಣ ಕಲ್ಪಿಸುವುದು ಮೊದಲ ಆದ್ಯತೆಯಾಗಿದೆ. ಅದು ಸಾಧ್ಯವಾಗದಿದ್ದಾಗ ಅವರನ್ನು ದತ್ತು ವ್ಯವಸ್ಥೆಗೆ, ಪಾಸ್ಟರ್ ಕೇರ್, ವ್ಯವಸ್ಥೆಗೆ ಒಳಪಡಿಸುವ ಮೂಲಕ ಮಕ್ಕಳಿಗೆ ಕೌಟುಂಬಿಕ ವಾತಾವರಣ ನೀಡಲು ಪ್ರಯತ್ನಿಸಲಾಗುತ್ತದೆ. ಈ ಎರಡು ಅವಕಾಶಗಳು ಸಾಧ್ಯವಾಗದೆ ಹೋದರೆ ಅವರನ್ನು ಪುನಃ ಅದೇ ಸಂಸ್ಥೆಯಲ್ಲಿ ಪುನರ್ವಸತಿ ನೀಡಲಾಗುತ್ತದೆ.

ಪಾಲನೆ ಮತ್ತು ರಕ್ಷಣೆ ಅಗತ್ಯವಿರುವ ಹಾಗೂ ಕಾನೂನಿನೊಡನೆ ಸಂಘರ್ಷಕ್ಕೆ ಒಳಪಟ್ಟ ಮಕ್ಕಳ ರಕ್ಷಣೆ, ಪೋಷಣೆ ಮತ್ತು ಪುನರ್ವಸತಿಗಾಗಿ 70 ಸರ್ಕಾರ ಬಾಲ ಮಂದಿರಗಳು, 17 ವೀಕ್ಷಣಾಲಯಗಳು, 35 ತೆರದು ತಂಗುದಾಣಗಳು, 1 ಸುರಕ್ಷತೆಯ ಸ್ಥಳಗಳು, 1 ವಿಶೇಷ ಗೃಹ, 38 ವಿಶೇಷ ದತ್ತು ಕೇಂದ್ರಗಳು, 7 ಅನುಪಾಲನ ಗೃಹ, ಮತ್ತು ಇವುಗಳನ್ನು ಹೊರತು ಪಡಿಸಿ ಸರ್ಕಾರೇತರ ಸಂಸ್ಥೆಗಳು ಮಕ್ಕಳ ಪಾಲನಾ ಸಂಸ್ಥೆಗಳನ್ನು ರಾಜ್ಯಾದ್ಯಂತ ನಡೆಸುತ್ತಿವೆ.

ಪೋಷಣೆ ಮತ್ತು ರಕ್ಷಣೆ ಅವಶ್ಯಕತೆ ಇರುವ ಮಕ್ಕಳಿಗೆ ಅನೇಕ ಪ್ರಾಶಸ್ತ್ಯ ನೀಡಿದ್ದರೂ, ಕೌಟಿಂಬಿಕ ವಾತವರಣ ಕಲ್ಪಿಸಬಹುದು ಅಥವಾ ಅವರ ಶಿಕ್ಷಣ, ಆರೋಗ್ಯ, ರಕ್ಷಣೆ ಹಾಗೂ ಪುನರ್ವಸತಿ ಕಲ್ಪಿಸಬಹುದು ಆದರೆ ಅವರಿಗೆ ನೈಜ ಬಾಲ್ಯ, ತಂದೆ ತಾಯಿಯ ಪ್ರೀತಿ ನೀಡಲು ಸಾಧ್ಯವಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಸಂಸ್ಥೆಯು ಮಕ್ಕಳ ಸ್ನೇಹಿಯಾಗಿರುವುದಿಲ್ಲ, ಮಕ್ಕಳ ಕೇಂದ್ರೀಕೃತ ವ್ಯವಸ್ಥೆಗಳ ಕೊರತೆ ಇರುತ್ತದೆ. ಮಕ್ಕಳಿಗೆ ಅವರ ಹಕ್ಕುಗಳನ್ನು ಒದಗಿಸಬಹುದು, ಪಾಸ್ಟರ್ ಕೇರ್ ಮತ್ತು ದತ್ತು ಹೋಗದ ಮಕ್ಕಳಿಗೆ ಕೌಟಿಂಬಿಕ ವಾತವರಣ ಕಷ್ಟಸಾಧ್ಯವಾಗುತ್ತದೆ. ಅವರನ್ನು ಸಾಮಾಜದ ಮುಖ್ಯವಾಹಿನಿಗೆ ಕರೆತರಲು ಎಷ್ಟೆಲ್ಲಾ ಅವಕಾಶಗಳಿದ್ದರೂ ಅವರು ಬದುಕು ಕಟ್ಟಿಕೊಂಡು ಸುಸ್ಥಿರತೆ ಸಾಧಿಸಲು ಹೆಣಗಾಡಬೇಕಾಗುತ್ತದೆ. ಅವರದೇ ಸವಾಲುಗಳನ್ನು ಅವರು ಎದುರಿಸುತ್ತಿದ್ದಾರೆ, ಅವರಿಗೆ ಸರ್ಕಾರಿ ನೌಕರಿ ಪಡೆಯುವಲ್ಲಿನ ಸವಾಲುಗಳು, ಬದುಕು ಕಟ್ಟಿಕೊಳ್ಳಲು ಆರ್ಥಿಕ ಅವಕಾಶಗಳು, ಸಮಾಜದಲ್ಲಿ ಸ್ಥಾನಮಾನ, ಜಾತಿ ವ್ಯವಸ್ಥೆಯಲ್ಲಿ ಮದುವೆಯ ಅವಕಾಶಗಳು ಹೀಗೆ ಅನೇಕ ಸವಾಲುಗಳನ್ನು ಅವರು ಇಂದಿಗೂ ಎದುರಿಸುತ್ತಿದ್ದಾರೆ. ಸಂಸ್ಥೆಯಿಂದ ಹೋದ ಮಕ್ಕಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪರಿಸ್ಥಿತಿಗಳ ಕುರಿತು ಸರ್ಕಾರದ ಬಳಿ ಯಾವುದೇ ಅಂಕಿ ಅಂಶಗಳು ಲಭ್ಯವಿಲ್ಲದಿರುವುದು ಈ ಕ್ಷೇತ್ರದ ನಿರ್ಲಕ್ಷ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

ಮುಂದಿನ ದಿನಗಳಲ್ಲಾದರೂ ಇಂತಹ ಮಕ್ಕಳ ಬದುಕನ್ನು ರೂಪಿಸಲು ಕಾರ್ಯತಂತ್ರಗಳು, ಬೆಂಬಲ, ಉನ್ನತ ಶಿಕ್ಷಣ, ಉದ್ಯೋಗದ ಅವಕಾಶಗಳಿಗೋಸ್ಕರ ಸರ್ಕಾರ ವಿಶೇಷ ನಿಯಮಗಳನ್ನು ರೂಪಿಸಲು ಕ್ರಮಕೈಗೊಳ್ಳುವ ಅವಶ್ಯಕತೆ ಇದೆ.

**ಪರಾಮರ್ಶನ ಗ್ರಂಥಗಳು**


- *ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸುತ್ತೋಲೆಗಳು.* ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ.
- *ಮಕ್ಕಳ ನ್ಯಾಯ ಕಾಯ್ದೆ (ಪೋಷಣೆ ಮತ್ತು ರಕ್ಷಣೆ)–2015.* ಕರ್ನಾಟಕ ಸರ್ಕಾರ
- *ಮಿಷನ್ ವಾತ್ಸಲ್ಯ ಅನುಷ್ಠಾನ ಮಾರ್ಗಸೂಚಿಗಳು.* (2022). ಮಕ್ಕಳ ರಕ್ಷಣಾ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.
- *ರಾಜ್ಯ ಮಕ್ಕಳ ರಕ್ಷಣೆ.* *https://icps.karnataka.gov.in*

- Bajpai, A. (2018). The Juvenile Justice (Care and Protection of Children) Act 2015: an analysis. *Indian Law Review*, *2*(2), 191–203. https://doi.org/10.1080/24730580.2018.1552233
- Bourdillon, M. F. (2004). Children in development. *Progress in Development Studies*, *4*(2), 99–113. https://doi.org/10.1191/1464993404ps079oa
- Ghanashyam, B. (2010). India failing children orphaned by AIDS. *Lancet*, *375*(9712), 363–364. https://doi.org/10.1016/s0140-6736(10)60151-1

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 27-31
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# 'ಮಲಂಗ್'–ಸೂಫಿ ಸಂಸ್ಕೃತಿಯ ಕಠೋರ ಸಾಧಕ

**ಡಾ. ಕೆ. ಎಂ. ನಯಾಜ್ ಅಹ್ಮದ್**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಡಿಬಂಡೆ, ಚಿಕ್ಕಬಳ್ಳಾಪುರ ಜಿಲ್ಲೆ.

***Abstract:***
*ನಿನ್ನಲ್ಲಿ ನಾನಾಗುವ ಪ್ರಕ್ರಿಯೆ ಸೂಫಿ ಪರಂಪರೆಯ ಒಂದು ಸುಂದರ ರೂಪದ ಪ್ರಯಾಣವಾಗಿದೆ. ತಮ್ಮನ್ನು ತಾವು ದಂಡಿಸಿಕೊಂಡು, ನಿಂದಿಸಿಕೊಂಡು, ತಮ್ಮ ಜೀವನವನ್ನೇ ಮರೆತು ಅವಳೆಂಬ ಆತನ ಮತ್ತು ಕೇವಲ ಆತನ ಪ್ರೀತಿಯನ್ನು ಪಡೆದುಕೊಳ್ಳಲು ಕಾಲ, ಗಳಿಗೆ, ನೀತಿ, ನಿಯಮ, ಭಾಷೆ, ಭಯ, ಇಹ, ಪರಿಸರ, ಕಾಲ ದೇಶ ಎಲ್ಲವನ್ನೂ ಮರೆತು ಅವಳೆಂಬ ಆತನ ಅನನ್ಯ ಪ್ರೀತಿಯ ಹುಡುಕಾಟದಲ್ಲಿ ನಿರತವಾಗುವವ ಪಂಥವೇ ಈ ಮಲಂಗ್. ಅರೇಬಿಕ್ ಆಭಷೆಯಲ್ಲಿ ಮಲಂಗ್ ಎಂದರೆ 'ಹುಚ್ಚ ಅಥವಾ ಅತ್ಯುತ್ಸಾಹಿ' ಎಂದು ಕರೆಯುತ್ತಾರೆ. ಉರ್ದು ಭಾಷೆಯಲ್ಲಿ 'ತನ್ನ ತಲೆ ಕೂದಲನ್ನು ಉದ್ದವಾಗಿ ಬೆಳೆಸಿರುವಾತ ಅಥವಾ ಹುಚ್ಚ' ಎಂದು ಕರೆಯಲಾಗುತ್ತದೆ. ಇಸ್ಲಾಂ ಧರ್ಮದ ಪ್ರಕಾರ "ತನ್ನಿಷ್ಟಕ್ಕೆ ತಾನು ಅಲೆದಾಡುವ ಆಧ್ಯಾತ್ಮಿ ಅಥವಾ ಧಾರ್ಮಿಕ ಕೇಂದ್ರ ಒಂದರ ಪೂರ್ಣ ಪ್ರಮಾಣದ ಹುಚ್ಚ" ಎಂದರ್ಥವನ್ನು ಕೊಡುತ್ತದೆ. ಮಲಂಗ್ ಎಂಬ ಶಬ್ಧ ಬಂದಿರುವುದು ಪರ್ಶಿಯನ್ ಭಾಷೆಯಿಂದ. ಇದರ ಅರ್ಥ "ಯಾವ ವ್ಯಕ್ತಿಯು ತನ್ನ ಬಗ್ಗೆ ತನಗೆ ಅಥವಾ ತನ್ನ ಸುತ್ತಮುತ್ತಲಿನ ಬಗ್ಗೆ ಯಾವುದೇ ಅರಿವಿಲ್ಲದೆ ಅಥವಾ ಜಗತ್ತಿನ ಆಗು ಹೋಗುಗಳ ಬಗ್ಗೆ ಅರಿವಿಲ್ಲದೆ ಸ್ವೇಚ್ಛೆಯಾಗಿ ಬದುಕುವಾತ" ಎಂದರ್ಥ.*

**Keywords:** *ಮಲಂಗ್, ಸೂಫಿ ಪರಂಪರೆ, ಸೂಫಿ ಸಂತರು, ಮುಸ್ಲಿಂ ಧರ್ಮ, ಮದಾರಿ, ಪವಿತ್ರ ಮನುಷ್ಯ.*

## ಪೀಠಿಕೆ

ದಟ್ಟ ಕಾನನಗಳ ನಡುವೆಯೋ, ಬೆಟ್ಟಗಳ ಸಾಲಿನಲ್ಲಿಯೋ ಒಂದು ಸಣ್ಣ ಹನಿಯ ರೂಪದಲ್ಲಿ ಬೀಳುವ ಅ ಕಾರ್ಮೋಡದಿಂದ ಉದಿರಿದ ಮಳೆಯ ಹನಿ ಮುಂದೆ ನದಿಯಾಗಿ ಸಮುದ್ರ ಸೇರುವ ಪರಿಯಿದು. ಹನಿಯಾಗಿ ಉದುರಿದ ಆ ನೀರ ಬಿಂದು ಕ್ರಮೇಣ ತನ್ನತನವನ್ನು ಬದಲಿಸಿಕೊಂಡು ಹರಿಯಲಾರಂಭಿಸುತ್ತದೆ. ತನ್ನ ಪಯಣವನ್ನು ಬೆಳೆಸುತ್ತದೆ. ಹನಿಯಾಗಿ, ತೊರೆಯಾಗಿ, ಝರಿಯಾಗಿ ಅಂತಿಮವಾಗಿ ನದಿಯಾಗಿ ಸಾಗರದ ಬಿಸಿ ಅಪಪ್ಪುಗೆಯ ಬಾಹುಗಳಲ್ಲಿ ಲೀನವಾಗುತ್ತದೆ.

ಹೀಗೆ ಪಯಣದಲ್ಲಿ ಸಾಗುವ ನದಿಗಳು ಒಂದೊಂದು ಸ್ವರೂಪದದ್ದಾಗಿದೆ. ಕೆಲವು ನದಿಗಳು ತಮ್ಮನ್ನು ತಾವು ಮೈದುಂಬಿಸಿಕೊಂಡು ನಿಶ್ಚಿಂತೆಯಾಗಿ, ನಿಶ್ಕಲ್ಮಷವಾಗಿ ಸಣ್ಣಗೆ ಮತ್ತು ತಣ್ಣಗೆ ಸಾಗಿದರೆ ಮತ್ತೆ ಕೆಲವೊಂದು ಭೋರ್ಗರೆಯುತ್ತಾ, ಧುಮ್ಮಿಕ್ಕುತ್ತಾ ಸಾಗುತ್ತವೆ. ಈ ಸಾಗುವ ಹಾದಿಯೂ ಅತ್ಯಂತ ಕಠಿಣ ಮತ್ತು ರೌದ್ರ ಸ್ವರೂಪವನ್ನು ಪಡೆದಿರುತ್ತದೆ. ರಭಸಕ್ಕೆ ಸಿಕ್ಕವರು ಕೊಚ್ಚಿ ಹೋಗುವ ಅಪಾಯವೂ ಅತ್ಯಂತ ಗರಿಷ್ಠ ಮಟ್ಟದಲ್ಲಿ ಇರುತ್ತದೆ. ಕೆಲವೊಮ್ಮೆ ಅದು ಪ್ರವಾಹದ ಸ್ವರೂಪವನ್ನೂ

***Please cite this article as:*** ನಯಾಜ್ ಅಹ್ಮದ್, ಕೆ.ಎಂ. (2024). 'ಮಲಂಗ್'–ಸೂಫಿ ಸಂಸ್ಕೃತಿಯ ಕಠೋರ ಸಾಧಕ. ಕೃತಿಯಲ್ಲಿ ವೃತ್ತಿಗಾಯಕರ ಬದುಕಿನ ಅನಾವರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 27–31

ಪಡೆದುಕೊಳ್ಳುವ ಮತ್ತು ಭೀಭತ್ಸತೆಯನ್ನು ಸೃಜಿಸುವ ಅಪಾಯವೂ ಇರುತ್ತದೆ.

ಆದರೆ ನದಿಗಳು ಹರಿಯಲೇ ಬೇಕು. ಅದು ತಣ್ಣಗಾದರೂ ಸರಿ ಅಥವಾ ಧುಮ್ಮಿಕ್ಕಿ ಆದರೂ ಸರಿ ನದಿ ಹರಿಯಲೇಬೇಕು. ನದಿ ಹರಿದು ಸಮುದ್ರ ಸೇರಲೇಬೇಕು. ತನ್ನ ಸುದೀರ್ಘ ಪಯಣದ ನಂತರ ಕಡಲ ತೀರವನ್ನು ಸೇರುವ ತವಕ ಪ್ರತಿ ನದಿಯೂ ಹೊಂದಿರುತ್ತದೆ. ಹರಿದು, ಹರಿದು, ಹರಿದು ಕಡೆಗೆ ಕಡಲು ಸೇರಿದಾಗ ಆ ನದಿಗೆ ಆಗುವ ಆನಂದಕ್ಕೆ ಭಾಷೆ ಇರುವುದಿಲ್ಲ, ಬದಲಿಗೆ ಕೇವಲ ಭಾವನೆಗಳೇ. ಉನ್ಮಾದ ಉತ್ತುಂಗಕ್ಕೆ ಹರಿದಿರುತ್ತದೆ. ಆ ನದಿ ತನ್ನ ಸುದೀರ್ಘ ಪ್ರಯಾಣದ ಆಯಾಸವನ್ನು ಕಳೆದುಕೊಂಡಿರುತ್ತದೆ. ತನ್ನ ಗಮ್ಯ ಸ್ಥಾನವನ್ನು ಸೇರಿದ ಅಮಿತಾನಂದದಲ್ಲಿ ತೇಲುತ್ತಾ ಆ ವಿಶಾಲ ಸಮುದ್ರದಲ್ಲಿ ತನ್ನನ್ನು ತಾನು ಲೀನ ಮಾಡಿಕೊಳ್ಳುತ್ತದೆ. ಸೂಫಿ ಮತ್ತು ಸೂಫಿ ಪರಂಪರೆಯೂ ಹಾಗೆಯೇ............. ಖ್ಯಾತ ಸೂಫಿ ಕವಿ ಜಲಾಲುದ್ದೀನ್ ರೂಮಿ ಹೇಳುವ ಹಾಗೆ

**"ನಾನು ಈ ರೀತಿ ಸಾಯುತ್ತೇನೆ**

**ನಾನು ನಿನ್ನ ಮೇಲೆ ಹೊಂದಿರುವ ಪ್ರೀತಿಯಲ್ಲಿ"**

***"ಜಫರಕ್ ತಾ ಬಾಖದಮ್ ಹರ್ ಕುಜಾ ಕೇ ಮಿ ನಗರಂ***

***ಕರಿಷ್ಮಾ ದಾಮನೆ-ಎ-ದಿಲ್ ಕುಷದ್ ಕೇ ಜಾ ಯೀನ್ ಜಾ ಅಷ್ತ್"***

***ಉರ್ದು ತರ್ಜುಮೆ-***

***ಅಜಬ್ ತಮಾಷಾ ಹೈ ಹುಸ್ನ್ ಎ ಜಾನಾ ಶುರು ಕರೂಂ ಕಹಾಂ ಸೇ ಪಹೆಲೇ***

***ಹರ್ ಏಕ್ ಜಲ್ವಾ ಪುಕಾರ್ ತಾ ಹೈ***

***ಯಹಾಂ ಸೇ ಪಹೆಲೇ, ಯಹಾಂ ಸೇ ಪಹೆಲೇ, ಯಹಾಂ ಸೇ ಪಹೆಲೇ.***

***"ನಿನ್ನ ಚಲುವಿನ ಅದ್ಭುತದ ವರ್ಣನೆ ಆರಂಭಿಸಲಿ ನಾನು ಎಲ್ಲಿಂದ?***

***ಪ್ರತಿಯೊಂದು ನೋಟವೂ ಧ್ವನಿಗೊಡುತ್ತಿದೆ ಮೊದಲು ಇಲ್ಲಿಂದ, ಮೊದಲು ಇಲ್ಲಿಂದ ಮೊದಲು ಇಲ್ಲಿಂದ!.***

(ಗುಲ್ಬರ್ಗಾದ ಹಜರತ್ ಖ್ವಾಜಾ ಬಂದಾ ನವಾಜ್ ಗೇಸು ದರಾಸ್ ರಹಮತುಲ್ಲಾ ಅಲೈ ರವರ ದರ್ಗಾದ ಪ್ರವೇಶ ದ್ವಾರದಲ್ಲಿ ಬರೆದ ಪರ್ಶಿಯನ್ ಭಾಷೆಯ ಸಾಲುಗಳು)

ನೀನೆಂಬ ಆ ಚೆಲುವನ್ನು ವರ್ಣಿಸಲು ಪ್ರತಿಯೊಂದು ಕ್ಷಣವೂ ಅನುಕ್ಷಣ ಕಾತುರದಿಂದ ಇರುತ್ತದೆ. ಹಾಗೆಯೇ ಸೂಫಿ. ಅತನಲ್ಲಿ ಲೀನವಾಗುವ ತವಕ ಎಲ್ಲಾ ಸೂಫಿಗಳ ಅಂತಿಮ ಗುರಿಯಾಗಿರುತ್ತದೆ. ಆತನಲ್ಲಿ ಸೇರುವ, ಆತನಲ್ಲಿ ಲೀನವಾಗುವ, ಆತನ ಪ್ರಿತಿಯಲ್ಲಿ ಕರಗಿ ಹೋಗುವ ಅದಮ್ಯ ಕನಸು ಮತ್ತು ಆಸೆ ಎಲ್ಲಾ ಸೂಫಿಗಳಲ್ಲಿ ಇರುವ ಸಾಮಾನ್ಯ ಪ್ರಜ್ಞೆಯಾಗಿದೆ. ಅಂತಹಾ ಪ್ರಜ್ಞೆಯ ಮನಸ್ಸುಗಳು ಸೂಫಿಗಳಲ್ಲಿ ಸಾಮಾನ್ಯವಾದರೂ ಆ ಅಂತಿಮ ಎಂಬ ಪ್ರಾರಂಭವನ್ನು ಪಡೆದುಕೊಳ್ಳಲು ಮಾಡಿಕೊಳ್ಳುವ ಆಯ್ಕೆಗಳು ಬಹಳ ವಿಭಿನ್ನ ಆಗಿರುತ್ತದೆ. ಸೂಫಿಯ ಕಠಿಣ ದಾರಿಯನ್ನು ಆಯ್ಕೆ ಮಾಡಿಕೊಂಡವರೇ ಈ ಮಲಂಗ್‌ಗಳು. ತಮ್ಮನ್ನು ತಾವು ದಂಡಿಸಿಕೊಂಡು, ನಿಂದಿಸಿಕೊಂಡು, ತಮ್ಮ ಜೀವನವನ್ನೇ ಮರೆತು ಅವಳೆಂಬ ಆತನ ಮತ್ತು ಕೇವಲ ಆತನ ಪ್ರೀತಿಯನ್ನು ಪಡೆದುಕೊಳ್ಳಲು ಕಾಲ, ಗಳಿಗೆ, ನೀತಿ, ನಿಯಮ, ಭಾಷೆ, ಭಯ, ಇಹ, ಪರಿಸರ, ಕಾಲ ದೇಶ ಎಲ್ಲವನ್ನೂ ಮರೆತು ಅವಳೆಂಬ ಆತನ ಅನನ್ಯ ಪ್ರೀತಿಯ ಹುಡುಕಾಟದಲ್ಲಿ ನಿರತವಾಗುವವ ಪಂಥವೇ ಈ ಮಲಂಗ್.

ಅರೇಬಿಕ್ ಆಭಷೆಯಲ್ಲಿ ಮಲಂಗ್ ಎಂದರೆ 'ಹುಚ್ಚ ಅಥವಾ ಅತ್ಯುತ್ಸಾಹಿ' ಎಂದು ಕರೆಯುತ್ತಾರೆ. ಉರ್ದು ಭಾಷೆಯಲ್ಲಿ 'ತನ್ನ ತಲೆ ಕೂದಲನ್ನು ಉದ್ದವಾಗಿ ಬೆಳೆಸಿರುವಾತ ಅಥವಾ ಹುಚ್ಚ' ಎಂದು ಕರೆಯಲಾಗುತ್ತದೆ.

ಅದೇ ರೀತಿಯಲ್ಲಿ ಇಸ್ಲಾಂ ಧರ್ಮದ ಪ್ರಕಾರ **"**ತನ್ನಿಷ್ಟಕ್ಕೆ ತಾನು ಅಲೆದಾಡುವ ಆಧ್ಯಾತ್ಮಿ ಅಥವಾ ಧಾರ್ಮಿಕ ಕೇಂದ್ರ ಒಂದರ ಪೂರ್ಣ ಪ್ರಮಾಣದ ಹುಚ್ಚ**"** ಎಂದರ್ಥವನ್ನು ಕೊಡುತ್ತದೆ.

ಲೂಯಿಸ್ ಡೂಪ್ರಿ ಹೇಳುವ ರೀತಿಯಲ್ಲಿ " ಸಾಮಾನ್ಯವಾಗಿ ಆಫ್ಘಾನಿ, ಪಾಕಿಸ್ತಾನಿ, ಇರಾನಿಯನ್ ಅಥವಾ ಭಾರತೀಯ ಮಲಂಗ್ ಒಂದು ಕಡೆಯಿಂದ ಒಂದು ಕಡೆಗೆ ಸಂಚರಿಸುತ್ತಾರೆ. ಮಲಂಗ್ ಎಂಬ ಶಬ್ಧ ಬಂದಿರುವುದು ಪರ್ಶಿಯನ್ ಭಾಷೆಯಿಂದ. ಇದರ ಅರ್ಥ ಎಂದರೆ **"**ಯಾವ ವ್ಯಕ್ತಿಯು ತನ್ನ ಬಗ್ಗೆ ತನಗೆ ಅಥವಾ ತನ್ನ ಸುತ್ತಮುತ್ತಲಿನ ಬಗ್ಗೆ ಯಾವುದೇ ಅರಿವಿಲ್ಲದೆ ಅಥವಾ ಜಗತ್ತಿನ ಆಗು ಹೋಗುಗಳ ಬಗ್ಗೆ ಅರಿವಿಲ್ಲದೆ ಸ್ವೇಚ್ಛೆಯಾಗಿ ಬದುಕುವಾತ**"** ಎಂದರ್ಥ.

ಮಲಂಗ್ ಪದಕ್ಕೆ ವಿವಿಧ ಅರ್ಥಗಳು ವಿವಿಧ ಪ್ರಾಂತ್ಯಗಳಲ್ಲಿ ಕಂಡು ಬರುತ್ತದೆ. ಆಫ್ಘಾನಿಸ್ಥಾನ್ ಮತ್ತು ಇತರೆ ಭಾಗಗಳಲ್ಲಿ ಇವರನ್ನು 'ಮದಾರಿ' ಅಂದರೆ ಜಾದು ಮಾಡುವಾತ, 'ಫಕೀರ–ಭಿಕ್ಷುಕ ಅಥವಾ ಪವಿತ್ರ ಮನುಷ್ಯ' 'ಖಲಂದರ್–ಅಲೆಮಾರಿ' ಚರಸಿ–ಚರಸ್ಸಿನ ವ್ಯಸನಿ' ದೀವಾನಾ–ಹುಚ್ಚ' 'ಲಿಬಾಸಿ ಮಲಂಗ್–ಸಿಂಹದ ವೇಷದಲ್ಲಿನ ಅಲೆಮಾರಿ ಹುಚ್ಚ' ಎಂದೂ ಕರೆಯಲಾಗುತ್ತದೆ.

ಇದರೊಂದಿಗೆ **"**ಆ ಅಲ್ಲಾಹನೇ ತನ್ನ ಕೈಯಾರ ಸ್ಪರ್ಷಿಸಿದ ಅತ್ಯಂತ ಪವಿತ್ರ ಮನುಷ್ಯರು' ಎನ್ನುತ್ತಾರೆ. ಒಟ್ಟಾರೆಯಾಗಿ ಮಲಂಗ್ ಎಂದರೆ ಈ **"ಜಗತ್ತಿನ ಯಾವುದನ್ನೂ ಲೆಕ್ಕಿಸದ ಹುಚ್ಚ"** ಎಂಬುದು ಸತ್ಯ.

ಮಲಂಗ್ ಸೂಫಿಗಳು ಈಗಿನ ಆಫ್ಘಾನಿಸ್ಥಾನ್, ಪಾಕಿಸ್ತಾನ್ ಮತ್ತು ಕಾಶ್ಮೀರಿ ಭಾಗದಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರ ಬದುಕೇ ಹಾಗೆ. ಇವರದ್ದು ನಿಜವಾಗಲೂ ಜಗತ್ತನ್ನು ಲೆಕ್ಕಿಸದ ಪರಂಪರೆ. ಈ ಮಲಂಗ್‌ಗಳಿಗೆ ಯಾವುದೂ ಬೇಕಿಲ್ಲ. ಯಾರಿಗೂ ಹೆದರದೆ, ತನ್ನಿಷ್ಟದಂತೆ ಬದುಕುವವರು. ಇಂದಿನ ಚಿಂತೆಯಿಲ್ಲ, ನಾಳಿನ ಭಯವಿಲ್ಲ.

ವಚನಕಾರರು ಹೇಳುವಂತೆ

***"ನಾಳೆ ಬಪ್ಪುದು, ಇಂದೇ ಬರಲಿ,***
***ಇಂದು ಬಪ್ಪುದು ಈಗಲೇ ಬರಲಿ***
***ಸಾವಿಗೆ ಯಾರು ಅಂಜುವರಯ್ಯ........."***

ಎನ್ನುವಂತೆ ಸಾವಿಗೆ, ಜಗಕೆ ಹೆದರಿ ಬದುಕುವ ಸಂಸ್ಕೃತಿ ಇವರದ್ದಲ್ಲ. ಕೇವಲ ಆತನ ಧ್ಯಾನದಲ್ಲಿ ಮಾತ್ರ ಕಳೆದುಹೋಗುವ ಇವರು ಅವಳೆಂಬ ಆತನನ್ನು ಒಲಿಸಿಕೊಳ್ಳಲು ತಮ್ಮನ್ನು ತಾವು ಕಠೋರ ಪರೀಕ್ಷೆಗಳಿಗೆ ತೆರೆದುಕೊಳ್ಳುತ್ತಾರೆ. ತಮ್ಮನ್ನು ತಾವು ದಂಡಿಸಿಕೊಳ್ಳುತ್ತರೆ. ತಮ್ಮನ್ನು ತಾವೇ ಫನಾ ಮಾಡಿಕೊಳ್ಳುತ್ತಾರೆ.

ಸಾಮಾನ್ಯ ಬದುಕನ್ನು ಮೀರಿ ಬದುಕುವ ಈ ಮಲಂಗ್‌ಗಳ ತಮ್ಮ ವೇಷಭೂಷಣಗಳು, ಹಾವಭಾವಗಳಿಂದಲೂ ಬಹಳಷ್ಟು ವಿಭಿನ್ನವಾಗಿ ಕಾಣಿಸಿಕೊಳ್ಳುತ್ತಾರೆ. ಎಂದೂ ಯಾರಿಗೂ ಹೆದರಿ ಅಥವಾ ಹೊಂದಾಣಿಕೆ ಮಾಡಿಕೊಂಡು ಬದುಕದ ಈ ಮಲಂಗ್ ತಾನು ನಡೆದದ್ದೇ ದಾರಿ ಎನ್ನುವಂತೆ ಬದುಕುತ್ತಾರೆ. ಯಾರು ಏನೇ ಅಂದುಕೊಂಡರು ಯಾರಿಗೂ ಅಳುಕದ ಈ ಮಲಂಗ್ ಒಂದು ರೀತಿಯಲ್ಲಿ ಕಾಡಿನಲ್ಲಿ ನಡೆವ ಆನೆಯಂತೆಯೇ ಸರಿ.

ಸಾಮಾನ್ಯವಾಗಿ ಮಲಂಗ್‌ಗಳು ಉದ್ದ ಕೂದಲನ್ನು ಬಿಟ್ಟಿರುತ್ತಾರೆ, ತಲೆಯ ಮತ್ತು ಗಡ್ಡದ ಕೂದಲನ್ನು ಉದ್ದವಾಗಿ ಬೆಳೆಸುತ್ತಾರೆ. ತಲೆಯ ಕೂದಲು ಭುಜಗಳ ಮೇಲಿನಿಂದ ಬೆನ್ನ ಮೇಲಿನವರೆಗೆ ಹರಡಿಕೊಂಡಿರುತ್ತದೆ. ಮೀಸೆಗಳೂ ಉದ್ದವಾಗಿ ಬೆಳೆಸುತ್ತಾರೆ. ಕಪ್ಪು ನಿಲುವಂಗಿಯನ್ನು ಧರಿಸುತ್ತಾರೆ. ತಲೆಗೆ ಸುಮಾರು ಹತ್ತರಿಂದ ಹದಿನೈದು ಮೀಟರ್‌ವರೆಗೆ ಬಟ್ಟೆಯನ್ನು ಮುಂಡಾಸಾಗಿ ಧರಿಸುತ್ತಾರೆ.

ಕಿವಿಯಲ್ಲಿ ದಪ್ಪ ಮತ್ತು ಅತಿ ತೂಕದ ಕುಂಡಲಗಳನ್ನು ಧರಿಸುತ್ತಾರೆ. ಕತ್ತಿನಲ್ಲಿ ವಿವಿಧ ಬಗೆಯ ಹಾರಗಳನ್ನು ಹಾಕಿಕೊಳ್ಳುತ್ತಾರೆ. ಹೆಚ್ಚಿನವರು ತಮ್ಮ ಕತ್ತಿನಲ್ಲಿ ಮಣಗಟ್ಟಲೆ ತೂಕದ ಕಬ್ಬಿಣದ ಸಂಕೋಲೆಗಳನ್ನು ಹಾಕಿಕೊಳ್ಳುತ್ತಾರೆ. ಕಬ್ಬಿಣದ

ಗುಂಡುಗಳು, ಕಬ್ಬಿಣದ ಹಾರಗಳು ಹೀಗೆ ಅತ್ಯಂತ ಭಾರವಾದ ವಸ್ತುಗಳನ್ನು ಧರಿಸುತ್ತಾರೆ. ಸೊಂಟಕ್ಕೆ ಕಬ್ಬಿಣದ ಗಂಟೆಗಳನ್ನು ಕಟ್ಟಿಕೊಳ್ಳುತ್ತಾರೆ. ಕಾಲಿನಲ್ಲಿ ಕಬ್ಬಿಣದ ಗೆಜ್ಜೆಗಳ ಜೊತೆಗೆ ಕಬ್ಬಿಣದ ಸೋಕೋಲೆಗಳನ್ನು ಹಾಕಿಕೊಂಡು ಶ್ರಮ ಪಟ್ಟು ನಡೆಯುತ್ತಾರೆ.

ಎಷ್ಟೇ ಚಳಿ, ಮಳೆ ಗಾಳಿ ಇದ್ದರೂ ಇದನ್ನು ಬದಲಿಸುವುದಿಲ್ಲ. ಈ ಕಬ್ಬಿಣದ ವಸ್ತುಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತವೆಯೆ ಹೊರತು ಕಡಿಮೆಯಾಗುವುದಿಲ್ಲ. ಕಡೆಗಾಲದಲ್ಲಿ ಇದರ ತೂಕ ಸುಮಾರು ಒಂದು ನೂರು ಕೆಜಿಯಷ್ಟು ಹೆಚ್ಚಿರುತ್ತದೆ ಎಂದು ಅಧ್ಯಯನಗಳು ಹೇಳುತ್ತವೆ. ತಮಗೆ ಸಂತೋಷ ಆದಾಗಲೋ ಅಥವಾ ದುಖಃ ಆದಾಗಲೋ ನುಡಿಸಲು ಇವರು ಟಗರಿನ ಕೊಂಬಿನಿಂದ ಮಾಡಿದ ವಿಶಿಷ್ಟ ಪ್ರಕಾರದ ವಾದ್ಯವನ್ನು ಬಳಸುತ್ತಾರೆ. ಇದನ್ನು ಊದುವುದರಿಂದ ಶಂಖನಾದದ ಮಾದರಿಯಲ್ಲಿ ಸುಂದರ ನಾದ ಹೊರಹೊಮ್ಮುತ್ತದೆ.

ಇವರು ತಮ್ಮ ಗುರುವಿನ ದರ್ಶನ ಅಥವಾ ಇನ್ನ್ಯಾವುದೋ ಕಾರ್ಯವಿದ್ದರೂ ಇದನ್ನೇ ನುಡಿಸುವುದರ ಮೂಲಕ ತಮ್ಮ ಬರುವಿಕೆಯನ್ನು ತಿಳಿಸುತ್ತಾರೆ. ದರ್ಗಾದಲ್ಲಿ ನಡೆಯುವ ಪ್ರಾರ್ಥನೆ (ಫಾತೆಹಾ) ಗಂಧದ ಪೂಜೆ (ಸಂದಲ್–ಎ–ಮುಬಾರಕ್) ಸಂದರ್ಭದಲ್ಲಿಯೂ ಇದನ್ನು ನುಡಿಸಿ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಭಿಕ್ಷಾಟನೆಗೆಂದು ಒಂದು ಕಟ್ಟಿಗೆಯ ಅಥವಾ ಕಬ್ಬಿಣದ ಇಲ್ಲವೇ ಮತ್ತ್ಯಾವುದೇ ಲೋಹದ ಪಾತ್ರೆಯನ್ನು (ಕಾಜ್ ಕೋಲ್) ಹಿಡಿದುಕೊಂಡಿರುತ್ತಾರೆ. ಮತ್ತೊಂದು ಕೈಯ್ಯಲ್ಲಿ ಒಂದು ಉದ್ದನೆಯ ಮರದ ದೊಣ್ಣೆಯನ್ನು (ಆಸಾ) ಹಿಡಿದುಕೊಂಡಿರುತ್ತಾರೆ. ಈ ದೊಣ್ಣೆ ಅವರನ್ನು ದುಷ್ಟ ಶಕ್ತಿಗಳನ್ನು ಹಾಗೂ ಅಗೋಚರ ಶಕ್ತಿಗಳನ್ನು ಓಡಿಸಲು ಸಹಾಯ ಮಾಡುತ್ತದೆ ಎಂಬ ನಂಬಿಕೆ ಇವರಲ್ಲಿದೆ.

ಹೀಗೆ ಕಾಣಿಸಿಕೊಳ್ಳುವ ಇವರಿಗೆ ಒಂದು ಕಡೆ ನೆಲೆ ಇಲ್ಲ. ನಿರಂತರ ತಿರುಗಾಟವೇ ಇವರ ಬದುಕಾಗಿರುತ್ತದೆ. ಇವರು ಎಂದೂ ಒಂದು ಕಡೆ ನೆಲೆ ನಿಲ್ಲುವುದಿಲ್ಲ. ಜೀವನಕ್ಕಾಗಿ ಭಿಕ್ಷಾಟನೆ ಮಾಡುತ್ತಾರೆ. ಅದರಲ್ಲಿ ಅತ್ಯಂತ ಗಂಭೀರ ಸ್ವರೂಪದಲ್ಲಿ ನಿಲ್ಲುವ ಇವರು ಯಾರ ಬಳಿಯೂ ಭಿಕ್ಷೆ ಕೇಳುವುದಿಲ್ಲ, ಬದಲಿಗೆ ಇವರ ಬಳಿಯೇ ಜನರು ಬಂದು ಹಣ ಹಾಗೂ ಆಹಾರವನ್ನು ನೀಡುತ್ತಾರೆ. ಇವರು ದರ್ಗಾದ ಒಳಗೆ (ಸೂಫಿ ಆರಾಧನಾ ಸ್ಥಳಗಳು) ಭೇಟಿ ಕೊಟ್ಟಾಗ ಇವರ ಮುಂದೆ ಯಾರೂ ನಿಲ್ಲುವುದಿಲ್ಲ. ಇವರ ದಾರಿಗೆ ಯಾರೂ ಅಡ್ಡ ಮಾಡುವುದಿಲ್ಲ. ಅಲ್ಲಿಯೂ ಇವರು ನಡೆದದ್ದೇ ದಾರಿ. ಮಣಗಟ್ಟಲೆ ಕಬ್ಬಿಣದ ಸಂಕೋಲೆಗಳನ್ನು ಎಳೆದುಕೊಂಡು ನಿಧಾನವಾಗಿ ದರ್ಗಾಗೆ ಬರುವ ಇವರು ಕೊಂಬಿನ ವಾದ್ಯವನ್ನು ನುಡಿಸಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ದರ್ಶನವನ್ನು ಪಡೆಯುತ್ತಾರೆ. “ಹಖ್ ಮೊಯೀನ್–ಯಾ ಮೊಯೀನ್” ನೀನೆ ಎಲ್ಲಾ, ನೀನೆ ಅಲ್ಲಾ ಎನ್ನುತ್ತಾ ಧ್ಯಾನಕ್ಕೆ ಮೊರೆ ಹೋಗುತ್ತಾರೆ. ಈ ದರ್ಗಾಗಳಿಗೆ ಕೆಲವೊಮ್ಮೆ ಏಕಾಂತವಾಗಿ ಇಲ್ಲವೇ ಗುಂಪಾಗಿ ಬಂದು ಪ್ರಾರ್ಥನೆ ಸಲ್ಲಿಸುತ್ತಾರೆ. ಯಾರಿಗೂ ಹೆದರದ ಇವರು ಅವಳೆಂಬ ಆ ಅಲ್ಲಾಹನನ್ನು ಒಲಿಸಿಕೊಳ್ಳಲು ಕಠೋರ ಬದುಕಿಗೆ ಮಾರುಹೋಗಿದ್ದಾರೆ.

ಇವರು ಹೀಗೆಯೇ. ಮಲಂಗಗಳು ಹೀಗೆಯೇ. ಈ ಕಠೋರ ಬದುಕು ಅವರ ಮುಕ್ತಿಗೆ ಪರಿಹಾರ ಎಂದು ಗಾಢವಾಗಿ ನಂಬಿದವರು. “ನಿನಗಾಗಿ ನಾನು ಏನು ಬೇಕಾದರೂ ಮಾಡುತ್ತೇನೆ. ನಿನಗಾಗಿ ನಾನು ಎಷ್ಟು ಬೇಕಾದರೂ ನಡೆಯುತ್ತೇನೆ. ನಿನಗಾಗಿ ನಾನು ಎಷ್ಟು ಕಷ್ಟಗಳೇ ಅಗಲಿ ಸಹಿಸಿಕೊಳ್ಳುತ್ತೇನೆ. ನನ್ನ ಜೀವನದ ಈ ಪರಿಯನ್ನು ನೋಡಿಯಾದರೂ ನಿನ್ನ ಮನಸ್ಸಿನಲ್ಲಿ ನನ್ನ ಮೇಲೆ ಪ್ರೀತಿ ಬರಲಿ. ಆ ಪ್ರೀತಿ ನಿರಂತರವಾಗಿರಲಿ, ಶಾಶ್ವತವಾಗಿರಲಿ” ಎಂಬ ಉತ್ಕಟ ಬಯಕೆಯೊಂದಿಗೆ ಅಲ್ಲಾಹನನ್ನು ಪ್ರೀತಿಸಲು ಹೋಗುತ್ತಾರೆ. ಪ್ರೀತಿಯ ಹುಡುಕಾಟ ನಡೆಸುತ್ತಾರೆ.

ಜಗತ್ತಿನಲ್ಲಿ ಯಾರಿಗೂ ಇಲ್ಲದೆ ಅದ್ಭುತ ಮತ್ತು ಅತ್ಯದ್ಭುತ ಸೌಂದರ್ಯದ ಖನಿಯಾಗಿರುವ ಆ ಪ್ರಿಯತಮೆಯ ಪ್ರೀತಿಯನ್ನು ಪಡೆದುಕೊಳ್ಳಲು ನಿರಂತರ ಪರಿತಪಿಸುತ್ತಾರೆ. ತಮ್ಮನ್ನು ತಾವು ನೋಯಿಸಿಕೊಳ್ಳುತ್ತಾರೆ. ಕೊರಗುತ್ತಾರೆ. ಗೋಗರೆಯುತ್ತಾರೆ. ಅಳುತ್ತಾರೆ. ನೋವಿನಿಂದ ಕರೆಯುತ್ತಾರೆ. ನಗುತ್ತಾರೆ, ಪ್ರೀತಿಯಿಂದ ಕೂಗುತ್ತಾರೆ. ಆಕೆಗಾಗಿ ನಿರಂತರ ನಡೆಯುತ್ತಾರೆ. ನಡೆಯುತ್ತಲೇ ಇರುತ್ತಾರೆ. ಹುಚ್ಚರಾಗುತ್ತಾರೆ. ಬೀದಿ ಬೀದಿ ಅಲೆಯುತ್ತಾರೆ. ಅಲ್ಲಾಹನ ಪ್ರೀತಿಗಾಗಿ ನಿಜವಾಗಲೂ ಹುಚ್ಚರಾಗುತ್ತಾರೆ. ಆ ಹುಚ್ಚುತನದಲ್ಲಿಯೇ ಸುಖವನ್ನು ಕಾಣುತ್ತಾರೆ. ಅನನ್ಯ ಪ್ರೀತಿಯ ಹುಡುಕಾಟ ನಡೆಸುತ್ತಲೇ ಇರುತ್ತಾರೆ.

***"ಮೆರೆ ದಿಲ್ ನೆ ತುಜ್ಹ್ ಕು ಚಾಹಾ***
***ಕ್ಯಾ ಯೆಹಿ ಮೆರೀ ಖತಾ ಹೈ***
***ಮಾನಾ ಖತಾ ಹೈ ಲೇಕಿನ್***
***ಐಸೀ ತೊ ಸಝಾ ನಾ ದೇ***
***ಓಹ್ ದಿಲ್ ಕಹಾಂ ಸೆ ಲಾವೂಂ***
***ತೇರಿ ಯಾದ್ ಜೊ ಭುಲಾದೇ"..............***

(ಸೂಫಿ ಕಾವ್ಯದ ಸಾಲುಗಳು)

***"ನನ್ನ ಹೃದಯವು ನಿನ್ನನ್ನು ಒಪ್ಪಿಕೊಂಡಿತು***
***ಇದೇನಾ, ನಾ ಮಾಡಿದ ತಪ್ಪು***
***ಒಪ್ಪಿಕೊಳ್ಳುತ್ತೇನೆ ನಾನು ತಪ್ಪು ಮಾಡಿದ್ದೇನೆಂದು***
***ಆದರೆ ಇಂತಹಾ ಘೋರ ಶಿಕ್ಷೆಯನ್ನು ನೀ ನೀಡದಿರು***
***ನಿನ್ನ ನೆನಪನ್ನು ಮಾಸಿಬಿಡುವ***
***ಆ ಹೃದಯ ಎಲ್ಲಿಂದ ತರಲಿ"......................***

**ಪರಾಮರ್ಶನ/ಆಕರ ಗ್ರಂಥಗಳು**


- ಫಕೀರ್ ಮಹಮ್ಮದ್ ಕಟ್ಪಾಡಿ. (2010). *ಸೂಫಿ ಸಂತರು.* ಅಂಕಿತ ಪುಸ್ತಕ.
- ವಿಠಲ್ ರಾವ್ ಗಾಯಕ್ವಾಡ್. (2004). *ಸೂಫಿ ಸಂಪ್ರದಾಯ ತತ್ವಜ್ಞಾನ ಮತ್ತು ಕಾರ್ಯ.* (ಅನು, ಸೇತು ಮಾಧವ ರಾವ್ ಪಗಡಿ) ಕನ್ನಡ ಪುಸ್ತಕ ಪ್ರಾಧಿಕಾರ.
- London, Routledge & K. Paul. (n.d.). *A Comprehensive Persian-English Dictionary, Including the Arabic Words and Phrases to be Met with in Persian Literature.* https://dsal.uchicago.edu/dictionaries/steingass/
- Muhammad Asghar, Sumera Jawad, Muhammad Arshad Rehmani, and Sumbul Natalia. (2020). The Malang in Pakistan Today. *JSRP*, 57(2), 121-132
- Sidky, M. H. (1990). "Malang", Sufis, and Mystics: An ethnographic and historical study of shamanism in Afghanistan. *Asian Folklore Studies*, *49*(2), 275. https://doi.org/10.2307/1178037

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 32-36
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಚಿತ್ರದುರ್ಗ ಪಾಳೆಯಗಾರರ ಕಾಲದ ಮಠಗಳು

**ಓಬಣ್ಣ ಪಿ**
ಸಹಾಯಕ ಪ್ರಾಧ್ಯಾಪಕರು, ಶ್ರೀಮತಿ ಕೋಟೆಬೋರಮ್ಮ, ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ
ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿ.ವಿ. ಹಂಪಿ

**Abstract:**
*ಭಾರತ ದೇಶದಲ್ಲಿ ಧರ್ಮಕ್ಕೆ ಇರುವಷ್ಟು ಪ್ರಾಮುಖ್ಯತೆ ಬೇರೆ ಯಾವ ದೇಶದಲ್ಲಿಯೂ ಇರಲಿಕ್ಕಿಲ್ಲ. ಭಾರತದಲ್ಲಿ ಹಲವು ಧರ್ಮಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ. ಭಾರತದ ಪ್ರತಿಯೊಂದು ಧರ್ಮಗಳು ಮಠ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಧರ್ಮ ಪ್ರಚಾರವನ್ನು ಮಾಡುತ್ತ ಬಂದಿವೆ. ಧರ್ಮ ಪ್ರಚಾರಕರು ಅಥವಾ ಸನ್ಯಾಸಿಗಳು ನೆಲೆನಿಂತ ಕೇಂದ್ರಗಳು ಮಠಗಳಾಗಿ ಹೆಸರು ಪಡೆದಿವೆ. ಯಾವುದೇ ಮತಧರ್ಮದ ಅಳಿವು–ಉಳಿವುಗಳಿಗೆ ಕಾರಣ ಆಯಾ ಮತಧರ್ಮದ ಸಂಪ್ರದಾಯ, ಸಂಘಟನೆ ಹಾಗೂ ಧರ್ಮ ತತ್ವಗಳ ಪ್ರಸಾರಕ್ಕಾಗಿ ಸ್ಥಾಪನೆಗೊಂಡ ಮಠಗಳು. ಪ್ರಸ್ತುತ ಲೇಖನದಲ್ಲಿ ಚಿತ್ರದುರ್ಗ ಪಾಳೆಯಗಾರರ ಕಾಲದ ಮಠಗಳ ಮೇಲೆ ಬೆಳಕು ಚೆಲ್ಲಲಾಗಿದೆ.*

**Keywords:** *ಚಿತ್ರದುರ್ಗ ಪಾಳೆಯಗಾರರು, ಮಠಗಳು, ಧಾರ್ಮಿಕ ಕೇಂದ್ರ, ಧರ್ಮ ಪ್ರಚಾರ.*

**ಪೀಠಿಕೆ**

'ಮಠ' ಎಂದರೆ ಸನ್ಯಾಸಿಗಳು ವಾಸಿಸುವ ಸ್ಥಳ ಅಥವಾ ಕುಟೀರ ಎಂಬ ಅರ್ಥವಿದೆ. 'ಮಠ' ಎಂಬ ಈ ಪದವನ್ನು ಮೂಲತಃ ಸಂಸ್ಕೃತದಿಂದ ಕನ್ನಡಕ್ಕೆ ತೆಗೆದುಕೊಳ್ಳಲಾಗಿದೆ, ಮಠ ಧಾತುವಿನಿಂದ 'ಮಠತಿ' ರೂಪ ಸಿದ್ಧವಾಗುತ್ತದೆ. ಇದರ ಅರ್ಥವು ವಾಸಿಸು ಎಂದು, ಸಂಸ್ಕೃತ ನಿಘಂಟುಕಾರನಾದ ಅಮರಸಿಂಹನು ತನ್ನ ಅಮರಕೋಶದಲ್ಲಿ 'ಮಠ' ಛಾತ್ರಾದಿ ನಿಲಯ ಎಂದು ಹೇಳಿದ್ದಾನೆ. ಛಾತ್ರ ಎಂದರೆ ಶಿಷ್ಯ ಅಥವಾ ವಿದ್ಯಾರ್ಥಿ, ಅಂದರೆ ಗುರು ಶಿಷ್ಯರು ವಾಸಿಸುವ ಸ್ಥಳವೆಂದು ಅರ್ಥೈಸಬಹುದಾಗಿದೆ.

ಮಠಗಳ ಹುಟ್ಟು ಬೆಳವಣಿಗೆಯನ್ನು ತಿಳಿಯಲು ಹೋದರೆ ವೇದಗಳ ಕಾಲಕ್ಕೆ ಕೊಂಡೊಯ್ಯುತ್ತದೆ. ವೇದಗಳ ಕಾಲದಲ್ಲಿ ಪ್ರಮಾಣಿಕರಿಗೆ ಆತಿಥ್ಯ ನೀಡುವ ಸ್ಥಳಗಳಿದ್ದ ಬಗ್ಗೆ ಋಗ್ವೇದದಲ್ಲಿ ಮಾಹಿತಿ ದೊರೆಯುತ್ತದೆ. ಪ್ರಯಾಣದಿಂದ ದಣಿವಾದ ಯಾತ್ರಿಕರ ವಿಶ್ರಾಂತಿಗಾಗಿ ಮನೆ, ಆಹಾರ, ನೀರು ಮುಂತಾದವುಗಳನ್ನ ಏರ್ಪಡಿಸುವುದು ಧರ್ಮದ ಕಾರ್ಯಗಳೆಂದು ಶಾಸ್ತ್ರಗಳು ನಿರೂಪಿಸುತ್ತವೆ. ಇಂತಹ ಧರ್ಮ ಕಾರ್ಯಗಳನ್ನು ಮಠಗಳು ಇಂದಿಗೂ ನಿರ್ವಹಿಸಿಕೊಂಡು ಬರುತ್ತಿವೆ. ಆರಂಭದಲ್ಲಿ ಅಧ್ಯಯನ, ಅಧ್ಯಾಪನಗಳಿಗೆ ಮಾತ್ರ ಸೀಮಿತವಾಗಿದ್ದ ಮಠಗಳು ಕ್ರಮೇಣ ಅನ್ನಛತ್ರ, ಅನಾಥಶ್ರಮ ಹಾಗೂ ಔಷಧಾಲಯಗಳ ಕಾರ್ಯವನ್ನೂ ನಿರ್ವಹಿಸಲಾರಂಭಿಸಿದ ಫಲವಾಗಿ ಅವು ಮಹತ್ವಪೂರ್ಣ ಸಾಂಸ್ಕೃತಿಕ ಕೇಂದ್ರಗಳಾಗಿ

***Please cite this article as:*** ಓಬಣ್ಣ, ಪಿ. (2024). ಚಿತ್ರದುರ್ಗ ಪಾಳೆಯಗಾರರ ಕಾಲದ ಮಠಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(2), 32–36

ಅಭಿವೃದ್ಧಿ ಪಡೆದವು. ಅನಾದಿ ಕಾಲದಿಂದಲೂ ಇಂತಹ ಮಠಗಳಿಗೆ ರಾಜಮನೆತನಗಳು ರಾಜಾಶ್ರಯವನ್ನು ನೀಡಿವೆ. ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ವಿಜಯನಗರ ಅರಸರ ಸಾಮಂತರಾಗಿದ್ದ ಹಲವಾರು ಪಾಳೆಯಗಾರರು ವಿಜಯನಗರ ಸಾಮ್ರಾಜ್ಯ ಪತನ ನಂತರ ಸ್ವತಂತ್ರರಾಗಿ ಆಳ್ವಿಕೆ ಮಾಡಿದರು. ಆ ಕಾಲದಲ್ಲಿ ಸಾವಿರಾರು ಮಠಗಳು ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದವು. ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ಹಲವಾರು ಮಠಗಳು ಸ್ಥಾಪಿಸಿ ರಾಜಾಶ್ರಯ ನೀಡಿದರು.

ಕಾಮಗೇತಿ ವಂಶದ ಪಾಳೆಯಗಾರರಾದ ಚಿತ್ರದುರ್ಗ ಪಾಳೆಯಗಾರರು ಕ್ರಿ.ಶ. 1568 ರಿಂದ 1779 ರವರೆಗೆ ಸುಮಾರು 211 ವರ್ಷಗಳ ಕಾಲ 13 ನಾಯಕ ಅರಸರು ಆಳ್ವಿಕೆ ಮಾಡಿದ್ದಾರೆ. ಇವರು ಕ್ರಿ.ಶ. 14ನೇ ಶತಮಾನದಲ್ಲಿ ತಿರುಪತಿ ಅಥವಾ ಜಡೆಕಲ್ಲು ದುರ್ಗದಿಂದ ವಲಸೆ ಬಂದು ನಿರ್ಥಡಿಯಲ್ಲಿ ನೆಲೆಸಿದರು. ಇವರು ಬೇಡ ಜನಾಂಗದ ವಾಲ್ಮೀಕಿ ಗೋತ್ರದ ಕಾಮಗೇತಿ ಕುಲದವರು, ಚಿತ್ರದುರ್ಗ ಪಾಳೆಯಗಾರರ ಮೂಲ ಪುರುಷ ಮತ್ತಿ ತಿಮ್ಮಣ್ಣನಾಯಕ (1549–1557) ತದನಂತರ ಓಬಣ್ಣ ನಾಯಕ, 1ನೇ ಚಿಕ್ಕಣ್ಣ ನಾಯಕ, 1ನೇ ಕಸ್ತೂರಿ ರಂಗಪ್ಪ ನಾಯಕ, ಬಿಚ್ಚುಗತ್ತಿ ಭರಮಣ್ಣ ನಾಯಕ, ಹಿರೇ ಮದಕರಿ ನಾಯಕ, ರಾಜಾವೀರ ಮದಕರಿನಾಯಕ (ಕ್ರಿ.ಶ. 1754–1779) ಇತ್ಯಾದಿ ಆಳ್ವಿಕೆ ಮಾಡಿದ್ದಾರೆ. ಪ್ರಸಿದ್ಧ ಮನೆತನದಲ್ಲಿ ಆಳ್ವಿಕೆ ಮಾಡಿದ ಪಾಳೆಯಗಾರರ ಕಾಲದಲ್ಲಿ ಹಲವಾರು ಮಠ ಮಾನ್ಯಗಳು ಸ್ಥಾಪನೆಗೊಂಡಿದ್ದಲ್ಲದೇ ರಾಜಾಶ್ರಯ ನೀಡಿ ದಾನದತ್ತಿಗಳನ್ನು ನೀಡಿದ್ದಾರೆ. ಚಿತ್ರದುರ್ಗ ಪಾಳೆಯಗಾರರು ಶೈವ, ವೈಷ್ಣವ, ಲಿಂಗಾಯಿತ ಮಠಗಳೊಂದಿಗೆ ಉತ್ತಮ ಸಂಬಂಧ ಇಟ್ಟುಕೊಂಡಿದ್ದಲ್ಲದೇ ದಾನ–ದತ್ತಿಗಳನ್ನೂ ನೀಡಿದ್ದಾರೆ.

ಒಂದನೇ ಕಸ್ತೂರಿ ರಂಗಪ್ಪ ನಾಯಕನ ಕಾಲದಲ್ಲಿ ಆತನ ಪತ್ನಿ ಕಾಟವ್ವ ನಾಗತಿ 'ಕಾಟಿಮಠ'ವನ್ನು ಕಟ್ಟಿಸಿ ಅದಕ್ಕೆ ಸಂಬಂಧಿಸಿದ ಒಂದು ತೋಪು ನಿರ್ಮಿಸಿದಳು. ಚಿಕ್ಕಣ್ಣನಾಯಕ ಮತ್ತು ಇವರ ಪತ್ನಿ ಮಲ್ಲವ್ವನಾಗತಿ ಉಗ್ರ ಚನ್ನವೀರಸ್ವಾಮಿಗಳಿಂದ ದೀಕ್ಷೆ ಪಡೆದು ರಾಜಪರಿವಾರ ವೀರಶೈವ ಮತಕ್ಕೆ ಮತಾಂತರ ಹೊಂದಿದರು. ಮಲ್ಲವ್ವನಾಗತಿ ನರಸಿಂಹ ಬಾಗಿಲಿನ ಹತ್ತಿರ ಕಲ್ಲುಮಠವನ್ನು ಕಟ್ಟಿಸಿಕೊಟ್ಟರು.

**ಅಂಕಲಿಮಠ**

ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ಪಂಚಲಿಂಗೇಶ್ವರ ಮಂದಿರಕ್ಕೆ ಹೊಂದುವಂತೆ ದೊಡ್ಡ ಬಂಡೆಯ ಕೆಳಗೆ ನೆಲಗವಿಯಲ್ಲಿ ಲಿಂಗವಿದೆ. ಹಿಂದೆ ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ಬೆಳಗಾವಿ ಜಿಲ್ಲೆಯ ಅಂಕಲಗಿ ಕಡೆಯಿಂದ ಬಂದ ಸನ್ಯಾಸಿಯೊಬ್ಬರು ಇಲ್ಲಿ ನೆಲಸಿದ್ದರಿಂದ ಅಂಕಲಿಮಠವೆಂದು ಕರೆಯುತ್ತಾರೆ. ಹಿಂದೆ ಶೈವ ಪಂಥದ ಕಾಳಮುಖರ ವಸತಿ ಶಾಲೆಯ ವಿದ್ಯಾ ಕೇಂದ್ರವಾಗಿತ್ತು. ಪಾಳೆಯಗಾರರ ಕಾಲದ ಹಸ್ತಪ್ರತಿಗಳ ಆಧಾರಗಳ ಮೇಲೆ ಭರಮಣ್ಣ ನಾಯಕನ ಅಧಿಕಾರಿ ಬಾಗೂರು ಪರದೇಶಪ್ಪ ನೆಲಗವಿ ನಿರ್ಮಿಸಿ, ಈ ಗುಹೆಯೊಳಗಡೆ ದೊಡ್ಡ ಶಿವಲಿಂಗವನ್ನು ಪ್ರತಿಸ್ಥಾಪಿಸಿದನು. ಆದ್ದರಿಂದ ಚಾವಡಿಯ ನೆಲಗವಿಯ ಭಾಗವನ್ನು "ಪರದೇಶಪ್ಪನ ಗವಿ" ಎನ್ನುತ್ತಾರೆ. ತದನಂತರ ವೀರಶೈವ ಗುರುಗಳು ಇಲ್ಲಿಗೆ ಪ್ರವೇಶಿಸುವುದರೊಡನೆ, ಕಾಳಮುಖರು ರೂಪಿಸಿದ ಜ್ಞಾನ ದಾಸೋಹ, ಅನ್ನ ದಾಸೋಹವನ್ನು ಮುಂದುವರೆಸಿಕೊಂಡು ಶ್ರೀಮುರುಘರಾಜೇಂದ್ರ ಮಠವು ಅಂಕಲಿಮಠವನ್ನು ಪೋಷಿಸಲು ಮುಂದಾಯಿತು.

**ಶ್ರೀ ಕೂಡಲಿ ಶೃಂಗೇರಿ ಮಠ**

ಶಿವಮೊಗ್ಗದ ವಾಯುವ್ಯ ದಿಕ್ಕಿನಲ್ಲಿರುವ ಶ್ರೀ ಕೂಡಲಿ ಶೃಂಗೇರಿ ಮಠವನ್ನು ಕ್ರಿ.ಶ. 1546 ರಲ್ಲಿ ಪ್ರಥಮ ನರಸಿಂಹ ಭಾರತೀ ಸ್ವಾಮಿಗಳು ಸ್ಥಾಪಿಸಿದರು. ಇದೊಂದು ವೈಷ್ಣವ ಮಠವಾಗಿದ್ದು, ಕರ್ನಾಟಕದ ಹಲವಾರು ಪಾಳೆಯಗಾರರು ಈ ಮಠದೊಂದಿಗೆ ಸಂಬಂಧ ಇಟ್ಟುಕೊಂಡಿದ್ದರು.

ಚಿತ್ರದುರ್ಗ ಪಾಳೆಯಗಾರರು ಸಹ ಅನೂನ್ಯ ಸಂಬಂಧವಿಟ್ಟು ಕೊಂಡಿರುವುದಕ್ಕೆ 24 ದಾನಶಾಸನಗಳಲ್ಲಿ ಉಲ್ಲೇಖಗಳಿವೆ. ಕಸ್ತೂರಿ ಚಿಕ್ಕಣ್ಣ ನಾಯಕನ ಕಾಲದಿಂದ ಕೊನೆಯ ದೊರೆ ರಾಜಾವೀರ ಮದಕರಿ ನಾಯಕನ ಕಾಲದವರೆಗೂ ಸಂಬಂಧ ಮುಂದುವರಿದಿತ್ತು. ದಾನ ನೀಡಿರುವ ಪ್ರತಿಯೊಬ್ಬ ಪಾಳೆಯಗಾರರು ದಾನಶಾಸನ ಪ್ರಾರಂಭದಲ್ಲಿ ಶಂಭುವನ್ನು ನೆನೆದು, ಶೃಂಗೇರಿ ಶ್ರೀ ವಿದ್ಯಾಶಂಕರರನ್ನು ಹೊಗಳಿ ಅವರ ಶ್ರೀಪಾದ ಪದ್ಮಾರಾಧಕರಾದ ಶ್ರೀ ನರಸಿಂಹ ಭಾರತಿ ಸ್ವಾಮಿಗಳನ್ನು ಸ್ತುತಿಸಿ ಅನಂತರ ಅವರ “ಕರಕಮಲ ಸಂಜಾತರಾದ ಶೃಂಗೇರಿ ಶ್ರೀಶಂಕರ ಭಾರತೀ ಸ್ವಾಮಿಗಳ್ಯೆಯ್ಯನವರ ದಿವ್ಯ ಪಾದ ಪದ್ಮಗಳಿಗೆ” ಎಂದು ಭಕ್ತಿ ಗೌರವದಿಂದ ಸಂಬೋಧಿಸಿ ಅನಂತರ ದಾನಕೊಟ್ಟಿರುವ ಅಥವಾ ನಿರೂಪದ ವಿವರಗಳನ್ನು ಹೇಳಿದೆ. ಸ್ವಾಮಿಗಳು ಸಹ ಪಾಳೆಯಗಾರರಿಗೆ ಆಶೀರ್ವದಿಸಿ ವಿಭೂತಿ, ಫಲ, ಪ್ರಸಾದಗಳ ಸಹಿತ ಸಂದೇಶ ಕಳುಹಿಸುತ್ತಿದ್ದರು ಹಾಗೂ ಶೃಂಗೇರಿ ಮಠದ ಸ್ವಾಮಿಗಳು ದುರ್ಗಕ್ಕೆ ಬಂದರೆ ಗಡಿಗಳ ನಾಯಕರು, ದಳವಾಯಿಗಳು, ನಾಡಗೌಡರುಗಳಿಗೆ ಅವರನ್ನು ಗಡಿಯೊಳಗೆ ಬಿಟ್ಟು ಮರ್ಯಾದೆಯಿಂದ ನೋಡಿಕೊಳ್ಳಲು ರಹದಾರಿ ಪತ್ರಗಳನ್ನು ಪಾಳೆಯಗಾರರು ಕಳುಹಿಸುತ್ತಿದ್ದರು. ಚಿತ್ರದುರ್ಗದ ಪೂರ್ವ ದಿಕ್ಕಿನಲ್ಲಿರುವ ಶ್ರೀ ಕೂಡಲಿ ಶೃಂಗೇರಿ ಮಠದ ಶಾಖಾಮಠವನ್ನು ಪಾಳೆಯಗಾರರೇ ಸ್ಥಾಪಿಸಿದರು.

ಶ್ರೀ ಕೂಡಲಿ ಶೃಂಗೇರಿ ಸ್ವಾಮಿಗಳು ಪಾಳೆಯಗಾರರ ಆಡಳಿತದಲ್ಲಿ ಹಸ್ತಕ್ಷೇಪ ಮಾಡದೇ ಸಲಹೆ, ಸೂಚನೆಗಳನ್ನು ನೀಡುತ್ತಿದ್ದರು. ಪಾಳೆಯಗಾರರು ಹಲವಾರು ದಾನ, ದತ್ತಿ, ಉಂಬಳಿಗಳನ್ನು ಸದರಿ ಮಠಕ್ಕೆ ನೀಡಿದ್ದಾರೆ. ಕ್ರಿ.ಶ. 1678 ರಲ್ಲಿ ಕಸ್ತೂರಿ ಚಿಕ್ಕಣ್ಣ ನಾಯಕನು ಶ್ರೀ ಶಂಕರ ಭಾರತಿ ಸ್ವಾಮಿಗಳಿಗೆ ಬಾಗೂರು ಸೀಮೆಯೊಳಗಿನ ಮಾರಬಗಟ್ಟೆ ಗ್ರಾಮವನ್ನು ದಾನ ಮಾಡುತ್ತಾನೆ. ಭರಮಣ್ಣ ನಾಯಕನು ಕ್ರಿ.ಶ. 1689 ರಲ್ಲಿ ಚಿತ್ರದುರ್ಗ ಸೀಮೆಯ ಜಾಜೂರು ಹೋಬಳಿಯೊಳಗಿನ ಹನುಮಳ್ಳಿ ಗ್ರಾಮವನ್ನು ದಾನ ಮಾಡುತ್ತಾನೆ. ಹಿಂದೆ ಕಸ್ತೂರಿ ಚಿಕ್ಕಣ್ಣ ನಾಯಕ ದಾನವಾಗಿ ಕೊಟ್ಟಿದ್ದ ಮಾರಬಗಟ್ಟೆ ಗ್ರಾಮವು ಕಾರಣಾಂತರಗಳಿಂದ ಅಭ್ಯಂತರವಾಗಿದ್ದನ್ನು ಗಮನಿಸಿ ಹಿರೇ ಮದಕರಿನಾಯಕ ಪುನಃ ಮಠಕ್ಕೆ ದಾನಕೊಟ್ಟು ತನ್ನ ಪಿತೃಗಳಿಗೆ ಪುಣ್ಯವಾಗಲೆಂದು ಹಾರೈಸುವನು. 1749 ರಲ್ಲಿ ಘಟಪರ್ತಿಯ ಸುಂಕದ ಕಟ್ಟೆಯಲ್ಲಿ ಈ ಮಠಕ್ಕೆ ಪಾಲು ದೊರೆಯುವಂತೆ ನಿರೂಪ ಕೊಟ್ಟಿದ್ದಾನೆ. ಹಿರೇಮದಕರಿನಾಯಕ ಮತ್ತು ಮುರುಘಮಠದ ಗುರುಪಾದ ದೇಶಿಕರ ಮಧ್ಯೆ ಸಂಬಂಧ ಹದಗೆಟ್ಟಾಗ ಶ್ರೀಕೂಡಲಿ ಶೃಂಗೇರಿ ಮಠಾದೀಶರಿಗೆ ಹೆಚ್ಚು ಗೌರವ ತೋರಲಾರಭಿಸಿದರು.

ಚಿತ್ರದುರ್ಗದ ಕೊನೆಯ ಅರಸ ರಾಜಾವೀರ ಮದಕರಿ ನಾಯಕನು ತನ್ನ ಮದುವೆಯ ಉತ್ಸವದ ಅಂಗವಾಗಿ ಗುಂಟನೂರು ಮಲ್ಲಪ್ಪಬಾವಿ ತೋಟದ ಭೂಮಿಯನ್ನು ಶಿವಾರ್ಪಿತವಾಗಿ ಶೃಂಗೇರಿ ಮಠಕ್ಕೆ ದಾನಕೊಡುತ್ತಾನೆ. ತನ್ನ ಸಹೋದರ ಪರಶುರಾಮನಾಯಕನ ವಿವಾಹ ಸಂದರ್ಭದಲ್ಲಿ ತಗಂದ ವಸ್ತ್ರ ಕಳುಹಿಸುವನು ಶ್ರೀ ಶಂಕರ ಭಾರತೀ ಸ್ವಾಮಿಗಳು ಚಿತ್ರದುರ್ಗದಲ್ಲಿ ಬ್ರಹ್ಮೀಭೂತರಾದಾಗ ನಾಯಕರು ಅವರ ಸಮಾಧಿಗೆ ಏರ್ಪಾಡು ಮಾಡುತ್ತಾನೆ. ಇವರು ಪಾಳೆಯಗಾರರಿಗೆ ಸಲಹೆ ಸೂಚನೆಗಳನ್ನು ನೀಡಿದ್ದಲ್ಲದೇ ವಿವಾದಗಳನ್ನೂ ಬಗೆಹರಿಸಿದ್ದಾರೆ. ಹಿರೇಮದಕರಿ ನಾಯಕನ ಕಾಲದಲ್ಲಿ ಬಿಳಿಚೋಡು ಜೋಯಿಸರ ಸಂತತಿಗೆ ಸೇರಿದ ವಿರೂಪಾಕ್ಷ ಜೋಯಿಸರ ಸ್ವಾಸ್ತಿಗ್ರಾಮಗಳ ಹಕ್ಕಿನ ವ್ಯಾಜ್ಯ ಸಂಭವಿಸಿದಾಗ ಅದೇ ಸಂದರ್ಭದಲ್ಲಿ ಚಿತ್ರದುರ್ಗಕ್ಕೆ ಆಗಮಿಸಿದ್ದ ಶ್ರೀ ಮನ್ನಸಿಂಹ ಭಾರತೀಸ್ವಾಮಿಗಳು 1724 ರಲ್ಲಿ ಧರ್ಮಗುರುಗಳು ನ್ಯಾಯಾದೀಶರ ಪಾತ್ರವಹಿಸಿ ಬ್ರಾಹ್ಮಣರ ಸಮ್ಮುಖದಲ್ಲಿ ನ್ಯಾಯ ದಾನ ನೀಡಿದರೆಂದು ತಿಳಿಯುತ್ತದೆ.

**ಮಧ್ವಮಠ**

ಚಿತ್ರದುರ್ಗ ಪಾಳೆಯಗಾರರು ಶ್ರೀವೈಷ್ಣವ ಮತ್ತು ಶೈವ ಮಠಗಳಿಗೆ ಪ್ರಾಶಸ್ತ್ಯ ನೀಡಿದಂತೆ ಮಾಧ್ವ ಮಠಕ್ಕೂ ಆಕರ್ಷಿತರಾಗಿ ಅವರ ಕೃಪೆಗೆ ಒಳಗಾದವರು. ಭರಮಣ್ಣ ನಾಯಕನ ಕಾಲದಲ್ಲಿ ರಾಘವೇಂದ್ರ ಸ್ವಾಮಿಗಳ ನಂತರ 3ನೇ ಪೀಠಾಧಿಕಾರಿಗಳಾಗಿದ್ದ ಸುಮತೀಂದ್ರ ಸ್ವಾಮಿಗಳು ಕ್ರಿ.ಶ. 1700 ಮತ್ತು 1711 ರಲ್ಲಿ ಚಿತ್ರದುರ್ಗಕ್ಕೆ ಆಗಮಿಸಿದಾಗ ಭರಮಣ್ಣ ನಾಯಕನು ಬಿದರ ಕೆರೆ ಹೋಬಳಿಯಲ್ಲಿರುವ ದೇಮಲವನಹಳ್ಳಿಯನ್ನು ರಘುಪತಿ ದೇವರ ಪೂಜೆಯ ಸಲುವಾಗಿ ದಾನ ನೀಡಿದರು.

**ಶ್ರೀ ಜಗದ್ಗುರು ಮುರುಘಮಠ**

ಚಿತ್ರದುರ್ಗದ ಧಾರ್ಮಿಕ ಇತಿಹಾಸದಲ್ಲಿ ಶ್ರೀ ಜಗದ್ಗುರು ಮುರುಘಾಮಠ ಹಿರಿಯ ಮಠವಾಗಿದೆ. ಚಿತ್ರದುರ್ಗ ಪಾಳೆಯಗಾರರಿಗೂ ಮತ್ತು ಮುರುಘಾ ಮಠಕ್ಕೂ ಬಿಡಿಸಲಾರದ ನಂಟಿದೆ. ಗುರುಮನೆಯಿಂದ ಅರಮನೆಗೆ ಶತಮಾನಗಳಿಂದ ಅನ್ಯೂನ್ಯವಾದ ಸಂಬಂಧ ಹೊಂದಿದೆ. ಶ್ರೀ ಶಾಂತವೀರ ಮುರುಘ ರಾಜೇಂದ್ರ ಸ್ವಾಮಿಗಳು ಪಾಳೆಯಗಾರರ ರಾಜರ ಗುರುಗಳಾಗಿದ್ದರು, ಚಿತ್ರದುರ್ಗ ಪರಿಸರದಲ್ಲಿ ಮುರುಘ ರಾಜೇಂದ್ರರು ಬರುವ ಮೊದಲೇ ಕೆಲವು ಜಂಗಮರು ನೆಲೆಸಿದ್ದು, ಪಾಳೆಯಗಾರರು ಮತ್ತು ಆತನ ಪರಿವಾರವನ್ನು ವೀರಶೈವ ಮತಕ್ಕೆ ಪ್ರಭಾವಕ್ಕೊಳಗಾಗುವಂತೆ ಮಾಡಿದರು ಚಿಕ್ಕಣ್ಣನಾಯಕ ಚರಿತ್ರೆಯಿಂದ ತಿಳಿಯುತ್ತದೆ.

ಶ್ರೀಮುರಿಗೆ ಶಾಂತವೀರ ಸ್ವಾಮಿಗಳು ಧರಿಸಿದ್ದ ವಸ್ತುಗಳು ಮುರಿಗೆಯಾಗಿದ್ದರಿಂದ ಮತ್ತು ಶ್ರೀಗಳ ಕೈಯಲ್ಲಿ ಮುರಿಗೆಯ ಮುದ್ಗರವಿದ್ದುದರಿಂದ ಷಣ್ಮುಖ ಲಾಂಛನವಾಗಿದ್ದರಿಂದ ಮುರುಗೇಶ, ಮುರುಗ, ಮುರಿಗೆ ಮಠವೆಂಬ ನಾಮ ಮಠಕ್ಕೆ ಬಂದಿತು. ರಾಜೇಂದ್ರ ಎನ್ನುವ ಅಭಿದಾನ ಶ್ರೀ ಸ್ವಾಮಿಗಳಿಗೆ ಮತ್ತು ಮಠಕ್ಕೆ ಅಂಟಿಕೊಂಡೆ ಉಳಿಯಿತು. ಮುರುಘಾ ಮಠದ ಸ್ಥಾಪಕರಾದ ಇಮ್ಮಡಿ ಶ್ರೀಶಾಂತವೀರ ಮುರುಘ ರಾಜೇಂದ್ರ ಸ್ವಾಮಿಗಳು ಹುಟ್ಟಿ ಬೆಳದದ್ದು ಅಪ್ಪನಹಳ್ಳಿ, ಬಿಜ್ಜಾವರ, ಮಧುಗಿರಿ ಇತ್ಯಾದಿ ತಂದೆ ಚಿನ್ನವೀರದೇವ, ತಾಯಿ ಗಿರಿಜಾಂಬಿಕೆ, ಶಾಂತವೀರ ಸ್ವಾಮಿಗಳು ಶ್ರೀಕಟ್ಟಿಗೆಹಳ್ಳಿ ಸಿದ್ದಲಿಂಗ ಯತಿಗಳ ಶಿಷ್ಯರಾಗಿ ತಪೋ ಸಾಧನೆ ಮಾಡಿ ಕ್ರಿ.ಶ. 1640 ರಲ್ಲಿ ಹಿರಿಯ ಶ್ರೀಯವರಿಂದ ದೀಕ್ಷೆ ಪಡೆದು ದೇಶ ಸಂಚಾರ ಮಾಡಿದರು. ಚಿತ್ರದುರ್ಗ ಸಂಸ್ಥಾನದಲ್ಲಿ ರಾಜಕೀಯ ಅಸ್ಥಿರತೆ ಉಂಟಾದಾಗ ಭರಮಣ್ಣ ನಾಯಕನಿಗೆ ಶಾಂತವೀರ ಸ್ವಾಮಿಗಳು ರಾಜನಾಗೆಂದು ಹರಸಿದರು. ಅವರ ಪ್ರಸಾದದಿಂದ ಭರಮಣ್ಣ ನಾಯಕ ಕ್ರಿ.ಶ. 1611 ರಲ್ಲಿ ದೊರೆಯಾದನು. 90 ವರ್ಷ ವಯೋವೃದ್ಧರಾದ ಶಾಂತವೀರ ಸ್ವಾಮಿಗಳನ್ನು ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು 37 ಬಿರುದುಗಳನ್ನು ಕೊಟ್ಟು ತನ್ನ ರಾಜಗುರುಗಳನ್ನಾಗಿ ಸ್ವೀಕರಿಸಿದರು. ಬೆಟ್ಟದ ಮೇಲೆ 360 ಅಂಕಣಗಳ ಕಲ್ಲಿನಿಂದ ಕೂಡಿದ ಮಠವನ್ನು ಕಟ್ಟಿಸಿಕೊಟ್ಟು ತನ್ನ 7 ಜನ ಮಕ್ಕಳಲ್ಲಿ ಗಂಗಣ್ಣ ನಾಯಕನನ್ನು ಮಠದ ಸೇವೆಗಾಗಿ ನೇಮಿಸಿದನು. ಶ್ರೀಗಳು ಶಿವಸಮಾಧಿ ಆಗುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ ಭರಮಣ್ಣ ನಾಯಕನು ಚೇಳಗುಡ್ಡ ಪರಿಸರದಲ್ಲಿ ಕ್ರಿ.ಶ. 1700 ರಲ್ಲಿ ಶ್ರೀಗಳ ಶಿವಯೋಗ ಶಿವಯಾಗ ಸಮಾಧಿ ಸಲುವಾಗಿ ಬೃಹನ್ಮಠವನ್ನು ಕಟ್ಟಿಸಿದರು. ಶ್ರೀಗಳು ಶಿಷ್ಯನಾದ ಇಮ್ಮಡಿ ಮಹಾಗುರುಸಿದ್ದ ಪ್ರಭುಗಳಿಗೆ ಉತ್ತರಾಧಿಕಾರಿ ಮಾಡಿ 05–07–1703 ರಲ್ಲಿ ಜೀವಂತ ಸಮಾಧಿಯಾದರು ನಂತರ ಚಿತ್ರದುರ್ಗವನ್ನಾಳಿದ ಹಿರೇ ಮದಕರಿನಾಯಕನಿಂದ ರಾಜಾವೀರ ಮದಕರಿ ನಾಯಕವರೆಗೂ ಈ ಬೃಹನ್ಮಠದೊಂದಿಗೆ ಬಾಂಧವ್ಯ ಮುಂದುವರೆಯಿತು.

ಹಿರೇಮದಕರಿನಾಯಕನ ಕಾಲದಲ್ಲಿ ನಾಯಕನಿಗೂ ಮತ್ತು ಬೃಹನ್ಮಠ ಗುರುಗಳಾದ ಇಮ್ಮಡಿ ಗುರುಪಾದದೇಶಿಕರಿಗೆ ಕೊಗುಂಟೆ ಗ್ರಾಮದ ವೇಶ್ಯೆಯ ಸಲುವಾಗಿ ವಿವಾದ ಬಂದಾಗ ಗುರುಗಳು ಚಿತ್ರದುರ್ಗ ಮಠವನ್ನು ತೊರೆದು

ಗುಣಮಟ್ಟುಕಲ್ಲುನಲ್ಲಿ ಶಿವೈಕ್ಯರಾದರು. ಇಮ್ಮಡಿ ರಂಗಪ್ಪ ನಾಯಕ ಮರಣದ ನಂತರ ಆತನ ತಾಯಿ ಓಬವ್ವ ನಾಗತಿ ಒತ್ತಾಯಕ್ಕೆ ಮೂರುಸಾವಿರ ಗುರುಪಾದ ದೇಶಿಕರು ಬೃಹನ್ಮಠಕ್ಕೆ ಬಂದರು. ಆದರೆ ಕೊನೆಯ ಮದಕರಿ ನಾಯಕ ಗುರುಗಳೊಂದಿಗೆ ಉತ್ತಮ ಸಂಬಂಧ ಇಟ್ಟುಕೊಳ್ಳಲಿಲ್ಲ. ಏಕೆಂದರೆ ಚಿತ್ರುದುರ್ಗ ಪಾಳೆಯಗಾರರ ಶತೃಗಳಾದ ಹರಪ್ಪನಹಳ್ಳಿ ಕೆಳದಿ ಪಾಳೆಯಗಾರರು ಮುರುಘಾಮಠದ ಅಭಿಮಾನಿಗಳಾಗಿದ್ದರಿಂದ ಗುರುಮನೆ–ಅರಮನೆಗೆ ಸ್ವಲ್ಪ ಅಂತರ ಕಂಡುಬಂದರೂ, ಮುರುಘಶ್ರೀಗಳು ಚಿತ್ರದುರ್ಗ ಪಾಳೆಯಗಾರರಿಗೆ ಆಡಳಿತದಲ್ಲಿ ಸಲಹೆ ಸೂಚನೆ ನೀಡುವ ಧರ್ಮ ರಕ್ಷಕರಾಗಿದ್ದರು. ಮೂಲ ಮುರುಘ ಶಾಂತವೀರ ಸ್ವಾಮಿಗಳಿಂದ ಸ್ಥಾಪಿತವಾಗಿ ಇಂದಿನ ಶ್ರೀಶಿವಮೂರ್ತಿ ಮುರುಘರಾಜೇಂದ್ರರವರೆಗೆ ಸುಮಾರು 20 ಜನ ಸ್ವಾಮಿಗಳು ಈ ಮಠದ ಪೀಠಾಧಿಪತಿಗಳಾಗಿದ್ದಾರೆ ಇಂದಿಗೂ ಈ ಮನೆತನದ ವಂಶಸ್ಥರು ಮಠದೊಂದಿಗೆ ಉತ್ತಮ ಸಂಬಂಧ ಹೊಂದಿದ್ದಾರೆ.

ಚಿತ್ರದುರ್ಗ ಪಾಳೆಯಗಾರರು ವಿವಿಧ ಧರ್ಮ ಪೀಠಗಳಿಗೆ ಸಂಬಂಧಿಸಿದ ಆಚಾರ್ಯರು, ಗುರುಗಳು, ಜಂಗಮರು ಮೊದಲಾದವರಲ್ಲಿ ಸಮಾನ ಭಕ್ತಿ–ಗೌರವ ದೃಷ್ಟಿಯಿಂದ ನಡೆದುಕೊಂಡಿದ್ದಾರೆ. ಚಿತ್ರದುರ್ಗ ನಗರ ಹಾಗೂ ಜಿಲ್ಲೆಯ ಇತರ ಸ್ಥಳಗಳಲ್ಲಿ ಕಂಡುಬರುವ ಉಜ್ಜಯನಿಮಠ, ಐಯ್ಯಣ್ಣಮಠ, ಮುಪ್ಪಿನಮಠ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಮಠ, ಮೈಸೂರುಮಠ, ಕಾಟಿಮಠ, ಬೆಳಗಟ್ಟದಕಲ್ಲುಮಠ, ಪರಶುರಾಂಪುರಮಠ ಹೀಗೆ ಹಲವು ಮಠಗಳು ಪಾಳೆಯಗಾರರ ಆಡಳಿತ ಕಾಲದಲ್ಲಿ ಪೋಷಿಸಲ್ಪಟ್ಟಿರುತ್ತವೆ. ಅಂದಿನ ಮಠಗಳು ಇಂದಿಗೂ ಜೀವಂತವಾಗಿದ್ದು, ತ್ರಿವಿಧ ದಾಸೋಹಕ್ಕೆ ಮಹತ್ವ ಕೊಟ್ಟು ಅನೇಕ ಶಾಲಾ–ಕಾಲೇಜುಗಳನ್ನು ಸ್ಥಾಪನೆ ಮಾಡಿ ಸಮಾಜದಲ್ಲಿ ಶಿಕ್ಷಣ, ಆಶ್ರಯ, ಸೌಹಾರ್ದತೆ ಸಂಬಂಧ ಮೂಡಿಸುತ್ತಿವೆ. ಕಾಯಕದ ಬಗ್ಗೆ ಗೌರವ, ಉದ್ಯೋಗ, ತರಬೇತಿ ಕೇಂದ್ರಗಳ ಸ್ಥಾಪನೆ ಮಾಡಿ ಜನಸಾಮಾನ್ಯರ ಬದುಕಿಗೆ ದಾರಿದೀಪವಾಗಿವೆ.

**ಪರಾಮರ್ಶನ ಗ್ರಂಥಗಳು**


- ಚಂದ್ರಶೇಖರ ನಾರಾಣಪುರ. (2001). *ಕರ್ನಾಟಕ ವೀರಶೈವ ಮಠಗಳು.* ಗೀತಾ ಪ್ರಕಾಶನ.
- ಗಂಗಾನಾಯಕ್, ಕೆ.ಎನ್ (ಸಂ.) (2012). *ಪಾಳೆಯಗಾರರ ಶಾಸನಗಳು.* (ಸಂಪುಟ–1) ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.
- ಗಿರಿಜಾ, ಟಿ. (1991). *ಚಿತ್ರದುರ್ಗ ಜಿಲ್ಲಾ ದರ್ಶನ.* ರೇಖಾ ಪ್ರಕಾಶನ.
- ಲಕ್ಷ್ಮಣ ತೆಲಗಾವಿ. (2016). *ಚಿತ್ರದುರ್ಗಕ್ಕೆ ಬನ್ನಿ.* ವಾಲ್ಮೀಕಿ ಸಾಹಿತ್ಯ ಸಂಪದ.
- ಲಕ್ಷ್ಮಣ ತೆಲಗಾವಿ ಮತ್ತು ಶ್ರೀನಿವಾಸ, ಎಂ.ವಿ (ಸಂ.) (1976). *ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು.* ಗ್ರಂಥ ಪ್ರಕಟಣ ಸಮಿತಿ.
- ಪ್ರಸಾದ, ಜಿ.ಎಚ್. (2008). *ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ.* ವಾಲ್ಮೀಕಿ ಸಾಹಿತ್ಯ ಸಂಪದ.
- ಪುಟ್ಟಣ್ಣ, ಎಂ.ಎಸ್. (1924). *ಚಿತ್ರದುರ್ಗ ಪಾಳೆಯಗಾರರು.* ದಿ ಪವರ್ ಪ್ರಿಂಟಿಂಗ್ ಪ್ರೆಸ್.
- ರೈಸ್, ಬಿ.ಎಲ್. (1902). *ಎಪಿಗ್ರಾಫಿಯಾ ಕರ್ನಾಟಕ* (ಸಂಪುಟ–11). ಸೆಂಟ್ರಲ್ ಪ್ರೆಸ್, ಮೈಸೂರು ಗೌರ್ನಮೆಂಟ್.
- ಶ್ಯಾಮಲ, ಸಿ.ಆರ್. (2017). *ಪೂರ್ವ ಕರ್ನಾಟಕ ಪಾಳೆಯಗಾರರು.* ನವಕರ್ನಾಟಕ ಪ್ರಕಾಶನ.
- ಸುರೇಶ, ಬಿ. (2009). *ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ದೇವಾಲಯಗಳು.* ಸಂಶೋಧನಾ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 37-40
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಮೈಲಹಳ್ಳಿ ರೇವಣ್ಣ ಅವರ ಸಂಪಾದಿತ ಕೃತಿ ಜನಪದ ಕಾವ್ಯ ಗುಣಸಾಗರಿ ಪಾತ್ರ ಚಿತ್ರಣ

ಮಂಜು ಜೆ[1] ಮತ್ತು ಡಾ. ಕೆ. ಸೌಭಾಗ್ಯವತಿ[2]

[1] ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಯುವರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

[2] ಪ್ರಾಧ್ಯಾಪಕರು, ಕನ್ನಡ ವಿಭಾಗ, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**Abstract:**

*ಜಾನಪದದ ಅತ್ಯಂತ ಉತ್ಕೃಷ್ಟ ಭಾಗವೇ ಜನಪದ ಸಾಹಿತ್ಯ. ಬಹುಶಃ ಶಿಷ್ಟ ಸಾಹಿತ್ಯ ಅತ್ಯಂತ ಪ್ರಾಚೀನವೆನಿಸುವ ಜನಪದ ಸಾಹಿತ್ಯದ ಪ್ರಕಾರಗಳನ್ನು ಅವಲಂಬಿಸಿಯೇ ಬೆಳವಣಿಗೆಯನ್ನ ಸಾಧಿಸಿಕೊಂಡಿದ್ದರೆ ಅದರಲ್ಲಿ ಅಶ್ಚರ್ಯಪಡಬೇಕಾಗಿಲ್ಲ. "ಜನಪದ ಕಥೆ ಸಾಹಿತ್ಯದ ಸಣ್ಣಕಥೆಗೆ, ಜನಪದ ಲಾವಣಿ ಸಾಹಿತ್ಯದ ಕಥನಗೀತೆಗೆ, ಜನಪದ ಗೀತೆ ಸಾಹಿತ್ಯದ ಭಾವಗೀತೆಗೆ, ಜನಪದ ಕಾವ್ಯ ಸಾಹಿತ್ಯಕ ಕಾವ್ಯಗಳಿಗೆ ಪ್ರೇರಣೆಯನ್ನು ನೀಡಿರಬಹುದು" ಪ್ರಸ್ತುತ ಮೈಲಹಳ್ಳಿ ರೇವಣ್ಣ ಅವರು ಸಂಗ್ರಹಿಸಿರುವ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು' ಕೃತಿಯಲ್ಲಿರುವ ಕಾವ್ಯಗಳೆಲ್ಲಾ ಸ್ತ್ರೀಯರೆ ಹಾಡಿರುವಂತಹವು ಅದರಲ್ಲೂ ಮುಖ್ಯವಾಗಿ 'ಮಾದಿಗ' ಸಮುದಾಯದವರು ಹಾಡಿರುವಂತಹವು ಎಂದು ತಿಳಿಸುತ್ತಾರೆ. ಇಲ್ಲಿ ಸಂಗ್ರಹಿಸಿರುವಂತಹವು ಚಿತ್ರದುರ್ಗದ ಸುತ್ತಮುತ್ತ ಜನಪ್ರಿಯವಾಗಿರುವಂತಹವು ಅದರಲ್ಲಿ ಗುಣಸಾಗರಿ ಕಾವ್ಯವು ಒಂದು.*

**Keywords:** *ಮೈಲಹಳ್ಳಿ ರೇವಣ್ಣ, ಜಾನಪದ, ಜನಪದ ಕಾವ್ಯ, ಗುಣಸಾಗರಿ, ಮಾದಿಗ ಸಮುದಾಯ.*

**ಪೀಠಿಕೆ**

ಕಾಳಿಂಗರಾಯ ಕಾವ್ಯದಷ್ಟೇ ಸುದೀರ್ಘವಾದದ್ದು ಮತ್ತು ಸ್ತ್ರೀಯರಿಗೆ ಬಹುಮೆಚ್ಚಿನ ಕಥಾನಕವೆನಿಸುವ ಮತ್ತೊಂದು ಜನಪದ ಕಾವ್ಯ ಗುಣಸಾಗರಿ. ಗುಣಸಾಗರಿ ಜನಪದರ ಬದುಕಿನಲ್ಲಿ ಆದರ್ಶ ಸೀತೆಯಷ್ಟೇ ಪಾತಿವ್ರತ್ಯವನ್ನು ಕಾಪಾಡಿಕೊಂಡು ಹಳ್ಳಿಗರ ಹೃದಯದಲ್ಲಿ ಸ್ಥಿರವಾಗಿ ಉಳಿದುಕೊಂಡು ಬಂದಿದ್ದಾಳೆ. ಹಿರಿಯರ ಅನುಮತಿ ಇಲ್ಲದೆ ಆಕಸ್ಮಿಕವಾಗಿ ನಡೆದ ಒಂದು ಘಟನೆಯಿಂದ ಜೀವನ ಪರ್ಯಂತ ಕತ್ತಲ ಬದುಕನ್ನು ಅನುಭವಿಸಿದ ಮುಗ್ಧ ಹೆಣ್ಣಿನ ಕತೆಯೇ ಕಾವ್ಯದ ವಸ್ತು. ಮೈನೆರೆಯುವ ಪೂರ್ವದಲ್ಲಿ ಗುಣಸಾಗರಿಯನ್ನು ಸಂಪನ್ನ ಮದುವೆಯಾಗಿ ಮುತ್ತು ತರಲು ಗೆಳೆಯರ ಜೊತೆಯಲ್ಲಿ ಘಟ್ಟಕ್ಕೆ ಹೋಗುವುದು, ಗೀಜುಗ ಪಕ್ಷಿಗಳಿಂದ ಹೆಂಡತಿ ಮೈನೆರೆದ ವಿಷಯ ತಿಳಿದು ರಾತ್ರೋರಾತ್ರಿ ಒಂದು ಸಂತೋಷದ ರಾತ್ರಿಯನ್ನು ಕಳೆಯುವುದು, ಗುಣಸಾಗರಿ ಬಸುರಿಯಾದದ್ದು ಇಲ್ಲಕ್ಕ, ಮಲ್ಲಕ್ಕ ಎಂಬ ನಾದುನಿಯರಿಂದ ಮೈದುನ ನಿರುವಾಳನಿಗೆ ಈ ವಿಷಯ ತಿಳಿದು ಗುಣಸಾಗರಿ ಕಾಡು ಸೇರುವುದು ಮುದ್ದಣ್ಣನ ಆಶ್ರಯ ಪಡೆದು 'ಸಿರಿದಾರ'ನೆಂಬ ಮಗುವಿಗೆ ತಾಯಿಯಾಗಿ ಮತ್ತು ಗಂಡನನ್ನು ಕೂಡುವುದು ಈ ಕಾವ್ಯದ ಮುಖ್ಯ ಅಂಶಗಳು.

***Please cite this article as:*** ಮಂಜು, ಜೆ & ಕೆ. ಸೌಭಾಗ್ಯವತಿ. (2024). ಮೈಲಹಳ್ಳಿ ರೇವಣ್ಣ ಅವರ ಸಂಪಾದಿತ ಕೃತಿ ಜನಪದ ಕಾವ್ಯ ಗುಣಸಾಗರಿ ಪಾತ್ರ ಚಿತ್ರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 37–40

ಜನಪದ ಬದುಕಿನ ವಾಸ್ತವಿಕ ಹಿನ್ನೆಲೆಯಲ್ಲಿ ಹೆಣೆದುಕೊಂಡು ಬಂದಿರುವ ಈ ಕಾವ್ಯದಲ್ಲಿ ಸಾಮಾಜಿಕ, ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಗಮನಿಸಬಹುದಾಗಿದೆ. ಕಾವ್ಯದ ಮೊದಲಿಗೆ ಜನಪದರು ತಮ್ಮ ಆರಾಧ್ಯ ದೇವತೆ ಭೂಮಿಯನ್ನು ನೆನೆದು ನಂತರ ಬಾಗೂರು ಬೆನಕ, ಸರಸ್ವತಿ, ದುರುಗಮ್ಮ ಮತ್ತು ಮರಿಯಮ್ಮರನ್ನು ಸ್ಮರಿಸಿ ಅವರ ಬೆಂಬಲದಿಂದ ಈ ಕಥೆಯನ್ನು ನಡೆಸುವುದಾಗಿ ಗಾಯಕಿ ಹೇಳುತ್ತಾರೆ.

ಕಾವ್ಯದ ಮೊದಲ ಭಾಗದಲ್ಲಿ ಸಂಪನ್ನನಿಗೆ ಹೆಣ್ಣು ತರಬೇಕೆಂದು ತಾಯಿ ಮಲ್ಲಿಗೆ ದೇವಿ ತನ್ನ ಅಣ್ಣನ ಮನೆಗೆ ಹೋಗುವುದು, ವಧುವಿಗೆ ಕೊಡಬೇಕಾದ ತೆರವನ್ನು ಗುಣಸಾಗರಿಯ ತಂದೆ ತಾಯಿ ಕೇಳುವುದು ಇತ್ಯಾದಿ ಸಂದರ್ಭಗಳು ಈ ಭಾಗದಲ್ಲಿ ಬರುತ್ತದೆ. ಗಂಡು–ಹೆಣ್ಣಿನ ಕಡೆಯವರು ಧಾರೆ ಹುಯ್ಯುವ ಚಿತ್ರವನ್ನು ಕೊಡುವುದರ ಮೂಲಕ ಬಾಲ್ಯ ವಿವಾಹ ಪದ್ಧತಿಯನ್ನು ತಿಳಿಸಿರುವ ಅಂಶ ಈ ಪದ್ಯದಲ್ಲಿ ಕಾಣುತ್ತದೆ.

***"ಆರು ವರ್ಸುದ ಗಂಡಿಗೆ ಮೂರು ವರ್ಸುದ ಹೆಣ್ಣಿಗೆ***
***ತಾಯಿ ತಂದೆ ತನ್ನ ಅರ್ತಿಂದ***
***ತಾಯಿ ತಂದೆ ತನ್ನ ಅರ್ತಿಂದ ಗುಣಸಾಗ್ರಳ***
***ಮೋವಕೆ ಧಾರಿ ಯ್ಯರುದಾರ"*** [1]

ಮದುವೆಯಾದ ಮರು ದಿನವೇ ಸತೀ ಗುಣಸಾಗರಿಗೆ ಪ್ರತ್ಯೇಕ ಮನೆಯನ್ನು ಸಂಪನ್ನ ಕಟ್ಟಿಸುತ್ತಾನೆ. ಗೆಳೆಯರೊಡಗೂಡಿ ವ್ಯಾಪಾರಕ್ಕೆ ಘಟ್ಟಕ್ಕೆ ಹೋಗಲು ತೀರ್ಮಾನಿಸಿ ತನ್ನ ತಂದೆ ತಾಯಿಗೆ ಗುಣಸಾಗರಿಯನ್ನು ಚೆನ್ನಾಗಿ ನೋಡಿಕೊಳ್ಳುವಂತೆ ಜವಾಬ್ದಾರಿಯನ್ನು ಹೊರಿಸಿ, ಹಾಗೆಯೇ ತಮ್ಮ ಮತ್ತು ತಂಗಿಯರ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕೆಂದು ವ್ಯಾಪಾರಕ್ಕೆ ಹೊರಡುವ ಮುನ್ನ ತಂದೆ ತಾಯಿಗೆ ತಿಳಿಸುತ್ತಾನೆ. ತಂಗಿಯರೀರ್ವರ ಬುದ್ಧಿಯನ್ನು ಮತ್ತು ತಮ್ಮ ನಿರುವಾಳನ ವ್ಯಕ್ತಿತ್ವವನ್ನು ಕುರಿತು ಹೇಳುವ ಈ ಸಾಲುಗಳು ಮುಂದೆ ಗುಣಸಾಗರಿ ಅನುಭವಿಸುವ ಕಷ್ಟಗಳನ್ನು ತಿಳಿಸುವ ಆಶಯ ಹೀಗೆ ವ್ಯಕ್ತವಾಗಿದೆ.

***"ಇಲ್ಲಕ್ಕ ಒಳ್ಳೆಯವಳಲ್ಲ ಮಲ್ಲಕ್ಕ ಒಳ್ಳೆಯವಳಲ್ಲ***
***ತಮ್ಮ ನಿರುವಾಳ ಒಳ್ಳೆಯವನಲ್ಲ***
***ತಮ್ಮನೇ ನಿರುವಾಳ ಒಳ್ಳೆಯವನಲ್ಲ। ನನ್ನಮ್ಮ***
***ನಮ್ಮಂತೆ ನೋಡಿ ಸಲುಹಮ್ಮ"*** [2]

ಒಳ್ಳೆಯವರ ಬದುಕು ಕ್ಷುಲ್ಲಕ ವ್ಯಕ್ತಿಗಳಿಂದ ದುರಂತಕ್ಕೆ ಒಳಗಾಗುವುದು ಜನಪದರ ಜೀವನದಲ್ಲಿ ಸಾಮಾನ್ಯವಾಗಿ ಬರುವುದುಂಟು. ಅಂತಹ ಒಂದು ವಾಸ್ತವ ಚಿತ್ರವನ್ನು ಇಲ್ಲಿ ತಂದಿರುವುದು ಔಚಿತ್ಯದಿಂದ ಕೂಡಿದೆ.

ಮುತ್ತಿನಂಥ ಗುಣಸಾಗರಿಯನ್ನು ಬಿಟ್ಟು ಮುತ್ತು ತರಲು ಘಟ್ಟಕ್ಕೆ ಹೋಗುವುದಾಗಿ ತಿಳಿಸುವ ಸಂಪನ್ನನನ್ನು ತಾಯಿ ಮಲ್ಲಿಗೆ ದೇವಿ ಹೋಗಲು ಒಪ್ಪುವುದಿಲ್ಲ. ಮಗನಿಗೆ ತಿಳಿ ಹೇಳುವ ಸಂದರ್ಭ, ಕೊನೆಗೂ ಸಂಪನ್ನ ಹೊರಡಲು ಸಿದ್ಧತೆಗಳನ್ನು ಮಾಡಿಕೊಳ್ಳುವ ಚಿತ್ರಣ ಹೊಸ್ತಿಲಲ್ಲಿ ಹಲ್ಲಿ ನುಡಿಯುವುದು ಇತ್ಯಾದಿ ಘಟನೆಗಳು ಈ ಕಾವ್ಯದಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿವೆ. ಸಂಪನ್ನ ಘಟ್ಟಕ್ಕೆ ಹೋದ ದಿನವೇ ಗುಣಸಾಗರಿ ಮೈನೆರೆಯುತ್ತಾಳೆ. ಮೈನೆರೆಯುವ ಸಂದರ್ಭವಂತು ಅರ್ಥವಂತಿಕೆಯಿಂದ ಕೂಡಿದ್ದು ಕವಯತ್ರಿಯು ಚಿತ್ರಿಸಿರುವ ಸನ್ನಿವೇಶ ಧ್ವನಿಪೂರ್ಣವಾಗಿದೆ.

***"ವಾವುರಿಗೆಗೆ ಹಾಕ್ಯಾಳೆ ಆರು ಕಾಲೇಣಿಯ***
***ವಾವುರಿಗೆ ಒಳಗೆ ಇಳುದಾಳೆ***
***ವಾವುರಿಗೆ ಒಳಗೆ ಇಳುದಾಳೆ ನನ್ನಮ್ಮ***
***ಸಾದೀನ ಸೀರ್‍ಯಾಗೆ ನಿಜಗೆಂಪು"*** [3]

---

[1] ಮೈಲಹಳ್ಳಿ ರೇವಣ್ಣ. *ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು.* ಪು.95

[2] ಮೈಲಹಳ್ಳಿ ರೇವಣ್ಣ. *ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು.* ಪು.102–103

[3] ಮೈಲಹಳ್ಳಿ ರೇವಣ್ಣ. *ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು.* ಪು.107

ಗುಣಸಾಗರಿ ಮೈ ನೆರೆದ ಸುದ್ದಿ ಮಲ್ಲಿಗೆ ದೇವಿಗೆ ತಿಳಿದು ಭವಿಷ್ಯವನ್ನು ತಿಳಿಯಲು ಜ್ಯೋತಿಷ್ಯಗಾರರನ್ನು ಕರೆಸುತ್ತಾಳೆ. 'ಹೇಳಿ ಬರುದಾನೆ ವಿಧಿವಾಸ' ಎಂದು ಜ್ಯೋತಿಷ್ಯ ಹೇಳುತ್ತಾನೆ. ಜನಪದರ ಈ ಆಶಯಗಳು ಮುಂದಿನ ಕಥಾಭಾಗದಲ್ಲಿ ಎಷ್ಟರಮಟ್ಟಿಗೆ ಪೂರಕವಾಗಿ ಬರುತ್ತವೆ ಎಂಬುದನ್ನು ಕಾವ್ಯದುದ್ದಕ್ಕೂ ಚಿತ್ರಿಸಿರುವುದನ್ನು ಕಾಣಬಹುದು. ಗೀಜುಗ ಪಕ್ಷಿಗಳನ್ನು ಕುರಿತು ಹಾಡುವ ಸಂದರ್ಭದಲ್ಲಿ ಮಾನವ ಬದುಕನ್ನು ಪ್ರಾಣಿ ಪಕ್ಷಿಗಳೊಡನೆ ಪರೋಕ್ಷವಾಗಿ ಸಮೀಕರಿಸಿಕೊಂಡು ಗುಣಸಾಗರಿ ಮತ್ತು ಸಂಪನ್ನರ ಕಥೆಯನ್ನು ಪಕ್ಷಿಗಳಿಂದ ಹೇಳಿಸುವುದು ತುಂಬಾ ಸ್ವಾರಸ್ಯಕರವಾದುದು. ಗೀಜುಗ ಪಕ್ಷಿಗಳಿಂದ ಗುಣಸಾಗರಿ ಮೈ ನೆರೆದ ವಿಷಯ ತಿಳಿದ ಸಂಪನ್ನ ಸರಿರಾತ್ರಿಯಲ್ಲೇ ಪಟ್ಟಣಕ್ಕೆ ಹಿಂದಿರುಗಿ ಬರುತ್ತಾನೆ. ಹೆಂಡತಿಯೊಡನೆ ಸಂತೋಷದ ರಾತ್ರಿಯನ್ನು ಕಳೆಯುತ್ತಾನೆ. ಸಂಪನ್ನನ ಕ್ಷಣಿಕ ಸುಖಕ್ಕೆ ತುತ್ತಾದ ಗುಣಸಾಗರಿಯ ಬದುಕಿನ ದಿನಗಳಲ್ಲಿ ಕತ್ತಲು ಆವರಿಸುತ್ತದೆ. ಈ ಸಂದರ್ಭದಲ್ಲಿ ಸಂಪನ್ನನಿಗೆ ಅರಿವಾಗುವಂತೆ ಪ್ರಾಣಿಗಳ ಮೂಲಕ ಜಾತಿಯನ್ನು ಕುರಿತು ಆಡಿಸುವ ಪದ ಪ್ರಯೋಗಗಳು ಸಾಹಿತ್ಯಾಂಶಗಳಿಂದ ಕೂಡಿದ್ದು, ಕಾವ್ಯ ಮಹತ್ವಪೂರ್ಣವೆನಿಸಲು ಸಹಕಾರಿಯಾಗಿದೆ.

ಗುಣಸಾಗರಿ ಗರ್ಭಿಣಿಯಾದ ವಿಷಯ ಇಲ್ಲಕ್ಕ ಮಲ್ಲಕ್ಕರಿಗೆ ತಿಳಿಯುತ್ತದೆ. ಅವರಿಬ್ಬರ ಕುಟಿಲತನದಿಂದಲೇ ಮುಂದೆ ಈ ವಿಷಯ ಮೈದುನ ನಿರವಾಳನಿಗೆ ತಿಳಿಯುತ್ತದೆ. ಗುಣಸಾಗರಿಯನ್ನು ಕಡಿಸಲು ಏಳುಜನ ಕೊಲೆಗಡುಕರನ್ನು ಜೊತೆಮಾಡಿ ಅಡವಿಗಟ್ಟುತ್ತಾನೆ. ಕಡಿಯಲು ಹೋದ ಕೊಲೆಗಡುಕರು ತಮ್ಮ ಕತ್ತಿಗಳಿಗೆ ತಾವೇ ಬಲಿಯಾಗುತ್ತಾರೆ. ಗುಣಸಾಗರಿಯಿಂದಲೇ ಜೀವನವನ್ನು ಪಡೆದುಕೊಂಡು ಕೊಲೆಗಾರರು ಪಟ್ಟಣಕ್ಕೆ ಬರುತ್ತಾರೆ. ಕ್ರೂರ ಪ್ರಾಣಿಗಳೇ ಗುಣಸಾಗರಿಗೆ ಆರೈಕೆ ಮಾಡುತ್ತವೆ. ಒಂಟಿಯಾಗಿದ್ದ ಗುಣಸಾಗರಿಗೆ ಮುದ್ದಣ್ಣನಿಂದ ಆಶ್ರಯ ದೊರೆಯುತ್ತದೆ. ನಿನ್ನ ಈ ಕಷ್ಟಕ್ಕೆ ಕಾರಣರಾರು ಎಂಬ ಪ್ರಶ್ನೆಗೆ ಗುಣಸಾಗರಿ ಕೊಡುವ ಉತ್ತರ ತುಂಬಾ ಅರ್ಥಪೂರ್ಣವಾಗಿದ್ದು ಒಂದು ಗಿಡದ ಗುಣ ವಿಶೇಷತೆಯನ್ನು ಆ ಗಿಡದ ಕ್ರಿಯೆಗೆ ವ್ಯಕ್ತಿಗಳ ಹೋಲಿಕೆಯ ದೃಷ್ಟಾಂತವನ್ನು ಕೆಳಗಿನ ಸಾಲುಗಳಲ್ಲಿ ಅಭಿವ್ಯಕ್ತ ಪಡಿಸಿದ್ದಾಳೆ.

***"ಅತ್ತೇನು ಅಂಬ್ಲಿಲ್ಲ ಮಾವೇನು ಅಂಬ್ಲಿಲ್ಲ***
***ನಸುಗುನ್ನಿಯಂತೋರು ನಾದಿನಿಯೋರು"***

ಗುಣಸಾಗರಿ ನಾದಿನಿರಾದ ಇಲ್ಲಕ್ಕ, ಮಲ್ಲಕ್ಕ ನಸುಗಿನ್ನಿ ಕಾಯಿಯಂತೆ ಇನ್ನೊಬ್ಬರ ಬದುಕಿಗೆ ಕಷ್ಟವನ್ನು ತಂದೊಡ್ಡುವಂತವರು. ಈ ಗಿಡದ ವಿಶೇಷತೆಯನ್ನು ತಿಳಿದ ಜನಪದರು ಇಲ್ಲಕ್ಕ, ಮಲ್ಲಕ್ಕರ ಸ್ವಭಾವವನ್ನು ಸಹಜವಾಗಿಯೇ ಚಿತ್ರಿಸಿದ್ದಾರೆ. ಮುದ್ದಣ್ಣನ ಮನೆಯಲ್ಲಿ 'ಸಿರಿದಾರ' ಎಂಬ ಮಗುವಿಗೆ ಗುಣಸಾಗರಿ ತಾಯಿ ಆಗುತ್ತಾಳೆ. ಸಿರಿದಾರನ ವಿದ್ಯಾಭ್ಯಾಸವನ್ನು ಮುದ್ದಣ ಜವಾಬ್ದಾರಿಯಿಂದ ನಿರ್ವಹಿಸುತ್ತಾನೆ. ಊರಿನ ದೊರೆ ಭೂಪ ಒಡ್ಡಿದ ಬಲೆಗಳನ್ನು ಸಿರಿದಾರ ಜಯಿಸಿ ತಾಯಿಗೆ ಒಪ್ಪಿಗೆಯಾದ ಹೊಳೆ ಸುಂಕದ ಅಧಿಕಾರವನ್ನು ಪಡೆಯುತ್ತಾನೆ. ಈ ಸಂದರ್ಭದ ಕಾವ್ಯವು ದೀರ್ಘವಾಗಿ ಸಾಗುತ್ತದೆಯಾದರು 'ಸಿರಿದಾರ' ವಿದ್ಯೆ ಕಲಿಯುವುದು 'ಭೂಪದೊರೆ' ಹಾಕುವ ಸವಾಲು ಇತ್ಯಾದಿ ಸ್ವಲ್ಪದರಲ್ಲೆ ಮುಗಿಯುತ್ತದೆ. ಮುತ್ತು ರತ್ನಗಳನ್ನು ಹೇರಿಕೊಂಡು ಬಂದ ಸಂಪನ್ನನನ್ನು ಹೊಳೆ ಹತ್ತಿರ ಸಿರಿದಾರ ತಡೆಯುವುದು, ಸಂಪನ್ನ ತನ್ನ ಪಟ್ಟಣಕ್ಕೆ ಹೋಗಿ ಸತಿಯ ವಿಷಯ ತಿಳಿಯುವುದು ಏಳು ಜನ ಭಾವ ಮೈದುನರೊಡನೆ ಹಿಂದಿರುಗಿ ಹೊಳೆ ಹತ್ತಿರಕ್ಕೆ ಬರುವುದು ಮುಂತಾದ ಘಟನೆಗಳು ಸಿನಿಮಿಯವಾಗಿ ಬಂದರು ಕತೆಗೆ ಎಲ್ಲಿಯು ದಕ್ಕೆ ಬಂದಿರುವುದು ಕಂಡುಬರುವುದಿಲ್ಲ. ಗುಣಸಾಗರಿ ಸತ್ಯವನ್ನು ಅರಿತ ಏಳುಜನ ಸಹೋದರರು ಮತ್ತು ಪತಿ ಕಣ್ಣೀರು ಹಾಕುತ್ತಾರೆ. ಗಂಡನ ಪಾದ ತೊಳೆಯುವಾಗ ಗುಣಸಾಗರಿ ಹಣೇಲಿಂದ ಉಂಗುರ ಪಾದದ ಮೇಲೆ

ಬೀಳುತ್ತದೆ. ಇಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ. ತಾಯಿ ಕಷ್ಟಕ್ಕೆ ಕಾರಣರಾದ ಇಲ್ಲಕ್ಕ, ಮಲ್ಲಕ್ಕರನ್ನು ಹಾಗೂ ನಿರುವಾಳನನ್ನು ಸಿರಿದಾರ ಕತ್ತಿಯಿಂದ ಇರಿದು ಸಾಯಿಸುತ್ತಾನೆಂದು ಹಾಡುಗಾರ್ತಿ ಒಬಳಮ್ಮ ವಚನರೂಪದಲ್ಲಿ ಹಾಡಿರುವುದು ಕಂಡುಬರುತ್ತದೆ.

**ಉಪಸಂಹಾರ**

ಈ ಕಾವ್ಯವು ಕೇಳುಗರ ಹೃದಯ ಮಿಡಿಯುವ, ಕಣ್ಣಲ್ಲಿ ನೀರು ಬರಿಸುತ್ತಾ ಕುತೂಹಲಕಾರಿಯಾಗಿ ಮುಂದುವರೆದು ಅಂತ್ಯದಲ್ಲಿ ಬೇಗ ಮುಗಿದು ಬಿಡುತ್ತದೆ. ಕಾವ್ಯದಲ್ಲಿ ಅಲ್ಲಲ್ಲಿ ಬರುವ ಪಲ್ಲವಿ ರಾಗದ ಮಟ್ಟುಗಳಿಂದಾಗಿ ಅಸ್ಪಷ್ಟತೆಯನ್ನು ತೋರಗೊಡದೆ ಮುಕ್ತಾಯವನ್ನು ತಲುಪುತ್ತದೆ. ಜನಪದ ಬದುಕಿನ ವಾಸ್ತವಿಕ ಹಿನ್ನೆಲೆಯಲ್ಲಿ ಹೆಣೆದುಕೊಂಡು ಬಂದಿರುವ ಈ ಕಾವ್ಯದಲ್ಲಿ ಸಾಮಾಜಿಕ ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಗಮನಿಸಬಹುದಾಗಿದೆ. ಒಳ್ಳೆಯವರ ಬದುಕು ಕ್ಷುಲ್ಲಕ ವ್ಯಕ್ತಿಗಳಿಂದ ದುರಂತಕ್ಕೆ ಒಳಗಾಗುವುದು ಜನಪದರ ಜೀವನದಲ್ಲಿ ಸಾಮಾನ್ಯವಾಗಿ ಬರುವುದುಂಟು. ಅಂತಹ ಒಂದು ವಾಸ್ತವ ಚಿತ್ರವನ್ನು ಈ ಕಾವ್ಯದಲ್ಲಿ ತಂದಿರುವುದು ಔಚಿತ್ಯದಿಂದ ಕೂಡಿದೆ.

**ಪರಾಮರ್ಶನ ಗ್ರಂಥಗಳು**


- ಕಾಳೇಗೌಡ ನಾಗವಾರ ಮತ್ತು ಅಂಬಳಿಕೆ ಹಿರಿಯಣ್ಣ (ಸಂ.). (2000). *ಜೀಶಂಪ ಅವರ ಜಾನಪದ ಬರಹಗಳು.* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.
- ಮೈಲಹಳ್ಳಿ ರೇವಣ್ಣ. (1984). *ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು.* ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.
- ರಾಜಪ್ಪ ದಳವಾಯಿ. (2018). *ಕನ್ನಡ ಸಾಹಿತ್ಯ ಕೋಶ.* ಎಚ್‌ಬಿಟಿ ಪಬ್ಲಿಕೇಷನ್,
- ರಾಜೇಗೌಡ, ಹ.ಕ. (ಪ್ರ.ಸಂ.). (2022). *ಕಾಲುದಾರಿಯ ಮೈಲುಗಲ್ಲು.* ರಾಜ್ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 41-45
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕ್ಯಾತನಹಳ್ಳಿ ರಾಮಣ್ಣ ಅವರ 'ಗೊಂದಲಿಗರು : ಒಂದು ಅಧ್ಯಯನ' ಕೃತಿಯಲ್ಲಿ ವೃತ್ತಿಗಾಯಕರ ಬದುಕಿನ ಅನಾವರಣ

**ಡಾ. ಧನಂಜಯ ಪಾಲಹಳ್ಳಿ**
ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ವಿಭಾಗ, ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು, ಮೈಸೂರು.

**Abstract:**
*ಕ್ಯಾತನಹಳ್ಳಿ ರಾಮಣ್ಣನವರ "ಗೊಂದಲಿಗರು : ಒಂದು ಅಧ್ಯಯನ" ಒಂದು ಸಮರ್ಥವಾದ ಜಾನಪದ ಸಂಶೋಧನೆಯ ಕೃತಿ. ಈ ಕೃತಿಯಲ್ಲಿ ಲೇಖಕರು ಉತ್ತರ ಕರ್ನಾಟಕದ ಭಾಗದಲ್ಲಿ ಕಂಡುಬರುವ ವೃತ್ತಿಗಾಯಕರ ಪರಂಪರೆಗೆ ಸೇರುವ ಗೊಂದಲಿಗರ ಬದುಕು ಹಾಗೂ ಸಂಸ್ಕೃತಿಗಳನ್ನು ಕುರಿತ ವಿವರಿಸಿದ್ದಾರೆ. ಕರ್ನಾಟಕದ ವೃತ್ತಿಗಾಯಕರಲ್ಲಿ ಹೆಳವರು, ತೆಲುಗು ಜಂಗಮರು, ದೊಂಬಿದಾಸರು, ಗೊಂದಲಿಗರು ಪ್ರಮುಖರು. ಇವರ ಮಾತೃಭಾಷೆ ಬೇರೆಯಾದರೂ ಇವರು ಹಾಡುವ ಕಾವ್ಯಗಳು ಕನ್ನಡದಲ್ಲಿರುತ್ತವೆ. ಕನ್ನಡಿಗರಿಗಾಗಿ ಇವರು ಕಾವ್ಯಗಳನ್ನು ಕಟ್ಟಿ ಹಾಡುತ್ತಾರೆ. ಹೆಳವರು, ತೆಲುಗು ಜಂಗಮರು, ದೊಂಬಿದಾಸರು ತೆಲುಗು ಮೂಲಕ್ಕೆ ಸೇರಿದ್ದರೆ ಗೊಂದಲಿಗರು ಮರಾಠಿ ಮೂಲದವರಾಗಿದ್ದಾರೆ.*

**Keywords:** *ಜಾನಪದ ಸಾಹಿತ್ಯ, ಸಂಶೋಧನೆ, ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು, ವೃತ್ತಿಗಾಯಕರು.*

**ಪೀಠಿಕೆ**

ದಕ್ಷಿಣ ಕರ್ನಾಟಕದಲ್ಲಿ ಕಂಡುಬರುವ ನೀಲಗಾರರು, ಕಂಸಾಳೆಯವರು, ಹೆಳವರು, ದೊಂಬಿದಾಸರಂತೆ ಉತ್ತರ ಕರ್ನಾಟಕದಲ್ಲಿಯೂ ವೃತ್ತಿ ಗಾಯಕರಿದ್ದಾರೆ. 'ಭೂತೇರು' ಮತ್ತು 'ಬಾಳಸಂತೋಷರ'ನ್ನು ಜಾನಪದ ಜಗತ್ತಿಗೆ ಮೊದಲು ಪರಿಚಯಿಸಿದ ಕೀರ್ತಿ ಕ್ಯಾತನಹಳ್ಳಿ ರಾಮಣ್ಣನವರದು. ಈ ಸಂಶೋಧನೆಯ ಬರವಣಿಗೆಯಲ್ಲಿ ಅತಿರಂಜಿತ ಅಭಿಪ್ರಾಯಗಳಿಲ್ಲ. ವಿಷಯದ ವಾಸ್ತವ ದೃಷ್ಟಿಯನ್ನಷ್ಟೆ ನೋಡುತ್ತೇವೆ. ಸಂಶೋಧಕನಿಗೆ ವಸ್ತುನಿಷ್ಠತೆಯೊಂದೆ ಗುಣ: ಉಳಿದುದೆಲ್ಲ ಗೌಣ. ಕ್ಯಾತನಹಳ್ಳಿ ರಾಮಣ್ಣ ಅವರ ಸಂಶೋಧನಾ ಬರವಣಿಗೆಯಲ್ಲಿ ಈ ಗುಣವಿದೆ. ಸಂಯಮವಿದೆ: ಮಾಹಿತಿ ಜ್ಞಾನದ ಪುಳಕಗಳಿವೆ. ಈ ಕೃತಿಯು ಗೊಂದಲಿಗರ ಬಗ್ಗೆ ನಡೆದಿರುವ ಮೊಟ್ಟ ಮೊದಲ ಅಧ್ಯಯನವಾಗಿದೆ. ಈ ಕೃತಿಗೆ 1982 ರಲ್ಲಿ ಕರ್ನಾಟಕ ಜಾನಪದ ಹಾಗೂ ಯಕ್ಷಗಾನ ಅಕಾಡೆಮಿಯ ಪ್ರಶಸ್ತಿಯೂ ದೊರೆತಿದೆ.

ಗೊಂದಲಿಗರು ನೂರಾರು ವರ್ಷಗಳ ಹಿಂದೆ ಇವರು ಬೇರೆ ಬೇರೆ ಕಾರಣಕ್ಕಾಗಿ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ. ಇವರು ಗೂಢಾಚಾರರಾಗಿ ಇಲ್ಲಿಗೆ ಬಂದವರು ಎಂಬುದು ಪ್ರತೀತಿ. ಅಂಭಾ ಭವಾನಿಯ ಸಂಪ್ರದಾಯಕ್ಕೆ ಸೇರಿದ ಈ ಪರಂಪರೆಯವರು ಧಾರ್ಮಿಕ ವೃತ್ತಿಗಾಯಕರು. ಏಕೆಂದರೆ ಇವರು ತಮ್ಮ ಆರಾಧ್ಯದೈವದ ಕಾವ್ಯವನ್ನು ಹಾಡುವುದರ ಜೊತೆಗೆ ದೇವಿಯ ಆರಾಧನೆಯಲ್ಲಿ

***Please cite this article as:*** ಧನಂಜಯ ಪಾಲಹಳ್ಳಿ. (2024). ಕ್ಯಾತನಹಳ್ಳಿ ರಾಮಣ್ಣ ಅವರ 'ಗೊಂದಲಿಗರು: ಒಂದು ಅಧ್ಯಯನ' ಕೃತಿಯಲ್ಲಿ ವೃತ್ತಿಗಾಯಕರ ಬದುಕಿನ ಅನಾವರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(2), 41–45

ಗೊಂದಲವನ್ನು ಹಾಕುತ್ತಾರೆ. ಗೊಂದಲಿಗರ ಮೇಳದಲ್ಲಿ ಕುಣಿತವೂ ಒಂದು ಅವಿಭಾಜ್ಯ ಅಂಗ. ಇದರಿಂದಾಗಿ ಗೊಂದಲಿಗರ ಮೇಳಕ್ಕೆ ವಿಶೇಷ ಕಳೆ ಬಂದಿದೆ.

**ಗೊಂದಲಿಗರ ಮೂಲ**

ಮೂಲತಃ ಮರಾಠಿ ಮೂಲದವರಾದ ಇವರು ಕರ್ನಾಟಕಕ್ಕೆ ಬಂದು ಇಲ್ಲಿಯೇ ತಮ್ಮ ಬದುಕನ್ನು ಸಂಸ್ಕೃತಿಯನ್ನು ನೆಲೆಗೊಳಿಸಿ ಕನ್ನಡ ಜಾನಪದ ಲೋಕಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಅಂಭಾ ಭವಾನಿಯ ಭಕ್ತರಾದ ಇವರು 'ಗೊಂದಲ' ಹಾಕುತ್ತಲೇ ತಮ್ಮ ಭಕ್ತಿಯನ್ನು ನಿವೇಧನೆಗೊಳಿಸುತ್ತಾರೆ. ಕರ್ನಾಟಕದ ವೃತ್ತಿಗಾಯಕರ ಗುಂಪಿನಲ್ಲಿ ತಮ್ಮದೆ ಆದ ಸ್ಥಾನವನ್ನು ಕಾಯ್ದಿರಿಸಿದ್ದಾರೆ. ತಮ್ಮ ಮೂಲ ವೃತ್ತಿಯಲ್ಲಿ ತಮ್ಮ ಜೀವನವನ್ನು ಸಾಗಿಸಲಾಗದ ದುಸ್ಥಿತಿಗೆ ಬಂದಾಗ ಅನಿವಾರ್ಯವಾಗಿ ಇತರೆ ಉಪವೃತ್ತಿಗಳನ್ನು ಅಪ್ಪಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಒಂದು ಶ್ರೀಮಂತ ವೃತ್ತಗಾಯಕರ ಬಗೆಗೆ ಬಂದಂತಹ ಕೃತಿ 'ಕ್ಯಾತನಹಳ್ಳಿ ರಾಮಣ್ಣನವರ 'ಗೊಂದಲಿಗರು : ಒಂದು ಅಧ್ಯಯನ' ಕೃತಿ.

ಈ ಕೃತಿಯಲ್ಲಿ ಗೊಂದಲಿಗರ ಮೂಲ, ಜೀವನಕ್ರಮ, ಸಂಸ್ಕೃತಿ, ಅವರ ವೃತ್ತಿಯಾದ 'ಗೊಂದಲ' ಹಾಕುವಿಕೆ, ಸಾಹಿತ್ಯ ಹಾಗೂ ಗೊಂದಲಿಗರ ಸಾಹಿತ್ಯವು ಒಳಗೊಂಡಿರುವ ಆಶಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಗೊಂದಲಿಗರ ಬಗ್ಗೆ ಪ್ರಸ್ಥಾಪಿಸುವಾಗ ಸಂಶೋಧಕರು ಗಟ್ಟಿ ಮಾತೊಂದನ್ನು ಹೇಳುತ್ತಾರೆ. ಗೊಂದಲಿಗರು ಕನ್ನಡದ ಸ್ವತ್ತೆಂದು ಎಷ್ಟೇ ಬಗೆಯಲ್ಲಿ ಚರ್ಚೆ ನಡೆಸಿದರೂ, ಅವರು ಅಪ್ಪಟ ಮರಾಠಿಗರೆಂಬ ಸತ್ಯವನ್ನು ಮಾತ್ರ ಮುಚ್ಚಿಡುವುದು ಸಾಧುವೆನಿಸಲಾರದು ಎಂಬುದು ಅಧ್ಯಯನದ ಬಲದ ಗಟ್ಟಿಮಾತು. ಗೊಂದಲಿಗರ ಜೀವನ ವಿವರಣೆಗಳು, ಸಂಸ್ಕೃತಿ, ಗೊಂದಲಿಗರ ಸಾಹಿತ್ಯ ವಿವೇಚನೆ ಇವುಗಳ ಜೊತೆಗೆ ಸಮಕಾಲೀನ ಇತಿಹಾಸ ವಿವೇಚನೆಯಿಂದ ಇವರ ಮರಾಠಿ ಮೂಲವನ್ನು ಸಮರ್ಥಿಸುವ ಸಾಕಷ್ಟು ವಿವರಗಳು ದೊರೆಯುತ್ತವೆ.

ಗೊಂದಲಿಗರ ಜಾತಿಯ ವಿಚಾರವನ್ನು ನೋಡುವುದಾದರೆ ಯಾವ ಜಾತಿಯವರಾದರೂ ದೀಕ್ಷೆ ಪಡೆದು ಗೊಂದಲಿಗರಾಗುವ ಅವಕಾಶ ವೃತ್ತಿಗಾಯಕರಲ್ಲಿ ಕಂಡುಬರುತ್ತದೆ. ಗೊಂದಲಿಗ ಎನ್ನುವುದು ವೃತ್ತಿಸೂಚಕ. ಜಾತಿ ಸೂಚಕವಲ್ಲ. ತಮ್ಮ ಮೂಲ ಜಾತಿ ಯಾವುದೇ ಆಗಿರಲಿ ಕೆಲವು ವಿಶಿಷ್ಟ ಆಚರಣೆಗಳ ಮೂಲಕ ದೀಕ್ಷಿತರಾಗಿ ಗೊಂದಲಿಗರಾಗಿ ಬಿಡುವ ಸುಲಭ ವಿಧಾನ ಇವರಲ್ಲಿದ್ದುದರಿಂದ ಗೊಂದಲಿಗೆ ಸಂತತಿ ವಿಸ್ತಾರವಾಗತೊಡಗುತ್ತದೆ. ಹೀಗೆ ದೀಕ್ಷೆ ಕೈಗೊಳ್ಳುವಲ್ಲಿ ಪ್ರೇರಕವಾಗುವ ಎರಡು ಅಂಶಗಳನ್ನು ಕ್ಯಾತನಹಳ್ಳಿ ರಾಮಣ್ಣ ಅವರು ಗುರುತಿಸಿದ್ದಾರೆ. ಒಂದು ವೃತ್ತಿಯ ಜನಪ್ರಿಯತೆಯಾದರೆ, ಇನ್ನೊಂದು ಸುಲಭ ಜೀವನೋಪಾಯಕ್ಕೆ ದಾರಿ. ಗೊಂದಲ ಹಾಕುವ ಪದ್ಧತಿ ನಾಡಿನ ಜನರಿಗೆ ಒದಗಿಸುವ ಮನರಂಜನೆ ಒಂದಡೆಯಾದರೆ ಅಂಬಾ ಭವಾನಿಯ ಭಕ್ತಿಯ ಮಹಿಮೆ ಇನ್ನೊಂದೆಡೆಯಾಗಿ, ಸಮಕಾಲೀನ ಜನರನ್ನು ಆಕರ್ಷಿಸಿತು. ಇಹ ಬದುಕಿದ ಜಂಜಾಟಗಳನ್ನು ದೇವಿಯ ದ್ಯಾನದಲ್ಲಿ ಶಮನಗೊಳಿಸಿಕೊಂಡು ಗೊಂದಲ ಹಾಕುವ ಈ ಪದ್ಧತಿ ಜನರನ್ನು ಸೆಳೆದುದರಲ್ಲಿ ಆಶ್ಚರ್ಯವಿಲ್ಲ. ಈ ರೀತಿಯ ಮನರಂಜನೆಯ ಜೊತೆಗೆ ಗೊಂದಲ ಹಾಕುವವರು ನೀಡುತ್ತಿದ್ದ ಧಾನ ಧರ್ಮಗಳಿಂದ ಉದರ ಪೋಷಣೆಯೂ ನಡೆದು ಹೋಗುತ್ತಿತ್ತು. ಅಲ್ಲದೆ ರಾಜಕೀಯ ಕಾರಣಗಳಿಂದಲೂ ಈ ಕಸುಬಿಗೆ ಮನ್ನಣೆ ದೊರೆತಿದ್ದು ಇವರ ವೃತ್ತಿ ಬೆಳವಣಿಗೆ ಹೊಂದುವಲ್ಲಿ ಸಹಕಾರಿಯಾಯಿತು. ಮರಾಠರ ಛತ್ರಪತಿ ಶಿವಾಜಿಯು ಗೂಢಾಚಾರಕ್ಕೆ ಗೊಂದಲಿಗರನ್ನು ಬಳಸಿಕೊಂಡು ಹೆಚ್ಚಿನ ಭೂಮಿಯನ್ನು ದತ್ತಿ ನೀಡುತ್ತಿದ್ದರಿಂದ, ಸಹಜವಾಗಿ ಈ ವೃತ್ತಿಗೆ ಬೇಡಿಕೆ ಸಹಜವಾಗಿ ಸೃಷ್ಟಿಯಾಗಿದೆ.

ಮರಾಠರು ತಮ್ಮ ರಾಜ್ಯದ ಬಲವರ್ಧನೆಗಾಗಿ ಇವರನ್ನು ನಂಬಿಕಸ್ಥ ಗೂಢಾಚಾರರನ್ನಾಗಿ ಬಳಸಿಕೊಂಡಿರುವುದನ್ನು ಲೇಖಕರು ಕಂಡುಕೊಂಡಿದ್ದಾರೆ. ಅಂಭಾಭವಾನಿಯ ನೆಚ್ಚಿನ ಭಕ್ತರಾದ ಇವರನ್ನು ದೇಶಭಕ್ತಿಯ ಚೌಕಟ್ಟಿನೊಳಗೆ ಬಂದಿಸಿ ಮರಾಠಾರಾಜರು ತಮ್ಮ ಸಮಕಾಲೀನ ರಾಜ್ಯಗಳ ಬಗೆಗೆ ಮಾಹಿತಿ ಸಂಗ್ರಹಿಸುತ್ತಿದ್ದರು. ತಾವು ಮಾಡುವ ಕೆಲಸ ಅಪಾಯಕಾರಿ ಎಂದು ಗೊತ್ತಿದ್ದರೂ ತಮ್ಮ ನಂಬಿದವರಿಗಾಗಿ ಪ್ರಾಣಾಪಾಯವನ್ನು ಲೆಕ್ಕಿಸದೆ ಊರೂರು ಅಲೆಯುತ್ತ ಗೊಂದಲ ಹಾಕುತ್ತಾ ತಮ್ಮ ಗುಪ್ತ ಉದ್ದೇಶ ಈಡೇರಿಸಿಕೊಳ್ಳುತ್ತಿದ್ದರು. ಗೊಂದಲ ಹಾಕುವ ನೆಪದಲ್ಲಿ ಇವರು ಮುಸಲರ ರಾಜ್ಯದಲ್ಲಿ ಸಂಗ್ರಹಿಸುತ್ತಿದ್ದ ಸುದ್ದಿಗಳನ್ನು ಮರಾಠಿಯಲ್ಲಿ ಕಥೆಯಾಗಿ ಹಾಡುತ್ತಿದ್ದರು. ಭಿಕ್ಷಾಟನೆಯ ನೆಪದಲ್ಲಿ ಗೊಂದಲಿಗರು ಮನೆಯ ಮುಂದೆ ನಿಂತು ಹಾಡ ತೊಡಗಿದರೆಂದರೆ ಆ ಮನೆಯ ಒಳಗಿದ್ದವರೆಲ್ಲರಿಗೂ ಗುಪ್ತ ಸುದ್ದಿಗಳು ತಿಳಿದು ಹೋಗುತ್ತಲಿದ್ದವು.

ಗೊಂದಲಿಗರ ಉಡುಗೆ ತೊಡುಗೆ, ಹುಟ್ಟು, ಮಕರ ಹಾಕುವುದು, ಮದುವೆ, ಆಹಾರ ಪದ್ಧತಿ, ಸಾಮಾಜಿಕ ಸ್ಥಾನಮಾನ, ನ್ಯಾಯ ವ್ಯವಸ್ಥೆ, ಹಬ್ಬಗಳ ಆಚರಣೆ, ಸಾವು, ವಾದ್ಯಗಳು ಮುಂತಾದ ವಿವರಗಳನ್ನು ಕೃತಿಯಲ್ಲಿ ಕಾಣಬಹುದಾಗಿದೆ. ಗೊಂದಲ ಹಾಕುವಿಕೆಯೇ ಗೊಂದಲಿಗರ ಬದುಕಿನ ಮುಖ್ಯ ಸಾಧನ. ಗೊಂದಲದ ಕಾರ್ಯಕ್ರಮದಲ್ಲಿ ಉತ್ತಮ, ಮಧ್ಯಮ ಮತ್ತು ಕನಿಷ್ಟ ಎಂಬ ಮೂರು ಮುಖ್ಯ ಪ್ರಭೇದಗಳಿವೆ, ಗೊಂದಲಿಗರು ದೇವಿ ಭವಾನಿಯ ಹೆಸರಿನಲ್ಲಿ ಭಿಕ್ಷೆ ಬೇಡುವುದು ಉಂಟು ಮತ್ತು ಧಾರ್ಮಿಕ ಐತಿಹಾಸಿಕ ಹಾಗೂ ಪ್ರೇಮವನ್ನು ವಸ್ತುವಾಗುಳ್ಳ ಹಾಡುಗಳನ್ನು ಹಾಡುವುದುಂಟು. ಮರಾಠರು, ಶಿಂಪಿಗಳು, ಸೋನಾರ್‌ಗಳು ಉಪನಯನ ಹಾಗೂ ಮದುವೆಗಳ ಕಾರ್ಯಕ್ರಮಗಳಲ್ಲಿ ಗೊಂದಲವನ್ನು ಏರ್ಪಡಿಸುವುದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಗೊಂದಲಿಗರ ಸಂಸ್ಕೃತಿಯ ಆಚರಣೆಯಲ್ಲಿ ಕಂಡುಬರುವ ವಿಶೇಷವೆಂದರೆ, ಇವರು ಹಿಂದೂ ಧರ್ಮಕ್ಕೆ ಸೇರಿದ್ದರೂ ಮೊಹರಂಗಳಂತಹ ಅನ್ಯ ಧರ್ಮಿಯರ ಹಬ್ಬಗಳನ್ನು ಒಳಗೊಂಡಂತೆ ಹೋಳಿ, ದಸರಾ, ದುರ್ಗವ್ವನ ಹಬ್ಬಗಳನ್ನು ಅದ್ದೂರಿಯಾಗಿ ಆಚರಿಸುವುದು ಕಂಡುಬರುತ್ತದೆ.

**ಗೊಂದಲ, ಸಾಹಿತ್ಯ, ಆಶಯ**

ಬಹುತೇಕ ವೃತ್ತಿಗಾಯಕರು ತಮ್ಮ ವೃತ್ತಿಗೂ ಅವರ ಜೀವನಕ್ರಮಕ್ಕೂ ಸಾಮ್ಯತೆಯನ್ನು ಪ್ರದರ್ಶಿಸುತ್ತಾರೆ. ಇದಕ್ಕೆ ಗೊಂದಲಿಗರು ಸಹ ಹೊರತಲ್ಲ. ಗೊಂದಲಿಗರ 'ಗೊಂದಲ'ದಲ್ಲಿ ತಮ್ಮ ಅಧಿದೇವತೆಯಾದ ಅಂಬಾ ಭವಾನಿಯನ್ನು ಮುನ್ನೆಲೆಯಾಗಿಟ್ಟುಕೊಂಡು ತಾವು ನೋಡಿದ. ಕೇಳಿದ ವ್ಯಕ್ತಿ ಅಥವಾ ಘಟನೆಗಳನ್ನು ತಮ್ಮ ಕಥೆಗಳಲ್ಲಿ ಬಳಸಿಕೊಳ್ಳುವುದನ್ನು ನೋಡಬಹುದು. 'ಸಂಭಾಳ' ಹೊಂದಿರುವ ಮುಖ್ಯ ಗಾಯಕನಿಗೆ ನೆರವಾಗಲು ಇಬ್ಬರು ವ್ಯಕ್ತಿಗಳು ಇರುತ್ತಾರೆ. ಒಬ್ಬ 'ಚೌಡಿಕೆ' ಹಿಡಿದರೆ ಮತ್ತೊಬ್ಬ 'ಪತ್ತ' ಹಿಡಿಯುತ್ತಾನೆ. ಎಲ್ಲ ಕಥೆಗಳ ಪ್ರಾರಂಭದಂತೆ ಇವರ ಕಥೆಯೂ ಸಾಮಾನ್ಯವಾಗಿ ಗಣಪತಿಯ ಸ್ತೋತ್ರದಿಂದ ಪ್ರಾರಂಭವಾಗುತ್ತದೆ. ದೇವರ ಸ್ತುತಿ ನಂತರ ಅಂಬಾಭವಾನಿಯ ಕಡೆಗೆ ತಿರುಗುತ್ತದೆ. ಸಾವಕಾಶವಾಗಿ ಮುಖ್ಯ ಕಥೆಯು ಬಿಚ್ಚಿಕೊಳ್ಳುತ್ತದೆ.

***ಬಾರವ್ವ ಜಗದಂಬಿ***

***ಭಕ್ತರ ಭಾವಕ ನೆಂಬ***

ಎಂದು ಅಲೌಕಿಕ ಪ್ರಜ್ಞೆಯನ್ನು ಲೇಖಕರು ನಿರೂಪಿಸಿದರೂ ತಕ್ಷಣ

***ಭಾರವ್ವ ಜಗದಂಬಿ***

***ರಂಗಗೊಂದುಳದಲ್ಲಿ***

***ಚೌಂಡಕಿ ಸ್ವರದಲ್ಲಿ***

***ತಾಳ ಸಂಬಾಳದಲ್ಲಿ***

***ಬಾರವ್ವ ಜಗದಂಬಿ***

ಎಂಬ ಸಾಲುಗಳನ್ನು ಉಲ್ಲೇಖಿಸಿ ಗೊಂದಲಿಗರ ವಾಸ್ತವ ಪ್ರಜ್ಞೆಯನ್ನು ನಿರೂಪಿಸಿದ್ದಾರೆ. ಗೊಂದಲಿಗರ ಸಾಹಿತ್ಯ ವಿವೇಚನೆಗೆ ಬಂದರೆ, ಇವರ ಸಾಹಿತ್ಯ ಕಥೆಯೋ, ಕಾವ್ಯವೋ ಎಂಬ ಜಿಜ್ಞಾಸೆಯನ್ನು ಲೇಖಕರು ಎತ್ತಿಕೊಳ್ಳುತ್ತಾರೆ. ಎಲ್ಲಾ ಜನಪದ ಸಾಹಿತ್ಯದಲ್ಲಿ ಕಂಡುಬರುವಂತೆ ಇವರ ಸಾಹಿತ್ಯವೂ ಸಮಾನಾಂಶಗಳನ್ನು ಹೊಂದಿದೆ. ಆದರೂ ಸಂಶೋಧಕರು ಇವರ ಕಥೆಗಳಲ್ಲಿ ಎರಡು ಪ್ರಮುಖ ಅಂಶಗಳನ್ನು ಗುರುತಿಸುತ್ತಾರೆ. ಒಂದು ಕನ್ನಡದ ಇತರ ಜನಪದ ಕಥೆಗಳಿಗೆ ಹೋಲಿಸಿದರೆ ಇವರ ಕಥೆಗಳು ಧೀರ್ಘವಾಗಿರುತ್ತವೆ. ಎರಡು ಗೊಂದಲಿಗರ ಕಥೆಗಳು ಬಹುಪಾಲು ಸಂಕೀರ್ಣ ಜನಪದ ಕಥೆಗಳ ವ್ಯಾಪ್ತಿಗೆ ಒಳಪಡುತ್ತವೆ.

ಮುಂದುವರಿದು ಸಂಶೋಧಕರಾದ ಕ್ಯಾತನಹಳ್ಳಿ ರಾಮಣ್ಣ ಅವರು ಇವರ ಕಥೆಗಳಲ್ಲಿ ಇತರ ಜಾನಪದ ಕಥೆಗಳಂತೆಯೇ ಕೆಲವು ಸಾಮರ್ಥ್ಯಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ

1. ಕಥೆಗಳಲ್ಲಿ ಸೂತ್ರಬದ್ಧ ಆರಂಭ ಮತ್ತು ಸೂತ್ರಬದ್ಧ ಮುಕ್ತಾಯ ಇರುತ್ತದೆ.
2. ಕೇಳುಗನ ಊಹೆಗೆ ಈ ಕಥೆಗಳು ಏನನ್ನೂ ಬಿಡುವುದಿಲ್ಲ.
3. ಪ್ರಾರಂಭದಿಂದ ಮುಕ್ತಾಯದವರೆಗೆ ಸಾವಕಾಶವಾಗಿ ಸಾಗುತ್ತವೆ.
4. ಸಾಮಾನ್ಯ ಸಮಸ್ಯೆಗಳುಳ್ಳ ಕಥೆಗಳು ಉದಾಃ ಅರಸನಿಗೆ ಅಷ್ಟೈಶ್ವರ್ಯವಿದ್ದರೂ ಮಕ್ಕಳಿಲ್ಲದಿರುವುದು.
5. ಕಥೆಗಾರ ಕತೆ ಮುನ್ನಡೆಸುವಾಗ ಪೂರಕವಾಗಿ ಸಹಾಯಕ 'ಹೂಂ' ಗುಡಬೇಕು.
6. ಇತರ ಕಥೆಗಳಂತೆ ಇವರ ಕಥೆಗಳಲ್ಲಿಯೂ ಮಾತನಾಡುವ ಪ್ರಾಣಿ ಪಕ್ಷಿಗಳು, ಮಾಂತ್ರಿಕ ವಸ್ತುಗಳು ಕಂಡುಬರುತ್ತವೆ.

ಗೊಂದಲಿಗರ ಜಾನಪದ ಸೃಷ್ಟಿಗೆ ಸಂಬಂಧಿಸಿದಂತೆ ಚರ್ಚಿಸುತ್ತಾ, ಸಂಶೋಧಕರು ಇದೇ ಜಾನಪದ ಸಾಹಿತ್ಯವನ್ನು ಒಂದು ಮೌಲಿಕ ಚೌಕಟ್ಟಿಗೆ ಒಳಪಡಿಸಿದ್ದಾರೆ. ಅದನ್ನು ಅವರ ಮಾತುಗಳಲ್ಲಿಯೇ ನಿರೂಪಿಸುವುದು ಸಮಂಜಸ.

'ಬೀಜದಂತೆ ವೃಕ್ಷ, ತಿಂಡಿಯಂತೆ ಲದಿ', ಇತ್ಯಾದಿ ಮಾತುಗಳು ಇತರ ಯಾವ ಸಂದರ್ಭಗಳಿಗಿಂತಲೂ ಜನಪದ ಸಾಹಿತ್ಯದ ಸಂದರ್ಭದಲ್ಲಿ ಹೆಚ್ಚು ಚೆನ್ನಾಗಿ ಅನ್ವಯಿಸುತ್ತವೆ. ಜನಪದರ ಬಾಯಿಂದ ಸ್ವರ್ಗ 'ಮರ್ತ್ಯ' ಪಾತಾಳಗಳೇ ಹೊರಬಂದರೂ ಅವೆಲ್ಲ ಅವರು ಬದುಕುವ ಪರಿಸರದ ಪ್ರತಿರೂಪಗಳೇ ಆಗಿರುತ್ತವೆ. ಅವರು ಕಂಡದ್ದನ್ನ ಚಿತ್ರಿಸುವ ಮಂದಿ, ಕಾಣದ್ದರಲ್ಲೂ, ಕಂಡದ್ದನ್ನೇ ತೋರಿಸುವ ಸಹಜ ಚಮತ್ಕಾರ, ಸಾಧ್ಯಸಾಧ್ಯತೆಗಳ ಪ್ರಶ್ನೆ ಅವರಲ್ಲಿ ಗೌಣವಾಗುತ್ತದೆ, ಗೌಣವಾಗಲೇಬೇಕು. ಸೂಕ್ತ ಉತ್ತರವಿಲ್ಲದ ಪ್ರಶ್ನೆ ತನ್ನತನವನ್ನು ಕಳೆದುಕೊಂಡು ತನ್ನಷ್ಟಕ್ಕೆ ತಾನೇ ನಶಿಸಿ ಹೋಗುವುದು ಒಂದು ಸಹಜ ಕ್ರಿಯೆ. ಜನಪದ ಪರಿಸರದ ಸಂದರ್ಭದಲ್ಲಿಯೂ ಹಾಗಾಗುವುದು ಸೋಜಿಗದ ಮಾತಲ್ಲ. ಅಂದ ಮಾತ್ರಕ್ಕೆ ಜನಪದ ಬದುಕಾಗಲಿ, ಆ ಬದುಕನ್ನು ಆಶ್ರಯಿಸಿದ ಮನಸ್ಸುಗಳಾಗಲಿ, ಆ ಮನಸ್ಸಿನ ಸೃಷ್ಟಿಕ್ರಿಯೆಗಳಾದ ಸಾಹಿತ್ಯವಾಗಲಿ, ಹೊರತಾಗಿ ಉಳಿಯುತ್ತವೆ ಎಂದರ್ಥವಲ್ಲ. ಅಸಂಭಾವ್ಯದಲ್ಲೂ ಅತ್ಯಂತ ಸಂಭಾವ್ಯವನ್ನು ಮೆರೆಯುವುದು ಜನಪದ ಶ್ರೀಮಂತಿಕೆಗೆ ಏನಿದೆ ಅಥವಾ ಏನಿಲ್ಲ ಎಂಬ ಸತ್ಯವನ್ನು ಕಂಡುಕೊಳ್ಳುವ ಪ್ರಾಮಾಣಿಕ ಕಣ್ಣುಗಳ ಅಗತ್ಯವನ್ನು ಜನಪದ ಪರಿಸರ ನಿರೀಕ್ಷಿಸುತ್ತದೆ

ಗೊಂದಲಿಗರ ಪ್ರಕಟಿತ ಸಾಹಿತ್ಯದಲ್ಲಿ ಕಂಡುಬರುವ ಸುಮಾರು 282 ಆಶಯಗಳನ್ನು ಪ್ರಸ್ತುತ ಅಧ್ಯಯನದ ಕೃತಿಯಲ್ಲಿ ಪಟ್ಟಿ ಮಾಡಿಕೊಟ್ಟಿದ್ದಾರೆ. ಎಷ್ಟೋ ಆಶಯಗಳು ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ಪುನರಾವರ್ತನೆ ಆಗುತ್ತವೆ. ಒಮ್ಮೊಮ್ಮೆ ಅಲ್ಪಸ್ವಲ್ಪ ವ್ಯತ್ಯಾಸದೊಡನೆಯೂ ಕಾಣಿಸಿಕೊಳ್ಳುತ್ತವೆ.

ಗೊಂದಲಿಗರು 'ರೇಣುಕಾ ಮಹಾತ್ಮೆ'ಯನ್ನು, ಎಲ್ಲಮ್ಮನ ಪವಾಡಗಳನ್ನು ಕುರಿತ ಕಥೆಗಳನ್ನು

ಹೇಳುವುದರ ಜೊತೆಗೆ ಸತಿ ಸುಲೋಚನೆ, ಅಡವಿ ಕುಮಾರ, ಬಾಳಾವತಿ, ನಳನಿ, ರಾಜಾಷೇಕಸೇನ', 'ಬಾಳಭಿಕ್ಷುಕರಾಜ, ಜಯರಾಣಿ, ಪದ್ಮಾವತಿ, ರಾಜಾಭೋಜ್, ಶೇವಸುಂದರಿ ಮದನಮೋಹಿತ, ಖಂಡೋಜಿಪಿಂಜಾರು, ಚಂದ್ರಹಂಸ, ಸರಾವಣಲಾಲಾ–ಸೇಸ್, ರತ್ನಟೆಂಗಿನಕಾಯಿ, ಶೀಲಾವತಿ, ತ್ರಿಪುರ ಸುಲ್ತಾನ, ಭಟ್ಟ ವಿಕ್ರಮರಾಜ, ಹರಿಶ್ಚಂದ್ರ, ಬಸವಕುಮಾರ, ಲವಿತ್ ಕುಮಾರ, ಸೋಮಶೇಖರ ಚಿತ್ರಶೇಖರ, ರಾಜಹಂಸ ಪರಮಹಂಸ, ಕಾಂಬೋಜಿ ಶಿರಿದೇವಿ, ರಸ್ತಾಳರಾಜ, ವಜ್ರ ಮುಕುಟ ಮಹಾರಾಜ ಇತ್ಯಾದಿ ಕಥೆಗಳನ್ನು ಹೇಳುತ್ತಾರೆ. ಒಟ್ಟಾರೆ ಕೃತಿಯಲ್ಲಿ ಲೇಖಕರ ದೃಷ್ಟಿ ಗೊಂದಲಿಗರ ಕಥೆಗಳ ಸ್ಥೂಲ ವಿಮರ್ಶೆಗೆ ತೊಡಗುತ್ತದೆ. ಅಡವಿ ಕುಮಾರ, ಸತಿ ಸುಲೋಚನೆ, ಗೋವಿನ ಹಾಡು ಮುಂತಾದ ಹಲವು ಕಥೆಗಳ ತಿರುಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚುತ್ತಾರೆ.

**ಆಕರ ಗ್ರಂಥ**


- ಕ್ಯಾತನಹಳ್ಳಿ ರಾಮಣ್ಣ. (1982). *ಗೊಂದಲಿಗರು: ಒಂದು ಅಧ್ಯಯನ.* ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.


**ಪರಾಮರ್ಶನ ಗ್ರಂಥಗಳು**


- ಗಂಗಾಧರ ದೈವಜ್ಞ, (2010). *ಗೊಂದಲಿಗರು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಸಣ್ಣಕ್ಕಿ, ಎನ್.ಎನ್. (1982). ಕರ್ನಾಟಕದ ಗೊಂದಲಿಗರು ಹಾಗೂ ಅವರ ಸಾಹಿತ್ಯ. (ಪಿ.ಎಚ್‌ಡಿ ಮಹಾಪ್ರಬಂಧ). ಕರ್ನಾಟಕ ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 46-57
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕರ್ನಾಟಕ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಉಲ್ಲಾಸದಾಯಕ ಕಲಿಕಾ ಬೋಧನೆ: ನಲಿ-ಕಲಿ ಕಾರ್ಯಕ್ರಮದ ಅಧ್ಯಯನ

**ಡಾ. ಸೌಮ್ಯ ಕೆ. ಬಿ**

ಉಪನ್ಯಾಸಕರು, ಪತ್ರಿಕೋದ್ಯಮ ವಿಭಾಗ, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು

***Abstract:***

*ಭಾರತದಲ್ಲಿ 6-14 ವರ್ಷದ ಮಕ್ಕಳಿಗೆ ಶಿಕ್ಷಣವನ್ನು ಕಡ್ಡಾಯ ಮಾಡಲಾಗಿದೆ. ದೇಶದಲ್ಲಿ ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆ, ಕಡ್ಡಾಯ ಶಿಕ್ಷಣ ನೀಡುವ ನಿಟ್ಟಿನಲ್ಲಿ ಸರ್ಕಾರ ಇಂತಹ ಕ್ರಮಗಳನ್ನು ತೆಗೆದುಕೊಂಡಿದೆ. ಇದಕ್ಕೆ ಪೂರಕ ಎಂಬಂತೆ ಪ್ರಾಥಮಿಕ ಹಂತದಲ್ಲೇ ಮಕ್ಕಳಿಗೆ ಕಲಿಕೆ ಎಂಬುದು ಎಂದಿಗೂ ಉಲ್ಲಾಸದಾಯಕವಾಗಿರಬೇಕೇ ಹೊರತು ಹೊರೆಯಾಗಿ ಪರಿಣಮಿಸಬಾರದು ಎಂಬ ಕಾರಣಕ್ಕಾಗಿ ಉಲ್ಲಾಸದಾಯಕ ಕಲಿಕೆ ಹಾಗೂ ಚಟುವಟಿಕೆ ಆಧಾರಿತ ಕಲಿಕೆ ಎಂಬ ಬೋಧನಾ ವಿಧಾನವನ್ನು ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಪರಿಚಯಿಸಲಾಗಿದೆ. ಸಾಂಪ್ರದಾಯಿಕ ಕಲಿಕೆಗೆ ಅಂದರೆ ಸೀಮೆಸುಣ್ಣ ಮತ್ತು ಕಪ್ಪು ಹಲಗೆ ಮೇಲೆ ಬರೆದು ಪಾಠ ಮಾಡುವ ಬೋಧನಾ ಕ್ರಮಕ್ಕೆ ಪರ್ಯಾಯವಾಗಿ ಚಟುವಟಿಕೆಗಳನ್ನು ಮಾಡುವ ಮೂಲಕ ಮಕ್ಕಳ ಕಲಿಕಾ ಮಟ್ಟವನ್ನು ಉನ್ನತೀಕರಿಸುವುದೇ ಆಗಿದೆ. ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ನಿರಂತರ ಹಾಗೂ ವ್ಯಾಪಕವಾಗಿ ಮೌಲ್ಯಮಾಪನ ಪದ್ಧತಿಯನ್ನು ಪರಿಚಯಿಸಲಾಗಿದೆ. ಅಂದರೆ, ವಿದ್ಯಾರ್ಥಿಯನ್ನು ಕೇವಲ ಪಠ್ಯ, ಪಾಠ ಮತ್ತು ಪರೀಕ್ಷೆಗಳಿಂದ ಮಾತ್ರವೇ ಮೌಲ್ಯ ಮಾಪನ ಮಾಡದೇ ಪಠ್ಯೇತರ ಚಟುವಟಿಕೆಗಳಿಗೂ ಒತ್ತು ನೀಡಿ, ಒಟ್ಟಾರೆ ಫಲಿತಾಂಶವನ್ನು ಮೌಲ್ಯಮಾಪನ ಮಾಡುವುದೇ ಆಗಿದೆ. ಈ ಸಂಶೋಧನಾ ಲೇಖನದಲ್ಲಿ ಚಟುವಟಿಕೆ ಆಧಾರಿತ ಕಲಿಕಾ ವಿಧಾನ ನಲಿ-ಕಲಿ ಕುರಿತಾಗಿ ಕೂಲಂಕಷವಾಗಿ ಅಧ್ಯಯನ ಮಾಡಲಾಗಿದೆ.*

***Keywords:*** *ನಲಿ-ಕಲಿ ಬೋಧನಾ ವಿಧಾನ, ಚಟುವಟಿಕೆ ಆಧಾರಿತ ಕಲಿಕೆ, ಉಲ್ಲಾಸದಾಯಕ ಕಲಿಕೆ, ಸ್ವಕಲಿಕೆ, ಸ್ವವೇಗದ ಕಲಿಕೆ, ಸಂತಸದ ಕಲಿಕೆ*

**ಪೀಠಿಕೆ**

ದಕ್ಷಿಣ ಶಿಕ್ಷಣ ಎಂಬುದು ಎಂದಿಗೂ ನಿಂತ ನೀರಲ್ಲ. ಅದು ಯಾವಾಗಲೂ ನಿರಂತರವಾಗಿ ಪ್ರವಹಿಸುತ್ತಲೇ ಇರುತ್ತದೆ. ನಿರಂತರ ಪ್ರವಹಿಸುವಿಕೆಯಿಂದಾಗಿ ಸಾಕಷ್ಟು ಹೊಸ ಹೊಸ ಆಲೋಚನೆಗಳು, ತಂತ್ರಗಳು ಹಾಗೂ ಆವಿಷ್ಕಾರಗಳಿಂದಾಗಿ ಶಿಕ್ಷಣ ಸಾರ್ವತ್ರೀಕರಣವಾಗುತ್ತದೆ. ಸಾಕಷ್ಟು ಪ್ರಯೋಗಗಳ ನಂತರ ನಲಿ-ಕಲಿ ಬೋಧನಾ ವಿಧಾನದ ಮೂಲಕ ಗುಣಮಟ್ಟದ ಹಾಗೂ ವಿಭಿನ್ನ ರೀತಿಯ ಶಿಕ್ಷಣ ನೀಡುವ ಕೆಲಸವನ್ನು ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪರಿಚಯ ಮಾಡಿಸಲಾಗಿದೆ. ನಲಿ-ಕಲಿ ಬಹಳ ವಿಭಿನ್ನವಾದ ಹಾಗೂ ಚಟುವಟಿಕೆ ಆಧಾರಿತ ಬೋಧನಾ ವಿಧಾನವಾಗಿದ್ದು, ಮಕ್ಕಳೇ ಸ್ವತಃ ಚಟುವಟಿಕೆ ಮಾಡುವ ಮೂಲಕ ಅಕ್ಷರಗಳು

***Please cite this article as:*** ಸೌಮ್ಯ, ಕೆ. ಬಿ. (2024). ಕರ್ನಾಟಕ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಉಲ್ಲಾಸದಾಯಕ ಕಲಿಕಾ ಬೋಧನೆ: ನಲಿ-ಕಲಿ ಕಾರ್ಯಕ್ರಮದ ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 46–57

ಹಾಗೂ ಅಂಕಿಗಳನ್ನು ಕಲಿಸಲಾಗುತ್ತದೆ. ಅಕ್ಷರಗಳ ಜೊತೆ ಜೊತೆಗೆ ಪದಗಳ ಜೋಡಣೆ ಮಾಡುವ ಕ್ರಮವನ್ನು ಈ ವಿಧಾನದ ಮೂಲಕ ಮಕ್ಕಳಿಗೆ ಬೋಧಿಸಲಾಗುತ್ತದೆ. ಇದರಿಂದ ಕಲಿಕೆ ಮಕ್ಕಳಿಗೆ ಹೊರೆಯಾಗಿ ಪರಿಣಮಿಸದೆ ಆನಂದದಾಯಕವಾಗಿರುತ್ತದೆ. ಚಟುವಟಿಕೆ ಆಧಾರಿತ ನಲಿ–ಕಲಿ ಪದ್ಧತಿಯು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆಯಲ್ಲಿ ಪ್ರಪ್ರಥಮ ಬಾರಿಗೆ ಪರಿಚಯಿಸಲಾಯಿತು. ಆ ನಂತರ ಇದು ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೂ ವಿಸ್ತರಿಸಲಾಯಿತು. ನಲಿ–ಕಲಿ ಚಟುವಟಿಕೆ ಆಧಾರಿತ ಶಿಕ್ಷಣ ಪದ್ಧತಿಯು ರಾಜ್ಯದ ಸುಮಾರು 20,000ಕ್ಕೂ ಅಧಿಕ ಏಕಶಿಕ್ಷಕ ಶಾಲೆಗಳಿಗೆ ವರವಾಗಿ ಪರಿಣಮಿಸಿತು. ಅಲ್ಲದೇ, ಮಕ್ಕಳ ಗುಣಾತ್ಮಕ ಕಲಿಕೆಗೂ ಬುನಾದಿ ಹಾಕಿಕೊಟ್ಟಿತು.

**ಸಂಶೋಧನಾ ಉದ್ದೇಶ ಮತ್ತು ವಿಧಾನ**

ಶಿಕ್ಷಣ ಸಾರ್ವತ್ರೀಕರಣಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಚಟುವಟಿಕೆ ಆಧಾರಿತ ಶಿಕ್ಷಣ ಕೊಡುವ ನಿಟ್ಟಿನಲ್ಲಿ ಪರಿಚಯಿಸಲಾದ ನಲಿ–ಕಲಿ ಬೋಧನಾ ವಿಧಾನ ಕುರಿತು ಅಧ್ಯಯನ ಮಾಡಲಾಗಿದೆ. ನಲಿ–ಕಲಿ ಎಂಬುದು ಚಟುವಟಿಕೆ ಆಧಾರಿತವಾದ ಬೋಧನಾ ವಿಧಾನವಾಗಿದ್ದು, ಸಾಂಪ್ರದಾಯಿಕ ಕಲಿಕಾ ಶಿಕ್ಷಣ ಬೋಧನಾ ವಿಧಾನಕ್ಕೆ ಪರ್ಯಾಯವಾಗಿ ಪರಿಚಯಿಸಲಾದ ಬೋಧನಾ ವಿಧಾನವಾಗಿದೆ. ಮಕ್ಕಳಿಗೆ ಶಿಕ್ಷಣ ಎಂಬುದು ಹೊರೆಯಾಗದ ನಿಟ್ಟಿನಲ್ಲಿ ಗುಣಾತ್ಮಕ ಶಿಕ್ಷಣ ನೀಡುವ ಗುರಿಯನ್ನು ಹೊಂದಲಾಗಿದೆ. ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯದಲ್ಲಿ ಪರಿಚಯಿಸಲಾದ ನಲಿ–ಕಲಿ ಶಿಕ್ಷಣ ವಿಧಾನದ ಬೋಧನಾ ಕ್ರಮವನ್ನು ಈ ಅಧ್ಯಯನದಲ್ಲಿ ವಿಸ್ತೃತವಾಗಿ ಅಧ್ಯಯನ ಮಾಡಲಾಗಿದೆ.

**ನಲಿ–ಕಲಿ ಚಟುವಟಿಕೆ ಆಧಾರಿತ ಬೋಧನಾ ವಿಧಾನ**

ಶಿಕ್ಷಣ ಸಾರ್ವತ್ರೀಕರಣದ ಗುರಿ ಸಾಧನೆಗೆ ನಡೆದಿರುವ ಹೊಸ ಪ್ರಯೋಗಗಳಲ್ಲಿ ನಲಿ–ಕಲಿ ವಿಧಾನವೂ ಒಂದು. ಈ ವಿಧಾನದ ಹುಟ್ಟು ಮತ್ತು ಬೆಳವಣಿಗೆಯನ್ನು ಈ ಕೆಳಕಂಡಂತೆ ಕಾಣಬಹುದು.

**ಸೂಕ್ಷ್ಮ ಯೋಜನೆ (ಮೈಕ್ರೋ ಪ್ಲಾನಿಂಗ್)**

1992–93ನೇ ಶೈಕ್ಷಣಿಕ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ತರುವ ದಿಕ್ಕಿನಲ್ಲಿ ಚಿಂತಿಸುತ್ತ ಶಿಕ್ಷಣ ಇಲಾಖೆ ಹಾಗೂ ಯುನಿಸೆಫ್ ಸಹಭಾಗಿತ್ವದಲ್ಲಿ ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ತಾಲೂಕಿನಲ್ಲಿ ಸೂಕ್ಷ್ಮ ಯೋಜನೆ (ಮೈಕ್ರೋ ಪ್ಲಾನಿಂಗ್) ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮದಲ್ಲಿ ಶಾಲೆ ಮತ್ತು ಜನವಸತಿಗೆ ಸಂಬಂಧಿಸಿದ ಮಾಹಿತಿ/ಅಂಕಿ ಅಂಶಗಳನ್ನು ಸಮುದಾಯ ಭಾಗವಹಿಸುವಿಕೆಯ ಮೂಲಕ ಸಂಗ್ರಹಿಸಲು ಪ್ರಯತ್ನಿಸಲಾಯಿತು. ಈ ಕಾರ್ಯಕ್ರಮದ ಮೂಲಕ ಶೈಕ್ಷಣಿಕ ಪ್ರಗತಿಗೆ ಇರುವ ಕೊರತೆಗಳನ್ನು ತಿಳಿಯಲು ಅವಕಾಶವಾಯಿತು.

**ಸೂಕ್ಷ್ಮ ಯೋಜನೆಯಿಂದ ಹೊರಬಂದ ಅಂಶಗಳು**

- ಪ್ರತಿ ಜನವಸತಿಯಲ್ಲೂ ಕೆಲವು ಮಕ್ಕಳು ಶಾಲೆಗೆ ದಾಖಲಾಗಿದ್ದರೂ ಸಹ ಸಾಮಾಜಿಕ, ಆರ್ಥಿಕ ಮತ್ತು ವೈಯಕ್ತಿಕ ಕಾರಣಗಳಿಂದ ಶಾಲೆ ಬಿಟ್ಟಿರುವುದು.
- ಶಾಲೆಗೆ ಸೇರಿಲ್ಲದ ಮತ್ತು ಬಿಟ್ಟಿರುವ ಮಕ್ಕಳಲ್ಲಿ ಹೆಣ್ಣು ಮಕ್ಕಳ ಪಾಲು ಅತಿ ಹೆಚ್ಚಾಗಿರುವುದು.
- ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುವುದು.
- ಶಾಲೆಗೆ ದಾಖಲಾಗಿರುವ ಮಕ್ಕಳಲ್ಲಿ ನಿರಂತರ ಹಾಜರಾತಿಯ ಕೊರತೆ ಇರುವುದು.
- ಶಾಲೆ ಆಕರ್ಷಣೆಯಾಗಿಲ್ಲದಿರುವುದು.

ಇದೇ ಸಂದರ್ಭದಲ್ಲಿ ವಿದ್ಯಾರ್ಥಿಗಳಲ್ಲಿ ಅಪೇಕ್ಷಿತ ಗುಣಾತ್ಮಕ ಕಲಿಕೆಯನ್ನು ತರಲು ತರಗತಿವಾರು ಮತ್ತು ವಿಷಯವಾರು ಕಲಿಕಾ ಸಾಮರ್ಥ್ಯವನ್ನು ಗುರುತಿಸಲಾಯಿತು. ಸಾಮರ್ಥ್ಯಾಧಾರಿತ ಬೋಧನಾ/ಕಲಿಕಾ ಪದ್ಧತಿಯನ್ನು ರಾಜ್ಯದಾದ್ಯಂತ ಎಲ್ಲಾ ಶಾಲೆಗಳಲ್ಲಿ ಅನುಷ್ಠಾನಕ್ಕೆ ತರುವ ಉದ್ದೇಶದಿಂದ

ಕಲಿಕಾ ಕನಿಷ್ಠ ಮಟ್ಟ ಕಾರ್ಯಕ್ರಮವನ್ನು ಪರಿಚಯಿಸಲಾಯಿತು. ಇದರನ್ವಯ ಪ್ರಾಥಮಿಕ ಶಾಲೆಯ 1 ರಿಂದ 5ನೇ ತರಗತಿವರೆಗಿನ ವಿಷಯಗಳಿಗೆ ಗುರುತಿಸಿರುವ ಸಾಮರ್ಥ್ಯಗಳ ಬಗ್ಗೆ ಶಿಕ್ಷಕರಲ್ಲಿ ಜಾಗೃತಿ ತರಲು ಹಾಗೂ ಪ್ರತಿ ವಿದ್ಯಾರ್ಥಿಯಲ್ಲೂ ಗೊತ್ತುಪಡಿಸಿದ ಸಾಮರ್ಥ್ಯಗಳನ್ನು ಬೆಳೆಸಲು ಅಳವಡಿಸಬೇಕಾದ ಚಟುವಟಿಕೆಗಳ ಬಗ್ಗೆ ಶಿಕ್ಷಕರೊಡನೆ ಚಿಂತನೆ ನಡೆಸಲಾಯಿತು. ಇದರ ಸಂಬಂಧ ಶಿಕ್ಷಕರೊಡನೆ ಕಾರ್ಯಾಗಾರ ನಡೆಸುವಾಗ ವಿದ್ಯಾರ್ಥಿಗಳಲ್ಲಿ ಅಪೇಕ್ಷಿತ ಕಲಿಕೆ ಆಗಿಲ್ಲದಿರಲು ಇರುವ ಪ್ರಮುಖ ಕಾರಣ ಹಾಗೂ ಸವಾಲುಗಳನ್ನು ಗುರುತಿಸಲಾಯಿತು.

**ಶಿಕ್ಷಕರು ಗುರುತಿಸಿದ ಸವಾಲುಗಳು**

- ತರಗತಿಗೊಬ್ಬ ಶಿಕ್ಷಕರು ಇಲ್ಲದ ಕಾರಣ ಉಂಟಾಗಿರುವ ಬಹುವರ್ಗದ ಅನಿವಾರ್ಯತೆ.
- ವಿದ್ಯಾರ್ಥಿಗಳು ವಿವಿಧ ಕಾರಣಗಳಿಂದ ಅಲ್ಪಾವಧಿ/ದೀರ್ಘಾವಧಿ ಗೈರು ಹಾಜರಾಗುವುದರಿಂದ ಅವರಲ್ಲಿ ಉಂಟಾಗಿರುವ ಕಲಿಕಾ ದೋಷ ಅಥವಾ ಕೊರತೆ.
- ಇದರ ಸ್ವಾಭಾವಿಕ ಬೆಳವಣಿಗೆಯಾಗಿ ಪ್ರತಿ ತರಗತಿಯ ವಿದ್ಯಾರ್ಥಿಗಳಲ್ಲಿ ಬಹುಹಂತದ ಕಲಿಕೆಯ ವಾತಾವರಣದ ಸೃಷ್ಟಿ.
- ತರಗತಿಯಲ್ಲಿ ನಡೆಯುವ ಎಲ್ಲಾ ಕಲಿಕಾ ಚಟುವಟಿಕೆಗಳು ಪಠ್ಯ ಪುಸ್ತಕ ಆಧಾರಿತವಾಗಿದ್ದು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಪಠ್ಯ ಪುಸ್ತಕವನ್ನೇ ಅವಲಂಭಿಸುವ ಜೊತೆಗೆ ಏಕ ವೇಗವಾಗಿ ಬೋಧನಾ ಪ್ರಕ್ರಿಯೆಯನ್ನು ನಡೆಸುವುದರಿಂದಲೂ ಸಹ ಬಹು ಹಂತದ ಕಲಿಕಾ ವಾತಾವರಣದ ಸೃಷ್ಟಿ.
- ತರಗತಿಯ ಕಲಿಕಾ ಪ್ರಕ್ರಿಯೆಯು ಮುದ್ರಿತ ಪಠ್ಯ ಪುಸ್ತಕಕ್ಕೆ ಸೀಮಿತವಾಗಿರುವುದರಿಂದ ಕಲಿಕೆಯು ನೀರಸವಾಗಿ ನಡೆಯುತ್ತದೆ ಮತ್ತು ಇದರಿಂದ ವಿದ್ಯಾರ್ಥಿಗಳಲ್ಲಿ ಕುತೂಹಲ ಕೆರಳಿಸುವ ಸಾಧ್ಯತೆ ಕಡಿಮೆ.

**ನಲಿ–ಕಲಿ ಬೀಜಾಂಕುರ**

ಶಿಕ್ಷಕರು ಗುರುತಿಸಿದ ಸವಾಲುಗಳನ್ನು ಎದುರಿಸಲು ಸುತ್ತಮುತ್ತಲಿನ ರಾಜ್ಯಗಳಲ್ಲಿ ಅನುಸರಿಸುತ್ತಿರುವ ಕ್ರಮಗಳನ್ನು ಅಧ್ಯಯನ ಮಾಡುತ್ತಾ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಮದನಪಲ್ಲಿ ತಾಲೂಕಿನಲ್ಲಿ, ರಿಷಿವ್ಯಾಲಿ ಆಶ್ರಯದಲ್ಲಿ ನಡೆಯುತ್ತಿರುವ ಆಶ್ರಿತ ಶಾಲೆಗಳಿಗೆ (ಸ್ಯಾಟಲೈಟ್ ಸ್ಕೂಲ್) ಹೆಗ್ಗಡದೇವನಕೋಟೆ ತಾಲೂಕಿನ ಆಯ್ದ ಶಿಕ್ಷಕರ ತಂಡ ಯೂನಿಸೆಫ್ ಸಹಯೋಗದಲ್ಲಿ ಭೇಟಿ ನೀಡಿತ್ತು. ಅಲ್ಲಿ ಅಳವಡಿಸಿರುವ ಚಟುವಟಿಕೆ, ಕಲಿಕಾ ಸಾಮಗ್ರಿ ಮತ್ತು ತರಗತಿ ನಿರ್ವಹಣಾ ಕ್ರಮವನ್ನು ಅಧ್ಯಯನ ಮಾಡಿದ ಶಿಕ್ಷಕರು ಸೂಕ್ತ ರೀತಿಯಲ್ಲಿ ಸ್ಥಳೀಯ ಸನ್ನಿವೇಶಕ್ಕೆ ಅನುಗುಣವಾಗಿ ಸುಧಾರಣೆ ಹಾಗೂ ಪರಿವರ್ತನೆಯನ್ನು ತರುತ್ತಾ, ಹೆಗ್ಗಡದೇವನಕೋಟೆಯಲ್ಲಿ ನಲಿ–ಕಲಿ ಎಂಬ ಯೋಜನೆ ಬೀಜಾಂಕುರವಾಗಲು ಕಾರಣೀಭೂತರಾದರು.

**ಭೇಟಿಯಿಂದ ಹೊರಬಂದ ಅಂಶಗಳು**

- ಬಾಲಸ್ನೇಹಿ ಹಾಗೂ ಆ ಬಗ್ಗೆ ನಂಬಿಕೆ ಸೃಷ್ಟಿಸುವ ತರಗತಿಯ ವಾತಾವರಣ
- ವಿವಿಧ ತರಗತಿ ಹಾಗೂ ವಿವಿಧ ಕಲಿಕಾ ಹಂತದಲ್ಲಿರುವ ವಿದ್ಯಾರ್ಥಿಗಳು ಚಟುವಟಿಕೆಗಳ ಮೂಲಕ ಸಕ್ರೀಯವಾಗಿ ಕಲಿಯುವ ವಾತಾವರಣ
- ಶಿಕ್ಷಕರನ್ನು ಒಬ್ಬ ಸ್ನೇಹಿತ ಹಾಗೂ ಕಲಿಕೆಗೆ ಅನುಕೂಲತೆಯನ್ನು ಕಲ್ಪಿಸುವ ಒಬ್ಬ ಮಾರ್ಗದರ್ಶಕನಾಗಿ ಕೆಲಸ ನಿರ್ವಹಿಸುವುದು
- ಪಠ್ಯ ಪುಸ್ತಕವು ಕಲಿಕೆಗೆ ಕೇಂದ್ರೀಕೃತವಾಗಿರುವ ಬದಲಿಗೆ ವೈವಿಧ್ಯಮಯ ಕಲಿಕಾ ಸಾಮಾಗ್ರಿಗಳ ಮೂಲಕ ಕಲಿಕೆ ಆಗುತ್ತಿರುವುದು.

**ಸವಾಲು ಮತ್ತು ಅವಕಾಶಗಳು**

ಪಠ್ಯಕ್ರಮ ಮತ್ತು ಪಠ್ಯ ವಸ್ತುಗಳನ್ನು ವಿಮರ್ಶಿಸಲು, ಬಳಸುತ್ತಿರುವ ಕಲಿಕಾ ಸಾಮಗ್ರಿಗಳನ್ನು ವಿಮರ್ಶಿಸಲು, ಕಲಿಕಾ ಪ್ರಕ್ರಿಯೆಯನ್ನು ವಿಮರ್ಶಿಸಲು, ತರಗತಿ ನಿರ್ವಹಣಾ ವ್ಯವಸ್ಥೆಯನ್ನು ವಿಮರ್ಶಿಸಲು ಹಾಗೂ ಮೌಲ್ಯಮಾಪನ ವ್ಯವಸ್ಥೆಯನ್ನು ವಿಮರ್ಶಿಸಲು ಅವಕಾಶ ಒದಗಿಸಿತು.

**ನಲಿ ಕಲಿ ವಿಧಾನದ ಸಕಾರಾತ್ಮಕ ಅಂಶಗಳು**

ನಲಿ ಕಲಿ ಕಾರ್ಯಕ್ರಮದಲ್ಲಿ ಸಾಕಷ್ಟು ಸಕಾರಾತ್ಮಕ ಅಂಶಗಳಿವೆ ಅವುಗಳೆಂದರೆ

- ಬಹುವರ್ಗ ಮತ್ತು ಬಹುಹಂತದ ಬೋಧನೆ/ಕಲಿಕೆಗೆ ಮುಕ್ತ ಅವಕಾಶ
- ಅರ್ಥಪೂರ್ಣ ಹಾಗೂ ವೈವಿಧ್ಯಮಯ ಚಟುವಟಿಕೆಯ ಮೂಲಕ ಕಲಿಕಾ ವಾತಾವರಣ
- ಚಟುವಟಿಕೆಯ ಕ್ರಮಬದ್ಧ ನಿರ್ವಹಣೆಯ ಮೂಲಕ ಕಲಿಕೆಯನ್ನು ಸ್ಥಿತಗೊಳಿಸಲು ಅವಕಾಶ
- ವಿದ್ಯಾರ್ಥಿಯು ತನ್ನದೇ ಆದ ವೇಗದಲ್ಲಿ ಕಲಿಯಲು ಅವಕಾಶ
- ಗೊತ್ತುಪಡಿಸಿದ ಕಲಿಕಾಂಶದ ಕಲಿಕೆಯ ನಂತರವೇ ಮುಂದಿನ ಕಲಿಕಾಂಶದ ಕಲಿಕೆಗೆ ಅವಕಾಶ. ಅದೇ ರೀತಿ ಒಂದು ಶೈಕ್ಷಣಿಕ ವರ್ಷಕ್ಕೆ ಅಥವಾ ತರಗತಿಗೆ ಗೊತ್ತುಪಡಿಸಿದ ಕಲಿಕೆಯನ್ನು ಪೂರ್ಣಗೊಳಿಸಿದ ನಂತರವೇ ಮುಂದಿನ ಕಲಿಕೆಯಲ್ಲಿ ತೊಡಗಿಸಲು ಅವಕಾಶ
- ವಿದ್ಯಾರ್ಥಿಯು ಶಿಕ್ಷಕರ ಮಾರ್ಗದರ್ಶನದಲ್ಲಿ ಕಲಿಕೆಯನ್ನು ಆರಂಭಿಸಿದ ನಂತರ ಗೆಳೆಯರ ಸಹಾಯದಲ್ಲಿ ಪುನರ್ಬಲನಗೊಂಡು ಅಂತಿಮವಾಗಿ ಸ್ವತಂತ್ರ ಹಾಗೂ ಸೃಜನಾತ್ಮಕವಾಗಿ ಚಿಂತನೆಯನ್ನು ಅಭಿವ್ಯಕ್ತಗೊಳಿಸಲು ಅವಕಾಶ
- ಪ್ರತಿ ವಿದ್ಯಾರ್ಥಿಗೂ ಶಿಕ್ಷಕ ಅಥವಾ ಸಹ ವಿದ್ಯಾರ್ಥಿಯಿಂದ ನಿರಂತರ ಗಮನ
- ಗೆಳೆಯರ ಸಹಾಯದಿಂದ ಕಲಿಯುವ ಮೂಲಕ ಸಹಭಾಗಿತ್ವದ ಕಲಿಕೆಗೆ ಅವಕಾಶ
- ವಿದ್ಯಾರ್ಥಿಯು ತನ್ನ ಕಲಿಕಾ ಪ್ರಕ್ರಿಯೆಯಲ್ಲಿ ಕಾಲಕ್ರಮೇಣ ಶಿಕ್ಷಕರ ಅವಲಂಬನೆಯನ್ನು ಕಡಿಮೆ ಮಾಡಿಕೊಳ್ಳುವ ಜೊತೆಗೆ ಸ್ವಾವಲಂಬಿಯಾಗಿ ಕಲಿಯಲು ಅವಕಾಶ
- ವಿದ್ಯಾರ್ಥಿಯು ತನ್ನ ಕಲಿಕೆಯ ಗುರಿಯನ್ನು ತಿಳಿಯುವ ಜೊತೆಗೆ ಕಲಿಕೆಯಲ್ಲಿ ತನ್ನ ಸ್ಥಾನವನ್ನು ತಿಳಿಯುವ ಅವಕಾಶ
- ಶಿಕ್ಷಕನು ಈ ವ್ಯವಸ್ಥೆಯಲ್ಲಿ ನಡೆಯುವ ಚಟುವಟಿಕೆಗಳ ನಿರ್ವಹಣೆಯ ಬಗ್ಗೆ ಕೌಶಲ ಪಡೆದ ನಂತರ ಬೇರೆ ಬೇರೆ ಕಲಿಕಾ ಹಂತದಲ್ಲಿರುವ ಮಕ್ಕಳನ್ನು ಏಕಕಾಲದಲ್ಲಿ ನಿಭಾಯಿಸುವ ಸಾಮರ್ಥ್ಯವೃದ್ಧಿ
- ಕಲಿಕಾ ಗುಂಪುಗಳು ಕಲಿಕಾ ಮಟ್ಟವನ್ನು ಆಧರಿಸಿ ರಚನೆಯಾಗುವ ಬದಲಿಗೆ ಮಗು ಭಾಗವಹಿಸುವ ಚಟುವಟಿಕೆಯನ್ನು ಆಧರಿಸಿ ರಚನೆಯಾಗುವುದರಿಂದ ಜಾತಿ, ವರ್ಗ ಹಾಗೂ ಲಿಂಗ ಇವುಗಳ ಅಸಮಾನತೆಯನ್ನು ಹೋಗಲಾಡಿಸಬಹುದು.
- ವಿದ್ಯಾರ್ಥಿಯು ಕಲಿಕಾ ಏಣಿಯ ಮೂಲಕ ಹೆಜ್ಜೆ ಹೆಜ್ಜೆಯಾಗಿ ಕಲಿಯುತ್ತಾ ಹೋಗುವುದರಿಂದ ಕಲಿಕಾ ಅಂಶ ಅಥವಾ ಕಲಿಕಾ ಚಟುವಟಿಕೆಯಲ್ಲಿ ನಿರಂತರವಾಗಿ ಪರಿವರ್ತನೆ ತರಲು ಸಾಧ್ಯ.
- ಮೌಲ್ಯಮಾಪನ ಚಟುವಟಿಕೆಗಳು ಮಗುವಿನ ಗಮನಕ್ಕೆ ಬಾರದೆ ನಿರಂತರವಾಗಿ ಇರುವುದರಿಂದ ಜೊತೆಗೆ ಬಹುಪಾಲು ಆಟಗಳ ಮೂಲಕವೇ ಇರುವುದರಿಂದ ವಿದ್ಯಾರ್ಥಿಗೆ

ಮೌಲ್ಯಮಾಪನ ಎಂಬುದು ಸಂತಸದ ಅನುಭವವಾಗುತ್ತದೆ.

- ಸ್ಥಳೀಯ ಸಂಪನ್ಮೂಲಗಳ ಬಳಕೆಗೆ ಅವಕಾಶ ಒದಗಿಸುತ್ತದೆ.

**ನಲಿ ಕಲಿ ಕಾರ್ಯಕ್ರಮದ ಅನುಷ್ಠಾನ ಮತ್ತು ಬೆಳವಣಿಗೆಯಲ್ಲಿ ಶಿಕ್ಷಕರ ಪಾತ್ರ**

ನಲಿ ಕಲಿ ವಿಧಾನದಲ್ಲಿ ಶಿಕ್ಷಕರ ಪಾತ್ರ ಮಹತ್ತರವಾದುದು. ಕಲಿಕೆಯಲ್ಲಿ ವಿದ್ಯಾರ್ಥಿಗಳಿಗೆ ಕುತೂಹಲ ಮೂಡಿಸುವುದು, ಕಲಿಕೆಯನ್ನು ಆಸಕ್ತಿದಾಯಕವನ್ನಾಗಿಸುವುದು ಪ್ರಮುಖವಾದುದು. ಈ ಕೆಳಗಿನ ನಲಿ ಕಲಿ ಬೋಧನಾ ವಿಧಾನದಲ್ಲಿ ಶಿಕ್ಷಕರ ಪಾತ್ರವನ್ನು ಗುರುತಿಸಲಾಗಿದೆ.

- ವಿದ್ಯಾರ್ಥಿಗಳಿಗೆ ಕಲಿಕೆಯಲ್ಲಿ ಕುತೂಹಲವನ್ನು ಮೂಡಿಸುವ ಸಲುವಾಗಿ ಕಲಿಕಾ ಚಟುವಟಿಕೆಗಳನ್ನು ರೂಪಿಸಲು ಶಿಕ್ಷಕರಿಂದ ಸಿದ್ಧತೆ.
- ಬಹುವರ್ಗ ಮತ್ತು ಬಹು ಹಂತದ ಕಲಿಕಗೆ ಅನುಕೂಲವಾಗುವಂತಹ ತರಗತಿ ನಿರ್ವಹಣೆಯಲ್ಲಿ ಪರಿವರ್ತನೆ ತರುವಲ್ಲಿ ಶಿಕ್ಷಕರ ಒಪ್ಪಿಗೆ ಮತ್ತು ಉತ್ಸುಕತೆ.
- ಸಿದ್ಧಪಡಿಸಿರುವ ಕಲಿಕಾ ಸಾಮಾಗ್ರಿ ಹಾಗೂ ತರಬೇತಿ ನಿರ್ವಹಣೆಯ ಬಗ್ಗೆ ತಾಲೂಕಿನ ಎಲ್ಲಾ ಶಾಲೆಗಳ ಶಿಕ್ಷಕರನ್ನು ಕಾರ್ಯಾಗಾರಗಳ ಮೂಲಕ ಅಣಿಗೊಳಿಸಲು ಶಿಕ್ಷಕರ ಮುಂದಾಳತ್ವ.
- ಅನುಷ್ಠಾನದ ಹಂತದಲ್ಲಿ ಶಿಕ್ಷಕರು ತರಗತಿಯಲ್ಲಿ ಎದುರಿಸುವ ಸವಾಲುಗಳನ್ನು ಬಗೆಹರಿಸಲು ಸಂಪನ್ಮೂಲ ಶಿಕ್ಷಕರ ಮುಂದಾಳತ್ವ.
- ನಲಿ ಕಲಿ ವ್ಯವಸ್ಥೆಯನ್ನು ಮೇಲಿನ ತರಗತಿಗಳಿಗೆ ವಿಸ್ತರಿಸಲು ಬೇಕಾಗಿರುವ ಹೊಸ ಕಲಿಕಾ ಸಾಮಾಗ್ರಿಗಳನ್ನು ಸಿದ್ಧಪಡಿಸುವುದರ ಜೊತೆಗೆ ಕಲಿಕಾ ಸಾಮಾಗ್ರಿಗಳನ್ನು ಪ್ರತಿ ಶೈಕ್ಷಣಿಕ ವರ್ಷದಲ್ಲಿ ಪರಿಷ್ಕರಣೆ ಮಾಡಲು ಶಿಕ್ಷಕರು ಮುಂದಾಳತ್ವ ವಹಿಸುವುದು.

**ನಲಿ–ಕಲಿ ಕಾರ್ಯಕ್ರಮದ ವಿಸ್ತರಣೆ**

ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲೂಕಿನಲ್ಲಿ ಕಾರ್ಯಕ್ರಮದ ಪ್ರಾಯೋಗಿಕ ಅನುಷ್ಠಾನ ಮಾಡಿದ ನಂತರ 1997–98ರಲ್ಲಿ ಡಿ.ಪಿ.ಇ.ಪಿ. ಯೋಜನೆಯನ್ನು ಮೈಸೂರು ಜಿಲ್ಲೆಗೆ ವಿಸ್ತರಿಸಲಾಯಿತು. ನಲಿ–ಕಲಿ ವ್ಯವಸ್ಥೆಯನ್ನು ಮೈಸೂರು ನಗರವನ್ನು ಹೊರತುಪಡಿಸಿ ಜಿಲ್ಲೆಯ ಹೆಗ್ಗಡದೇವನಕೋಟೆ, ಟಿ. ನರಸೀಪುರ, ಮೈಸೂರು, ನಂಜನಗೂಡು, ಹುಣಸೂರು, ಪಿರಿಯಾಪಟ್ಟಣ ಮತ್ತು ಕೃಷ್ಣರಾಜನಗರ ತಾಲೂಕುಗಳಲ್ಲಿ ಅನುಷ್ಠಾನಗೊಳಿಸಲಾಯಿತು.

ಮೈಸೂರು ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಿದ ನಲಿ–ಕಲಿ ಕಾರ್ಯಕ್ರಮದ ಫಲಿತಾಂಶವನ್ನು ಆಧರಿಸಿ 1999–2000ರಲ್ಲಿ ಈ ಕಾರ್ಯಕ್ರಮವು ಜನ ಶಾಲಾ ಕಾರ್ಯಕ್ರಮದಡಿಯಲ್ಲಿ (ಜನಶಾಲಾ ಕಾರ್ಯಕ್ರಮ ಅನುಷ್ಠಾನಗೊಂಡಿದ್ದ ತುಮಕೂರು ಜಿಲ್ಲೆಯ ಶಿರಾ, ಮಧುಗಿರಿ, ಪಾವಗಡ, ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಹಾಸನ ಜಿಲ್ಲೆಯ ಹೊಳೆನರಸೀಪುರ, ಅರಕಲಗೂಡು ಮತ್ತು ಉತ್ತರ ಕನ್ನಡ ಜಿಲ್ಲೆಯ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕುಗಳು) ಸೇರ್ಪಡೆಯಾಯಿತು. ಇದೇ ಶೈಕ್ಷಣಿಕ ವರ್ಷದಲ್ಲಿ ಡಿ.ಪಿ.ಇ.ಪಿ. ಮೊದಲನೇ ಹಂತಕ್ಕೆ ಒಳಪಟ್ಟಿದ್ದ ಮಂಡ್ಯ ಜಿಲ್ಲೆಯ ಮಳವಳ್ಳಿ, ಕೋಲಾರ ಜಿಲ್ಲೆಯ ದೊಡ್ಡಬಳ್ಳಾಪುರ, ಬೆಳಗಾಂ ಜಿಲ್ಲೆಯ ಸವದತ್ತಿ ಹಾಗೂ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕುಗಳಲ್ಲಿ ನಲಿ–ಕಲಿ ಕಾರ್ಯಕ್ರಮವು ವಿಸ್ತರಿಸ್ಪಟ್ಟಿತು.

1999–2000ನೇ ಸಾಲಿನಲ್ಲಿ ಡಿ.ಪಿ.ಇ.ಪಿ. ಎರಡನೇ ಹಂತಕ್ಕೆ ಒಳಪಟ್ಟ 12 ಜಿಲ್ಲೆಗಳಲ್ಲಿ, ಪ್ರತಿ ಜಿಲ್ಲೆಯ ಆಯ್ದ ಒಂದು ತಾಲ್ಲೂಕಿನ ಒಂದು ಕ್ಲಸ್ಟರ್‌ಗೆ ನಲಿ–ಕಲಿ ಕಾರ್ಯಕ್ರಮವನ್ನು

ವಿಸ್ತರಿಸಲಾಯಿತು. ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮವು ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಂಡ ಪರಿಣಾಮವಾಗಿ ಕೆಲವು ಜಿಲ್ಲೆಗಳಲ್ಲಿ ಜಾರಿಯಲ್ಲಿದ್ದ ಡಿ.ಪಿ.ಇ.ಪಿ. ಮತ್ತು ಜನಶಾಲಾ ಕಾರ್ಯಕ್ರಮಗಳು ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮದಲ್ಲಿ ವಿಲೀನವಾದವು. 2004–05ರಲ್ಲಿ ಯುನಿಸೆಫ್ ಮತ್ತು ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮದ ಸಹಭಾಗಿತ್ವದಲ್ಲಿ ಈಶಾನ್ಯ ವಲಯದ ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಯ ಆಯ್ದ 8 ತಾಲೂಕುಗಳಲ್ಲಿ (ಗುಲ್ಬರ್ಗಾ ಜಿಲ್ಲೆಯ ಆಳಂದ, ಶಹಪುರ, ರಾಯಚೂರು ಜಿಲ್ಲೆಯ ರಾಯಚೂರು, ಮಾನ್ವಿ, ಸಿಂಧನೂರು, ದೇವದುರ್ಗ, ಲಿಂಗಸೂಗೂರು) ನಲಿ–ಕಲಿ ಕಾರ್ಯಕ್ರಮವನ್ನು ಅನುಷ್ಠಾಗೊಳಿಸಲಾಯಿತು.

ನಲಿ–ಕಲಿ ಕಾರ್ಯಕ್ರಮದಲ್ಲಿ ಅಳವಡಿಸಿರುವ ಸಿದ್ಧಾಂತಗಳ ಮತ್ತು ಕಲಿಕಾ ಸಾಮಗ್ರಿಗಳು ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯ ಇತರೆ ಚಟುವಟಿಕೆಗಳ ಮೇಲೆ ಪ್ರಭಾವ ಬೀರಿದೆ. ಅಂದರೆ, ಡಿ.ಎಸ್.ಇ.ಆರ್.ಟಿ. ವತಿಯಿಂದ ರಚನೆಯಾಗಿರುವ ಅಭ್ಯಾಸ ಪುಸ್ತಕ, ಚಿಣ್ಣರ ಅಂಗಳ ಕಾರ್ಯಕ್ರಮದಲ್ಲಿ ಬಳಸುತ್ತಿರುವ ಅಭ್ಯಾಸ ಪುಸ್ತಕ, ಪರಿಹಾರ ಬೋಧನೆಯಲ್ಲಿ ಬಳಸುತ್ತಿರುವ ಕಲಿಕಾ ಸಾಮಾಗ್ರಿಗಳು ಮತ್ತು ಚೈತನ್ಯ ಇದಕ್ಕೆ ಉದಾಹರಣೆಗಳಾಗಿವೆ.

**ನಲಿ ಕಲಿ ಪದ್ಧತಿಯಲ್ಲಿ ಭಾಷಾ ಕಲಿಕೆ**

ನಲಿ ಕಲಿ ವ್ಯವಸ್ಥೆಯ ಅನುಷ್ಠಾನಕ್ಕೆ ಮುನ್ನ ಒಂದನೇ ತರಗತಿಗೆ ಸಂಬಂಧಿಸಿದಂತೆ ಭಾಷೆಯ ಬೋಧನೆ ಅಥವಾ ಕಲಿಕೆಗಾಗಿ ಪಠ್ಯಪುಸ್ತಕವನ್ನು ನಿಗದಿಪಡಿಸಲಾಗಿತ್ತು. ಆದರೆ ಗಣಿತ ಮತ್ತು ಪರಿಸರ ಅಧ್ಯಯನ ಬೋಧನೆ ಅಥವಾ ಕಲಿಕೆಗಾಗಿ ಗೊತ್ತುಪಡಿಸಿರುವ ಪಠ್ಯವಸ್ತುವನ್ನು ಮಾತ್ರ ಶಾಲೆಗಳಿಗೆ ಸರಬರಾಜು ಮಾಡಲಾಗಿತ್ತು. ಒಂದನೇ ತರಗತಿ ಭಾಷೆ ಪಠ್ಯ ಪುಸ್ತಕದಲ್ಲಿ ವರ್ಣಮಾಲೆ, ಗುಣಿತಾಕ್ಷರದ ಜೊತೆಗೆ ಕೆಲವು ಸಜಾತಿ ಒತ್ತಕ್ಷರಗಳನ್ನು ಪರಿಚಯಿಸಲಾಗಿತ್ತು. ಮೊದಲಿಗೆ ಚಿತ್ರಪದಗಳಿದ್ದು, ನಂತರದಲ್ಲಿ ವಾಕ್ಯಾಂಶ ಪುಂಜಗಳಿದ್ದವು. ಪ್ರತಿ ಚಿತ್ರ ಪದವು ಒಂದೊಂದು ವರ್ಣದಿಂದ ಆರಂಭವಾಗುವಂತೆ ಇದ್ದರೂ ಸಹ ಪದದ ಉಳಿದ ಅಕ್ಷರಗಳು ಕೆಲವು ವೇಳೆ ಗುಣಿತಾಕ್ಷರ ಹಾಗೂ ಒತ್ತಕ್ಷರಗಳನ್ನೂ ಒಳಗೊಂಡಿದ್ದವು. ಉದಾಹರಣೆಗೆ, ಅರಸ, ಆನೆ, ಇಲಿ, ಗಡ್ಡ ಇತ್ಯಾದಿ. ಕೆಲವು ಶಿಕ್ಷಕರು ಚಿತ್ರಪದವನ್ನು ಪರಿಚಯಿಸುತ್ತಾ ಅದರಲ್ಲಿನ ಆರಂಭವನ್ನು ವರ್ಣದಲ್ಲಿ ಕಲಿಸುತ್ತಿದ್ದರೆ, ಮತ್ತೆ ಕೆಲವು ಶಿಕ್ಷಕರು ಇಡೀ ಪದವನ್ನು ಕಲಿಸುತ್ತಿದ್ದರು. ಇನ್ನು ಕೆಲವು ವರ್ಣಮಾಲೆ ಹಾಗೂ ಗುಣಿತಾಕ್ಷರವನ್ನು ಕಲಿಸಿದ ನಂತರವೇ ಪಠ್ಯ ಪುಸ್ತಕವನ್ನು ಬಳಸುತ್ತಿದ್ದರು. ಹಾಗಾಗಿ ಬೊಧನೆ ಕಲಿಕೆಯಲ್ಲಿ ಏಕಪ್ರಕಾರವನ್ನು ಕಾಣಲು ಸಾಧ್ಯವಾಗುತ್ತಿರಲಿಲ್ಲ.

ನಲಿ ಕಲಿ ವ್ಯವಸ್ಥೆಯಲ್ಲಿ ಮೊದಲಿಗೆ ಭಾಷೆಯ ಕಲಿಕೆಯನ್ನು ವರ್ಣಮಾಲೆ, ಗುಣಿತಾಕ್ಷರ ಹಾಗೂ ಒತ್ತಕ್ಷರ ಎಂದು ಮೂರು ಹಂತಗಳಲ್ಲಿ ವರ್ಗೀಕರಿಸಿಕೊಂಡು, ಕ್ರಮವಾಗಿ ಒಂದರಿಂದ ಮೂರನೇ ತರಗತಿವರೆಗೆ ಈ ಕಲಿಕಾಂಶವನ್ನು ಕಲಿಸುವ ಗುರಿಯನ್ನು ಇಟ್ಟುಕೊಳ್ಳಲಾಗಿತ್ತು. ಆದರೆ ಈಗ ಪರಿಷ್ಕರಣೆಯ ಮೂಲಕ ಈ ಎಲ್ಲಾ ಕಲಿಕಾಂಶಗಳನ್ನು ಒಂದು ಮತ್ತು ಎರಡನೇ ತರಗತಿಗೆ ಅಡಕಗೊಳಿಸಲಾಗಿದೆ.

**ವರ್ಣಮಾಲೆ**

ಸಾಂಪ್ರದಾಯಿಕ ಪದ್ಧತಿಯಲ್ಲಿ ವರ್ಣಮಾಲೆಯನ್ನು ಕಲಿಸುವಾಗ ಮೊದಲಿಗೆ ಸ್ವರವನ್ನು, ಆ ನಂತರ ವ್ಯಂಜನಾಕ್ಷರವನ್ನು ಕ್ರಮವಾಗಿ ಕಲಿಸುವ ರೂಢಿ ಇತ್ತು. ಈ ರೀತಿ ಕಲಿಸುವುದರಿಂದ ವರ್ಣಮಾಲೆಯ ಎಲ್ಲಾ ಅಕ್ಷರಗಳನ್ನು ಕಲಿತ ನಂತರವೇ ಆ ಅಕ್ಷರಗಳನ್ನು ಬಳಸಿ ಪದ ರಚನೆ ಮಾಡಲು ಸಾಧ್ಯವಾಗುತ್ತಿತ್ತು. ಆದರೆ ನಲಿ ಕಲಿ ಪದ್ಧತಿಯಲ್ಲಿ ಸ್ವರ ಮತ್ತು ವ್ಯಂಜನಾಕ್ಷರಗಳನ್ನು ಮಿಶ್ರ ಮಾಡುತ್ತ

ಅಕ್ಷರಗಳ ಗುಂಪು ಮಾಡಿಕೊಂಡು ಕಲಿಸುವ ಪ್ರಯತ್ನ ಮಾಡಲಾಗಿದೆ. ಈ ರೀತಿ ಗುಂಪುಗಳಲ್ಲಿ ಕಲಿಸುವುದರಿಂದ ಕಲಿಕೆ ಹಂತದಲ್ಲೇ ಕಲಿತ ಕೆಲವೇ ಅಕ್ಷರಗಳನ್ನು ಬಳಸಿಕೊಂಡು ಅರ್ಥಪೂರ್ಣ ಪದಗಳನ್ನು ರಚಿಸಲು ಸಹಾಯವಾಗುತ್ತದೆ. ಹಾಗಾಗಿ ಇರುವ 49 ಅಕ್ಷರಗಳನ್ನು 10 ಹಂತಗಳಲ್ಲಿ ವರ್ಗೀಕರಿಸಿದ್ದು, ಇದರಲ್ಲಿ ಕನಿಷ್ಠ 4, ಗರಿಷ್ಠ 6 ಅಕ್ಷರಗಳ ಗುಂಪುಗಳಿವೆ. ಕೆಲವು ಗುಂಪುಗಳಲ್ಲಿ ಸ್ವರ ಮತ್ತು ವ್ಯಂಜನಾಕ್ಷರಗಳು ಮಿಶ್ರವಾಗಿದ್ದರೆ, ಕೆಲವು ಗುಂಪುಗಳಲ್ಲಿ ವ್ಯಂಜನಾಕ್ಷರಗಳು ಮಾತ್ರ ಇದೆ. ಕೆಲವು ಗುಂಪುಗಳಲ್ಲಿ ಕೇವಲ ಮಹಾಪ್ರಾಣ ಅಕ್ಷರಗಳಿದ್ದರೆ, ಕೆಲವು ಗುಂಪುಗಳಲ್ಲಿ ಇತರೆ ಅಕ್ಷರಗಳೊಂದಿಗೆ ಮಹಾಪ್ರಾಣಾಕ್ಷರಗಳು ಸೇರಿವೆ. ಯೋಗವಾಹಗಳನ್ನು10ನೇ ಹಂತದಲ್ಲಿ ಸೇರಿಸಲಾಗಿದೆ.

**ಗುಣಿತಾಕ್ಷರ**

ಸಾಂಪ್ರದಾಯಿಕ ಪದ್ಧತಿಯಲ್ಲಿ ಗುಣಿತಾಕ್ಷರವನ್ನು ಕಲಿಸುವಾಗ ಒಂದು ವ್ಯಂಜನಾಕ್ಷರಕ್ಕೆ ಏಕಕಾಲದಲ್ಲೇ ಎಲ್ಲಾ ಸ್ವರ ಚಿಹ್ನೆಯನ್ನು ಅನುಕ್ರಮವಾಗಿ ಕಲಿಸಲಾಗುತ್ತಿತ್ತು. ಈ ಕ್ರಮದಿಂದ ಕಲಿಯುವ ಹಂತದಲ್ಲೇ ವರ್ಣದಿಂದ ವರ್ಣಕ್ಕೆ ಆಕಾರ, ಬರೆಯುವ ಕ್ರಮ ಹಾಗೂ ಶಬ್ಧದಲ್ಲಿನ ಭಿನ್ನತೆಯನ್ನು ಗುರುತಿಸುತ್ತಾ ಉಚ್ಛರಿಸುವ ಹಾಗೂ ಬರೆಯುವ ಕಾರ್ಯ ಮಾಡಬೇಕಾಗಿತ್ತು. ಈ ಕ್ರಮದ ಕಲಿಕೆಯಲ್ಲಿ, ಬಹುಪಾಲು ವಿದ್ಯಾರ್ಥಿಗಳು ಈ ಹಂತದಲ್ಲಿ ಶ್ರಮಪಡುವ ಜೊತೆಗೆ ಪೂರ್ಣ ಕಲಿಕೆ ಸಾಧಿಸುತ್ತಿರಲಿಲ್ಲ. ಇದರ ಪರಿಣಾಮವಾಗಿ ವಿಶೇಷವಾಗಿ ಗುಣಿತಾಕ್ಷರ ಬರವಣಿಗೆಯ ಸಂದರ್ಭದಲ್ಲಿ ದೋಷ ಕಂಡು ಬರುತ್ತಿತ್ತು.

ನಲಿ ಕಲಿ ಪದ್ಧತಿಯಲ್ಲಿ ಒಂದೊಂದು ಹಂತದಲ್ಲಿ ಎಲ್ಲಾ ವ್ಯಂಜನಾಕ್ಷರಗಳಿಗೆ ಒಂದೊಂದು ಸ್ವರ ಚಿಹ್ನೆಯನ್ನು ಹಚ್ಚುವ ಮೂಲಕ ಗುಣಿತಾಕ್ಷರವನ್ನು ಕಲಿಸಲಾಗುತ್ತದೆ. ಇದರಿಂದ ಒಂದೊಂದು ಸ್ವರ ಚಿಹ್ನೆಯನ್ನು 34 ಬಾರಿ ಹೆಸರಿಸುವ ಹಾಗೂ ಬರೆಯುವ ಚಟುವಟಿಕೆ ನಡೆಯಲಿದ್ದು ಕಲಿಕೆಯು ಪುನರ್ಬಲನವಾಗುತ್ತದೆ. ಪ್ರತಿ ಹಂತದಲ್ಲೂ ಈ ರೀತಿ ಕಲಿತ ಗುಣಿತಾಕ್ಷರಗಳನ್ನು ಬಳಸಿ ಚಿತ್ರ ಪದ, ಪದ ವಾಕ್ಯಾಂಶ, ಸಂಯುಕ್ತ ವಾಕ್ಯ ಮತ್ತು ವಾಕ್ಯ ಪುಂಜವನ್ನು ರಚಿಸಿದ್ದು ಇದರ ಮೂಲಕ ಓದುವ ಮತ್ತು ಬರೆಯುವ ಚಟುವಟಿಕೆ ಮಾಡಲಾಗುತ್ತದೆ.

**ಒತ್ತಕ್ಷರ**

ಸಾಂಪ್ರದಾಯಿಕ ಪದ್ಧತಿಯಲ್ಲಿ ಒತ್ತಕ್ಷರವನ್ನು ಕಲಿಸುವಾಗ ಮೊದಲಿಗೆ ಪ್ರತಿ ವ್ಯಂಜನಾಕ್ಷರಗಳಿಗೆ ಒತ್ತಕ್ಷರಗಳನ್ನು ಬರೆದು ಓದುವ ಮತ್ತು ಬರೆಯುವ ಚಟುವಟಿಕೆ ಮಾಡಲಾಗುತ್ತಿತ್ತು. ನಂತರ ಪದ ಅಥವಾ ವಾಕ್ಯದಲ್ಲೂ ಬರುವ ಒತ್ತಕ್ಷರ ಪದಗಳನ್ನು ಓದುವ ಮತ್ತು ಬರೆಯುವ ಚಟುವಟಿಕೆ ಮಾಡಲಾಗುತ್ತಿತ್ತು.

ನಲಿ–ಕಲಿ ಪದ್ಧತಿಯಲ್ಲಿ ಸುಲಭದಿಂದ ಸಂಕೀರ್ಣ ಎಂಬ ತತ್ವದ ಅಡಿಯಲ್ಲಿ, ಗೊತ್ತಿರುವುದರಿಂದ ಗೊತ್ತಿಲ್ಲದೆಡೆಗೆ ಎಂಬ ನಿಯಮವನ್ನು ಅನುಸರಿಸಿ ಒತ್ತಕ್ಷರವನ್ನು ಮೂರು ವರ್ಗಗಳಲ್ಲಿ ವರ್ಗೀಕರಿಸಿ ಪರಿಚಯಿಸಲಾಗುತ್ತದೆ. ಪ್ರತಿ ವರ್ಗಕ್ಕೆ ಸಂಬಂಧಿಸಿದಂತೆ ಕಲಿತ ಒತ್ತಕ್ಷರಗಳನ್ನು ಆಧರಿಸಿ ಸಜಾತಿ ಒತ್ತಕ್ಷರ ಪದಗಳು ಹಾಗೂ ಒತ್ತಕ್ಷರ ಪದದಿಂದ ಕೂಡಿದ ವಾಕ್ಯ, ವಾಕ್ಯಪುಂಜ, ಪಠ್ಯ ವಿಷಯವನ್ನು ರಚಿಸಿ ಓದುವ ಮತ್ತು ಬರೆಯುವ ಚಟುವಟಿಕೆಯನ್ನು ಅಳವಡಿಸಲಾಗಿದೆ. ಈ ರೀತಿಯಾಗಿ ಎಲ್ಲ ಒತ್ತಕ್ಷರಗಳನ್ನು ಸಜಾತಿಯಾಗಿ ಬಳಸಿ ಕಲಿತ ನಂತರ ವಿಜಾತಿ ಒತ್ತಕ್ಷರವನ್ನು ಕಲಿಸಲಾಗುತ್ತದೆ.

**ಭಾಷಾ ಬೋಧನೆಯಲ್ಲಿ ಹೊಸ ಚಿಂತನೆಯ ಅನುಕೂಲ**

- ಕಲಿತ ಕೆಲವೇ ಅಕ್ಷರಗಳನ್ನು ಬಳಸಿ ಪದಗಳನ್ನು ರಚಿಸುವ, ಓದುವ ಮತ್ತು ಬರೆಯುವ ಸಾಮರ್ಥ್ಯದ ಹೆಚ್ಚಳಕ್ಕೆ ಅವಕಾಶ
- ಕಲಿಕೆ ಜೊತೆಯಲ್ಲೇ ಕಲಿಕೆ ಅನುಭವವನ್ನು ಬಳಕೆ ಮಾಡಿಕೊಳ್ಳುವ ಮೂಲಕ ಕಲಿತ ಅಕ್ಷರಗಳ ಪುಲರ್ಬಲನಕ್ಕೆ ಅವಕಾಶ

- ಕಲಿಕೆ, ಅಭ್ಯಾಸ, ಬಳಕೆ ಮತ್ತು ಸ್ವಕಲಿಕೆ ಅಥವಾ ಮೌಲ್ಯಮಾಪನಕ್ಕೆ ಅನುಗುಣವಾಗಿ ಚಟುವಟಿಕೆಗಳ ಅಳವಡಿಕೆ, ಇದರಿಂದ ಪರಿಣಾಮಕಾರಿಯಾದ ತರಗತಿ ನಿರ್ವಹಣೆ
- ವೈವಿಧ್ಯಮಯ ಚಟುವಟಿಕೆಗಳ ಸಿದ್ಧತೆಯಿಂದ ತರಗತಿ ನಿರ್ವಗಣೆಯಲ್ಲಿ ಶಿಕ್ಷಕರ ಶ್ರಮದ ಹಂಚಿಕೆ
- ವೈವಿಧ್ಯಮಯ ಚಟುವಟಿಕೆ ಮೂಲಕ ವಿದ್ಯಾರ್ಥಿಯಲ್ಲಿ ಕಲಿಯುವ ಆಸಕ್ತಿಯ ಉನ್ನತೀಕರಣ
- ವಿದ್ಯಾರ್ಥಿಗೆ ಆರಂಭಿಕ ಹಂತದಲ್ಲೇ ವರ್ಣಮಾಲೆ ಅಥವಾ ಅಕ್ಷರ ಕಲಿಕೆಯ ಅಗತ್ಯತೆಯ ಅರಿವು
- ಪೋಷಕರಿಗೆ ಕಡಿಮೆ ಕಾಲಾವಕಾಶದಲ್ಲಿ ವಿದ್ಯಾರ್ಥಿಯಲ್ಲಾಗುವ ಕಲಿಕಾ ಪ್ರಗತಿಯ ಮನವರಿಕೆ.

ನಲಿ–ಕಲಿ ಅನುಷ್ಠಾನದ ಆರಂಭಿಕ ಹಂತದಲ್ಲಿ ವರ್ಣಮಾಲೆ, ಗುಣಿತಾಕ್ಷರ ಹಾಗೂ ಒತ್ತಕ್ಷರವನ್ನು ಕ್ರಮವಾಗಿ ಒಂದರಿಂದ ಮೂರನೇ ತರಗತಿಗೆ ನಿಗದಿಗೊಳಿಸಲಾಗಿತ್ತು. ಪ್ರಸ್ತುತ ವ್ಯವಸ್ಥೆಯಲ್ಲಿ ಒಂದನೇ ತರಗತಿಗೆ ವರ್ಣಮಾಲೆಯ ಜೊತೆಗೆ ಅರ್ಧಭಾಗದಷ್ಟು ಸ್ವರಚಿಹ್ನೆ ಅಥವಾ ಗುಣಿತಾಕ್ಷರಗಳನ್ನು ಗೊತ್ತುಪಡಿಸಲಾಗಿದೆ. ಎರಡನೇ ತರಗತಿಗೆ ಉಳಿದ ಸ್ವರ ಚಿಹ್ನೆ ಅಥವಾ ಗುಣಿತಾಕ್ಷರಗಳು ಹಾಗೂ ಒತ್ತಕ್ಷರಗಳನ್ನು ಗೊತ್ತುಪಡಿಸಲಾಗಿದೆ.

**ಕಲಿಕಾ ಗೋಪುರ**

ನಿಗದಿಪಡಿಸಿದ ಕಲಿಕಾಂಶದ ಕಲಿಕೆಯು ಒಂದೇ ಹಂತದಲ್ಲಿ ಆಗುವುದು ಸಾಧ್ಯವಿಲ್ಲ. ಅಂದರೆ ನಿಗದಿಪಡಿಸಿದ ಒಂದು ಕಲಿಕಾಂಶದ ಕಲಿಕೆಯು ವಿದ್ಯಾರ್ಥಿಯಲ್ಲಾಗಲು ಕಲಿಕೆಗೆ ಪೂರಕ ವಾತಾವರಣ, ಕಲಿಕಾಂಶದ ಮನವರಿಕೆ, ಅದರ ಅಭ್ಯಾಸ, ಪದ ಬಳಕೆ ಮತ್ತು ಮೌಲ್ಯಮಾಪನ ಹಂತಗಳನ್ನು ವ್ಯವಸ್ಥಿತವಾಗಿ ಪೂರ್ಣಗೊಳಿಸಬೇಕು. ಹಾಗಾದಾಗ ಮಾತ್ರ ಕಲಿಕೆ ಪರಿಣಾಮಕಾರಿ ಹಾಗೂ ಮನಸ್ಸಿನಲ್ಲಿ ಶಾಶ್ವತವಾಗಿ ಕೂರುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಕಲಿಕೆಯ ತತ್ತ್ವದ ಆಧಾರದಲ್ಲಿ ಕಲಿಕೆಯ ಹಂತಗಳನ್ನು ಗುರುತಿಸಲಾಗಿದೆ. ಈ ಹಂತಗಳನ್ನು ಗೋಪುರ ರೂಪದಲ್ಲಿ ಅಳವಡಿಸಿರುವುದರಿಂದ ಇದನ್ನು ಕಲಿಕಾ ಗೋಪುರ ಎಂದು ಕರೆಯಲಾಗುತ್ತದೆ (ಬೆಳ್ಳಿ ಚುಕ್ಕಿ ನಲಿ–ಕಲಿ ಸಾಹಿತ್ಯ, ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ).



**ಕಲಿಕಾ ಗೋಪುರ**

ಈ ರೀತಿಯಾಗಿ ಕಲಿಕಾ ಹಂತಗಳನ್ನು ಗುರುತಿಸಿರುವುದರಿಂದ ಅದಕ್ಕೆ ಪೂರಕವಾಗಿ ಚಟುವಟಿಕೆಗಳನ್ನು ಸಿದ್ಧಪಡಿಸಲು ಮತ್ತು ಅದರ ನಿರ್ವಹಣೆಯ ಜವಾಬ್ದಾರಿಯನ್ನು ನಿರ್ಧರಿಸಿ ಅನುಸರಿಸಲು ಸಹಾಯಕವಾಗಿದೆ.

**ಕಲಿಕಾ ಹಂತಗಳ ನಿರ್ವಹಣೆ**

ಬೊಧನಾಕಲಿಕಾ ಪ್ರಕ್ರಿಯೆಗೆ ಸಹಾಯಕವಾಗುವಂತೆ ಕಲಿಕಾ ಗೋಪುರ ಆಧಾರಿತವಾಗಿ ಕಲಿಕಾ ಹಂತಗಳನ್ನು ಗುರುತಿಸಿಕೊಳ್ಳುವ ಜೊತೆಗೆ ಪ್ರತಿ ಹಂತದ ಉದ್ದೇಶ ನಿರ್ವಹಣೆಯ ಗುಂಪು ಹಾಗೂ ನಿರ್ವಹಣೆಗೆ ಜವಾಬ್ದಾರಿಯನ್ನು ಗೊತ್ತುಪಡಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಹಂತವಾರು ಗೊತ್ತುಪಡಿಸಿರುವ ಉದ್ದೇಶ ಹಾಗೂ ನಿರ್ವಹಣೆಯ ಜವಾಬ್ದಾರಿಯನ್ನು ಆಧರಿಸಿ ಅದಕ್ಕೆ ಸಹಕಾರಿಯಾಗುವ ರೀತಿಯಲ್ಲಿ ಕಲಿಕಾ ಸಾಮಾಗ್ರಿಗಳನ್ನು ಸಿದ್ಧಪಡಿಸಲಾಗುತ್ತದೆ.

**ಕಲಿಕಾ ಸಾಮಗ್ರಿಗಳ ಪರಿಚಯ**

ನಲಿ–ಕಲಿ ಬೋಧನಾ ವಿಧಾನಕ್ಕೆ ಕಲಿಕಾ ಸಾಮಾಗ್ರಿಗಳಲ್ಲಿ ಬಹುಪಾಲು ಕಾರ್ಡ್ ರೂಪದಲ್ಲಿದ್ದರೆ ಅಭ್ಯಾಸ ಹಾಗೂ ವಾಚಕಗಳು ಪುಸ್ತಕ ರೂಪದಲ್ಲಿರುತ್ತದೆ. ಇವುಗಳನ್ನು ಶಾಲೆಗಳಿಗೆ ನೀಡಲಾಗಿದ್ದು ಅದರ ಮಾಹಿತಿ ಈ ರೀತಿಯಾಗಿದೆ.

**1. ಕಾರ್ಡ್‌ಗಳ ಪರಿಚಯ**

***ಕಾರ್ಡ್‌ಗಳ ವಿನ್ಯಾಸ:*** ಪ್ರತಿ ಕಾರ್ಡಿನ ಮೇಲ್ಭಾಗದಲ್ಲಿ ಆಯತಾಕಾರದ ಬಾಕ್ಸ್ ಇರುತ್ತದೆ. ಇದರ ಎಡ ಮೂಲೆಯ ಮನೆಯಲ್ಲಿ ಮೈಲಿಗಲ್ಲು ಮತ್ತು ಚಟುವಟಿಕೆಯ ಸಂಕೇತ ಇರುತ್ತದೆ. ಆ ಕಾರ್ಡ್ ಯಾವ ಮೈಲಿಗಲ್ಲಿನ ಯಾವ ಚಟುವಟಿಕೆ ಎಂದು ಸುಲಭವಾಗಿ ಗುರುತಿಸಬಹುದು. ಬಲ ಮೂಲೆಯಲ್ಲಿ ಕಲಿಕಾ ಏಣಿಯಲ್ಲಿನ ಮೆಟ್ಟಿಲು ಸಂಖ್ಯೆಯ ಸಹಾಯದಿಂದ ಕಲಿಕಾ ಏಣಿಯಲ್ಲಿ ಈ ಚಟುವಟಿಕೆ ಅಥವಾ ಕಾರ್ಡಿನ ಸ್ಥಾನ ಎಷ್ಟನೆಯದು ಎಂದು ತಿಳಿಯಬಹುದು. ಕಾರ್ಡಿನ ಉಳಿದ ಭಾಗದಲ್ಲಿ ಆ ಚಟುವಟಿಕೆಗೆ ಸಂಬಂಧಪಟ್ಟ ಮಾಹಿತಿ ನೀಡಲಾಗಿರುತ್ತದೆ.

***ಕಾರ್ಡಿನ ವಿಧಗಳು***

- ಶಿಕ್ಷಕರ ಬಳಕೆಯ ಕಾರ್ಡ್‌ಗಳು
- ವಿದ್ಯಾರ್ಥಿ ಬಳಕೆಯ ಕಾರ್ಡ್‌ಗಳು

**2. ವಾಚಕಗಳು**

ವಾಚಕಗಳ ಮೇಲೆ ಕಾರ್ಡಿನ ಮಾದರಿಯಲ್ಲಿ ಚಟುವಟಿಕೆ, ಮೈಲಿಗಲ್ಲು ಮತ್ತು ಮೆಟ್ಟಿಲಿನ ಮಾಹಿತಿ ಇರುತ್ತದೆ. ಒಂದನೇ ಏಣಿಗೆ ಸಂಬಂಧಿಸಿದ ವಾಚಕಗಳ ಒಳ ಪುಟದಲ್ಲಿನ ವಿಷಯವನ್ನು ಓದು ಅಥವಾ ಬರಹ ಚಟುವಟಿಕೆಯಾಗಿ ಬಳಸಲಾಗುತ್ತದೆ. ಆದರೆ ಒಳ ಪುಟಗಳಲ್ಲಿ ಬಾಕ್ಸಲ್ಲಿ ನೀಡಿರುವ ಮಾಹಿತಿಯನ್ನು ಮಕ್ಕಳ ಕಲಿಕೆಯ ಶ್ರೇಣಿಗೆ ಅನುಗುಣವಾಗಿ ಬಳಕೆ ಮಾಡಲಾಗುತ್ತದೆ. ಮಕ್ಕಳಿಗೆ ಓದುವುದಕ್ಕಾಗಿ ಈ ವಾಚಕಗಳನ್ನು ನೀಡಲು ಅವಕಾಶವಿದೆ.

**3. ಅಭ್ಯಾಸ ಪುಸ್ತಕ**

ಕಾರ್ಡಿನಲ್ಲಿರುವಂತೆ ಅಭ್ಯಾಸ ಪುಸ್ತಕದ ಪ್ರತಿ ಹಾಳೆಯಲ್ಲೂ ಚಟುವಟಿಕೆ, ಮೈಲಿಗಲ್ಲು ಮತ್ತು ಮೆಟ್ಟಿಲಿನ ಸಂಖ್ಯೆ ಇರುತ್ತದೆ. ವಿದ್ಯಾರ್ಥಿಯು ತನ್ನ ಕಲಿಕಾ ಹಂತಕ್ಕೆ ಅನುಗುಣವಾಗಿ ಅಭ್ಯಾಸದ ಹಾಳೆಯಲ್ಲಿನ ಚಟುವಟಿಕೆಯನ್ನು ಶಾಲೆಯಲ್ಲೇ ಮಾಡಬೇಕಿರುತ್ತದೆ. ಆದರೆ ಅಗತ್ಯವೆನಿಸಿದಲ್ಲಿ ಮನೆಗೆಲಸವಾಗಿಯೂ ನೀಡಲು ಅವಕಾಶವಿರುತ್ತದೆ.

**ಚಟುವಟಿಕೆಗಳ ಪರಿಚಯ**

ಕಲಿಕಾ ಗೋಪುರದಲ್ಲಿ ಗುರುತಿಸಿರುವ 6 ಹಂತಗಳಿಗೂ ಚಟುವಟಿಕೆಗಳನ್ನು ಸಿದ್ಧಪಡಿಸಲಾಗಿದ್ದು, ಚಟುವಟಿಕೆಗಳನ್ನು ಕಲಿಕಾ ಗೋಪುರ ಆಧಾರಿತವಾಗಿ ಹಂತವಾರು ಮಕ್ಕಳಿಗೆ ಪರಿಚಯಿಸಲಾಗುತ್ತದೆ.

**ಪೂರ್ವಸಿದ್ಧತಾ ಚಟುವಟಿಕೆಗಳು**

ಹಾಡು, ಕಥೆ ಹಾಗೂ ಸರಳ ಸಂಭಾಷಣೆ ಇವು ಪೂರ್ವ ಸಿದ್ಧತಾ ಚಟುವಟಿಕೆಗಳು. ಇವು ಸಾಮೂಹಿಕ ಚಟುವಟಿಕೆಗಳಾಗಿದ್ದು, ತರಗತಿಯ ಎಲ್ಲಾ ಮಕ್ಕಳನ್ನು ಒಗ್ಗೂಡಿಸಿ ಮಾಡುವ ಚಟುವಟಿಕೆಯಾಗಿರುತ್ತದೆ. ಇವು ಸಾಮೂಹಿಕ ಚಟುವಟಿಕೆಯಾಗಿದ್ದರೂ ಸಹ ಕಲಿಕಾ ಏಣಿಗೆ ಅನುಗುಣವಾಗಿ ಯಾವುದೇ ಒಂದು ಮಗು ಈ ಚಟುವಟಿಕೆಯ ಹಂತಕ್ಕೆ ಬಂದಾಗ ಮಾತ್ರ ಆ ಮಗುವನ್ನು ಗಮನದಲ್ಲಿಟ್ಟುಕೊಂಡು ಈ ಚಟುವಟಿಕೆಯನ್ನು ಮಾಡಲಾಗುತ್ತದೆ.

**ಕಲಿಕೆಗೆ ಪೂರಕ ಚಟುವಟಿಕೆಗಳು**

ಚಿತ್ರ ಸಹಿತ ಪದ ಹಾಗೂ ಸಾಧನಕ್ಕೆ ತಕ್ಕ ಹಾಡು ಇವು ಕಲಿಕೆಗೆ ಪೂರಕ ಚಟುವಟಿಕೆಯಾಗಿದ್ದರೂ ಸಹ ಸಾಮೂಹಿಕ ಚಟುವಟಿಕೆಯಾಗಿರುತ್ತದೆ. ಇವುಗಳನ್ನು ಅವಧಿಯ ಆರಂಭದಲ್ಲೇ ಮಾಡಬೇಕಿದೆ. ಆದರೆ ಕ್ರಾಫ್ಟ್, ಚಿತ್ರರೈಲು, ಅಕ್ಷರ ರೈಲು, ಆಕಾರ ಗುರುತಿಸುವ ಪಟ್ಟಿ ಹಾಗೂ ಜಾರುಪಟ್ಟಿ ಇವು ಕಲಿಕೆಗೆ ಪೂರಕ ಚಟುವಟಿಕೆಯಾಗಿದ್ದರೂ, ಗುಂಪು ಚಟುವಟಿಕೆಗಳಾಗಿವೆ. ಹಾಗಾಗ ಕಲಿಕಾ ಏಣಿಗೆ

ಅನುಗುಣವಾಗಿ ಆಯಾಯ ಚಟುವಟಿಕೆಯ ಹಂತಕ್ಕೆ ಬಂದ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಆಯಾಯ ಚಟುವಟಿಕೆಗಳನ್ನು ಮಾಡಿಸಲಾಗುತ್ತದೆ.

**ಸಾಮೂಹಿಕ ಚಟುವಟಿಕೆ**

- ಚಿತ್ರಸಹಿತ ಪದ
- ಸಾಧನಕ್ಕೆ ತಕ್ಕ ಹಾಡು

**ಗುಂಪು ಚಟುವಟಿಕೆ**

- ಕ್ರಾಫ್ಟ್
- ಚಿತ್ರ ರೈಲು
- ಅಕ್ಷರ ರೈಲು
- ಆಕಾರ ಗುರುತಿಸುವ ಅಕ್ಷರ ಪಟ್ಟಿ
- ಜಾರುಪಟ್ಟಿ

**ಕಲಿಕಾಂಶ ಚಟುವಟಿಕೆಗಳು**

ಇವು ಗುಂಪು ಚಟುವಟಿಕೆಯಾಗಿದ್ದು ಕಲಿಕಾ ಏಣಿಗೆ ಅನುಗುಣವಾಗಿ ಸಂಬಂಧಿಸಿದ ಚಟುವಟಿಕೆಯ ಹಂತಕ್ಕೆ ಬಂದ ವಿದ್ಯಾರ್ಥಿಗಳಿಗೆ ಆಯಾಯ ಚಟುವಟಿಕೆಗಳನ್ನು ಮಾಡಿಸಲಾಗುತ್ತದೆ. ಈ ಚಟುವಟಿಕೆಗಳು ಸಂಪೂರ್ಣ ಶಿಕ್ಷಕರ ಸಹಾಯದಿಂದ ನಡೆಯುವುದಾಗಿರುತ್ತದೆ. ಶಿಕ್ಷಕರು ಈ ಹಂತದಲ್ಲಿ ಬರುವ ಕಲಿಕಾಂಶವನ್ನು ವಿದ್ಯಾರ್ಥಿಗೆ ನೇರವಾಗಿ ಮನವರಿಕೆ ಮಾಡುವ ಮೂಲಕ ವಿದ್ಯಾರ್ಥಿಯು ಮುಂದಿನ ಹಂತದ ಚಟುವಟಿಕೆಯನ್ನು ಸ್ವತಂತ್ರವಾಗಿ ನಿರ್ವಹಿಸಲು ಸಮರ್ಥರಾಗುವಂತೆ ಮಾಡಬೇಕಾದುದು ಆದ್ಯ ಕರ್ತವ್ಯವಾಗಿರುತ್ತದೆ.

- ರಬ್ಬರ್ ಅಕ್ಷರ
- ಅಕ್ಷರ ಬರವಣಿಗೆ
- ಸ್ವರ ಚಿಹ್ನೆ ಪರಿಚಯ
- ಒತ್ತಕ್ಷರ ಬರವಣಿಗೆ
- ಸನ್ನಿವೇಶ ರಚನೆ

**ಸ್ವ ಕಲಿಕೆ ಅಥವಾ ಮೌಲ್ಯಮಾಪನ ಚಟುವಟಿಕೆ**

ಇದು ಐದನೇ ಗುಂಪಿನಲ್ಲಿ ನಡೆಯುವ ಚಟುವಟಿಕೆಯಾಗಿದೆ. ಕಲಿಕಾ ಏಣಿಗೆ ಅನುಗುಣವಾಗಿ ಸಂಬಂಧಿಸಿದ ಚಟುವಟಿಕೆಯ ಹಂತಕ್ಕೆ ಬಂದ ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ಚಟುವಟಿಕೆ ಮಾಡಿಸುವುದೇ ಆಗಿದೆ.

- ವರ್ಣಮಾಲೆ
- ನೆನಪಿನ ಆಟ
- ನನ್ನ ಸಾಧನೆ
- ವಾಚಕಗಳು
- ಸಮಗ್ರ ಮೌಲ್ಯಮಾಪನ

**ಗುಂಪು ರಚನಾ ತಟ್ಟೆ**

ಯಾವ ಚಟುವಟಿಕೆ, ಯಾವ ಗುಂಪಿನಲ್ಲಿ, ಯಾರ ಮಾರ್ಗದರ್ಶನದಲ್ಲಿ ನಡೆಯುತ್ತದೆ ಎಂದು ನಿರ್ಧರಿಸಿ ಸಿದ್ಧಪಡಿಸಿರುವ ಕಾರ್ಡ್ಗಳೇ ಪುಂಪು ರಚನಾ ತಟ್ಟೆಗಳಾಗಿವೆ. 1 ಮತ್ತು 2ನೇ ತರಗತಿಯನ್ನು ಒಳಗೊಂಡಂತೆ ಭಾಷೆ ಮತ್ತು ಗಣಿತ ವಿಷಯಕ್ಕೆ ಸಂಬಂಧಿಸಿದಂತೆ ತಲಾ ಐದು ಗುಂಪು ರಚನಾ ತಟ್ಟೆಗಳಿವೆ. ಒಂದು ಮತ್ತು ಎರಡನೇ ತರಗತಿ ಪರಿಸರ ಅಧ್ಯಯನದ ಎಲ್ಲಾ ಚಟುವಡಿಕೆಗಳು ಸಾಮೂಹಿಕವಾಗಿ ನಡೆಯುವುದರಿಂದ ಗುಂಪು ರಚನಾ ತಟ್ಟೆ ಇರುವುದಿಲ್ಲ.

**ಗುಂಪು ರಚನಾ ತಟ್ಟೆಗಳ ಅನುಕೂಲಗಳು**

- ಯಾವ ಚಟುವಟಿಕೆ ಯಾವ ಗುಂಪಿನಲ್ಲಿ ಯಾರ ಮಾರ್ಗದರ್ಶನದಲ್ಲಿ ನಡೆಯುತ್ತದೆ ಎಂದು ತಿಳಿಯಲು
- ಗೊತ್ತುಪಡಿಸಿದ ಚಟುವಟಿಕೆಯು ಗೊತ್ತುಪಡಿಸಿದ ಗುಂಪಿನಲ್ಲೇ ನಡೆಯುವಂತೆ ನಿಗಾವಹಿಸಲು
- ಗೆಳೆಯರ ಸಹಾಯದ ಗುಂಪಿನಲ್ಲಿ ಯಾರಿಗೆ, ಯಾರಿಂದ ಯಾವ ಪ್ರಮಾಣದ ಮಾರ್ಗದರ್ಶನ ನೀಡಬೇಕೆಂದು ತಿಳಿಯಲು
- ವಿದ್ಯಾರ್ಥಿಗಳು ಸ್ವತಂತ್ರವಾಗಿ ತಮ್ಮ ಕಲಿಕಾ ಮಟ್ಟಕ್ಕನುಗುಣವಾಗಿ ಕಲಿಕಾ ಸಾಮಾಗ್ರಿಯನ್ನು ತೆಗೆದುಕೊಂಡು ಸಂಬಂಧಿಸಿದ ಗುಂಪಿನಲ್ಲಿ ಕುಳಿತು ಚಟುವಟಿಕೆ ನಿರ್ವಹಿಸಲು

- ಮಕ್ಕಳ ಕಲಿಕಯ ಮೇಲ್ವಿಚಾರಣೆ ಮಾಡುವ ಜೊತೆಗೆ ಮಾರ್ಗದರ್ಶನ ನೀಡಲು
- ಬಹುವರ್ಗ ಮತ್ತು ಬಹುಹಂತದ ಬೊಧನಾ ಪ್ರಕ್ರಿಯೆಯನ್ನು ವ್ಯವಸ್ಥಿತವಾಗಿ ನಿರ್ವಹಿಸಲು
- ಎರಡೂ ತರಗತಿಯ ವಿದ್ಯಾರ್ಥಿಗಳು ಅವರವರ ಕಲಿಕಾ ಮಟ್ಟಕ್ಕೆ ಅನುಗುಣವಾಗಿ ಗೊತ್ತುಪಡಿಸಿರುವ ಕಲಿಕಾ ಸಾಮಾಗ್ರಿಯೊಂದಿಗೆ ಕಲಿಕಾ ಕ್ರಿಯೆಯಲ್ಲಿ ತೊಡಗಲು ಸಹಕಾರಿಯಾಗುವಂತೆ ಗೊತ್ತುಪಡಿಸಿದ ಅಥವಾ ಅಗತ್ಯವಿರುವ ಮಾರ್ಗದರ್ಶನ ದೊರೆಯುವ ಗುಂಪಿನಲ್ಲಿ ಗೊಂದಲವಿಲ್ಲದೆ ಶೀಘ್ರವಾಗಿ ಕುಳಿತುಕೊಳ್ಳುವಂತೆ ಮಾಡಲು.

**ಪ್ರಗತಿಯ ದಾಖಲೆ ಮತ್ತು ಫಲಿತಾಂಶ ಘೋಷಣೆ**

ಚಿತ್ರ ಸಹಿತ ಕಲಿಕಾ ಏಣಿಯಲ್ಲಿ ಚಟುವಟಿಕೆಯನ್ನು ಕ್ರಮಾನುಗತವಾಗಿ ಜೋಡಿಸಲಾಗಿದೆ. ಇದನ್ನು ಆಧರಿಸಿ ಪ್ರತಿ ವಿದ್ಯಾರ್ಥಿ ಕಲಿಯಬೇಕಾಗುತ್ತದೆ. ಆದರೆ ಎಲ್ಲಾ ವಿದ್ಯಾರ್ಥಿಗಳ ಕಲಿಕೆಯ ವೇಗ ಒಂದೇ ಆಗಿಲ್ಲದಿರುವುದರಿಂದ ಅವರವರ ಕಲಿಕೆಯ ವೇಗಕ್ಕೆ ಅನುಗುಣವಾಗಿ ಕಲಿಕೆಯಲ್ಲಿ ತೊಡಗಬೇಕಾಗಿದೆ. ಇದರಿಂದಾಗಿ ಮಕ್ಕಳ ಪ್ರಗತಿಯನ್ನು ಚಟುವಟಿಕೆಯ ಕೊನೆಯಲ್ಲಿ ಗುರುತಿಸಬೇಕಾಗಿದೆ. ಅಂತೆಯೇ ಶೈಕ್ಷಣಿಕ ವರ್ಷದ ಕೊನೆಯಲ್ಲಿ ವಿದ್ಯಾರ್ಥಿಯ ಸಾಧನೆಯನ್ನು ಘೋಷಿಸಲು ದಾಖಲೆಯ ಅಗತ್ಯವಿದೆ. ಇದಕ್ಕಾಗಿ ಪ್ರಗತಿ ನೋಟವನ್ನು ಸಿದ್ಧಪಡಿಸಲಾಗಿದೆ.

**ಪ್ರಗತಿ ನೋಟದ ಸಿದ್ಧತೆ**

- ಶೈಕ್ಷಣಿಕ ವರ್ಷದ ಪ್ರಾರಂಭದಲ್ಲೇ 1 ಮತ್ತು 2ನೇ ತರಗತಿ ಪ್ರಗತಿ ನೋಟವನ್ನು ಎ3 ಅಳತೆಯ ಹಾಳೆಯಲ್ಲಿ ಸಿದ್ಧಪಡಿಸಬೇಕು.
- ಮೆಟ್ಟಿಲುಗಳ ಸಂಖ್ಯೆ ಹೆಚ್ಚು ಇರುವುದರಿಂದ ಅಗತ್ಯಕ್ಕೆ ತಕ್ಕಂತೆ ಹೆಚ್ಚು ಹಾಳೆಗಳನ್ನು ಬಳಸುವುದು.
- ಪ್ರತಿ ಪ್ರಗತಿ ನೋಟದಲ್ಲಿ ತರಗತಿಯಲ್ಲಿರುವ ಮಕ್ಕಳ ಸಂಖ್ಯೆಗಿಂತ ಹೆಚ್ಚು ಮಕ್ಕಳ ಹೆಸರನ್ನು ಬರೆಯಲು ಹೆಚ್ಚುವರಿ ಅವಕಾಶ ಮಾಡಿಕೊಂಡಿರುವುದು.
- ಪ್ರಗತಿ ನೋಟದಲ್ಲಿ ಮೈಲಿಗಲ್ಲುಗಳನ್ನು ಬರೆಯುವ ಜೊತೆಗೆ ಮಾಹೆಯಾನ ಹಂಚಿಕೆಗೆ ಅನುಗುಣವಾಗಿ ತಿಂಗಳನ್ನು ನಮೂದಿಸುವುದು.
- ಪ್ರಗತಿ ನೋಟದಲ್ಲಿ ಮೆಟ್ಟಿಲು ಸಂಖ್ಯೆಗಳ ಮೇಲೆ ಸಂಬಂಧಿಸಿದ ಸಂಕೇತ ಹಚ್ಚುವುದರಿಂದ ವಿದ್ಯಾರ್ಥಿಯು ತನ್ನ ಮೆಟ್ಟಿಲು ತಿಳಿಯುವ ಜೊತೆಗೆ ತಾನು ನಿರ್ವಹಿಸಬೇಕಾದ ಚಟುವಟಿಕೆಯ ಸಂಕೇತ ತಿಳಿಯಲೂ ಸಹಾಯವಾಗುತ್ತದೆ.
- ಪ್ರಗತಿ ನೋಟದಲ್ಲಿ ಸಾಮೂಹಿಕ ಚಟುವಟಿಕೆಗಳನ್ನು ಕೆಂಪು ಬಣ್ಣದ ಶಾಹಿಯಿಂದ ಗುರುತಿಸುವುದರಿಂದ ಮಾಡಬೇಕಾದ ಸಾಮೂಹಿಕ ಚಟುವಟಿಕೆಗಳನ್ನು ಸುಲಭವಾಗಿ ಗುರುತಿಸಿಕೊಳ್ಳಬಹುದು.

**ನಲಿ–ಕಲಿ ಬೋಧನಾ ವಿಧಾನದಲ್ಲಿರುವ ಸವಾಲುಗಳು**

ನಲಿ–ಕಲಿ ಬೋಧನಾ ವಿಧಾನದಲ್ಲಿ 1 ರಿಂದ 4ನೇ ತರಗತಿ ಮಕ್ಕಳನ್ನು ಒಂದೇ ತರಗತಿಯಲ್ಲಿ ಕೂರಿಸಿಕೊಂಡು ಚಟುವಟಿಕೆ ಮಾಡಲಾಗುತ್ತದೆ. ಅದರ ಬದಲಾಗಿ 1 ಮತ್ತು 2ನೇ ತರಗತಿಯ ಮಕ್ಕಳು ಹಾಗೂ 3 ಮತ್ತು 4ನೇ ತರಗತಿ ಮಕ್ಕಳನ್ನು ಒಟ್ಟಿಗೆ ಕೂರಿಸಿ ಚಟುವಟಿಕೆ ಕೈಗೊಂಡರೆ ಮತ್ತಷ್ಟು ಗುಣಮಟ್ಟದ ಶಿಕ್ಷಣ ನೀಡಲು ಸಾಧ್ಯವಾಗುತ್ತದೆ. ನಲಿ–ಕಲಿ ಶಿಕ್ಷಣದಲ್ಲಿ ಕೇವಲ ಚಟುವಟಿಕೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತದೆ. ಅದರ ಜೊತೆಗೆ ಬರವಣಿಗೆಗೂ ಪ್ರಾಮುಖ್ಯತೆ ನೀಡಿದರೆ ಉತ್ತಮ ಎಂಬುದು ಶಿಕ್ಷಕರ ಅಭಿಪ್ರಾಯವಾಗಿದೆ.

ಸರ್ಕಾರ ಇತ್ತೀಚೆಗೆ ಸರ್ಕಾರದ ಮೇಲಿನ ಆರ್ಥಿಕ ಹೊರೆಯನ್ನು ಕಡಿಮೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಅರೆಕಾಲಿಕ ಶಿಕ್ಷಕರನ್ನು ಮಾತ್ರವೇ ನೇಮಕ

ಮಾಡಿಕೊಳ್ಳುತ್ತಿದೆ. ಅದರ ಬದಲಾಗಿ ಪೂರ್ಣಕಾಲಿಕ ಶಿಕ್ಷಕರನ್ನು ನೇಮಕ ಮಾಡಿಕೊಂಡರೆ ಮಕ್ಕಳ ಕಲಿಕೆ ಹಾಗೂ ನಿರಂತರ ಮೌಲ್ಯಮಾಪನ ಮಾಡಲು ಅನುಕೂಲವಾಗುತ್ತದೆ. ಅಲ್ಲದೇ, ತರಗತಿವಾರು ಶಿಕ್ಷಕರು ಮತ್ತು ಪ್ರತ್ಯೇಕ ಕೊಠಡಿ ವ್ಯವಸ್ಥೆ ಮಾಡುವುದರಿಂದ ಬೋಧನೆಗೆ ಮತ್ತಷ್ಟು ಗಮನ ನೀಡಲು ಸಾಧ್ಯವಾಗುತ್ತದೆ ಎಂಬುದಾಗಿ ಶಿಕ್ಷಕರು ಹೇಳುತ್ತಾರೆ.

ನಲಿ–ಕಲಿ ಬೋಧನಾ ವ್ಯವಸ್ಥೆಯಲ್ಲಿ ಕಾರ್ಡಿನ ಅಭ್ಯಾಸದ ಜೊತೆಗೆ ಕಪ್ಪುಹಲಗೆ ಬರಹಕ್ಕೆ ಹೆಚ್ಚಿನ ಒತ್ತು ನೀಡುವ ಅಗತ್ಯವಿದೆ. ಅಲ್ಲದೇ, ಪ್ರಾಥಮಿಕ ಶಾಲಾ ಮಕ್ಕಳಿಗೆ ಕೈಗೊಳ್ಳುವ ಎಲ್ಲಾ ಆಟಗಳು, ಹಾಡುಗಳು, ಚಟುವಟಿಕೆಗಳನ್ನು ಪುಸ್ತಕ ರೂಪದಲ್ಲಿ ಇಲ್ಲದೇ ಇರುವುದು ಬಹು ದೊಡ್ಡ ಸವಾಲಾಗಿದೆ. ಏಕೆಂದರೆ ಪ್ರತಿಯೊಬ್ಬ ಶಿಕ್ಷಕರೂ ಅವರದೇ ಆದ ರೀತಿಯಲ್ಲಿ ಕಲಿಸುತ್ತಾರೆ. ಹಾಗಾಗಿ ಶಿಕ್ಷಣದಲ್ಲಿ ಏಕರೂಪತೆ ಎಂಬುದು ಇಲ್ಲದೇ ಇರುವುದನ್ನು ಸಂಶೋಧನಾ ಅಭ್ಯರ್ಥಿಯ ಗಮನಕ್ಕೆ ಬಂದಿರುತ್ತದೆ.

**ಉಪಸಂಹಾರ**

ಕರ್ನಾಟಕ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಉಲ್ಲಾಸದಾಯಕ ಕಲಿಕಾ ಬೋಧನೆ: ನಲಿ–ಕಲಿ ಕಾರ್ಯಕ್ರಮದ ಅಧ್ಯಯನದಲ್ಲಿ ನಲಿ–ಕಲಿ ಬೋಧನಾ ವಿಧಾನದ ಕುರಿತು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಯಾವುದೇ ಬೋಧನಾ ವಿಧಾನವೂ ಪರಿಪೂರ್ಣವಾಗಿರುವುದಿಲ್ಲ ಎಂಬುದು ಕಟುವಾಸ್ತವದ ಸಂಗತಿ. ಅದೇ ರೀತಿ ನಲಿ–ಕಲಿ ಬೋಧನಾ ವಿಧಾನದಲ್ಲೂ ಸಾಕಷ್ಟು ಸವಾಲುಗಳನ್ನು ಇಂದಿಗೂ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳು ಅನುಭವಿಸುತ್ತಿವೆ. ಈ ಎಲ್ಲಾ ಸವಾಲುಗಳ ಹೊರತಾಗಿಯೂ ನಲಿ–ಕಲಿ ಬೋಧನಾ ವಿಧಾನವು ನವೀನ ಮಾದರಿಯದ್ದಾಗಿದ್ದು, ಮಕ್ಕಳು ಸ್ವಕಲಿಕೆ, ಸ್ವವೇಗದ ಕಲಿಕೆ, ಸಂತಸದ ಕಲಿಕೆಗೆ ಹೆಚ್ಚಿನ ಒತ್ತು ನೀಡುತ್ತಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ರಾಜ್ಯದಲ್ಲಿ 20,000ಕ್ಕೂ ಅಧಿಕ ಏಕಶಿಕ್ಷಕ ಶಾಲೆಗಳಿದ್ದು, ಆ ಶಾಲೆಗಳಲ್ಲಿ ಮಕ್ಕಳ ಕಲಿಕೆಗೆ ಹಾಗೂ ಶಿಕ್ಷಕರ ಬೋಧನಾ ಹೊರೆಯನ್ನು ಕಡಿಮೆ ಮಾಡುವ ನಿಟ್ಟಿನಲ್ಲಿ ಈ ಬೋಧನಾ ವಿಧಾನ ಸಾಕಷ್ಟು ಸಹಕಾರಿಯಾಗಿದೆ. ಕೆಲವೊಂದು ಸವಾಲುಗಳನ್ನು ನಿವಾರಿಸುವ ನಿಟ್ಟಿನಲ್ಲಿ ಸರ್ಕಾರದ ಜೊತೆಗೆ ಪೋಷಕ ಸಮುದಾಯವೂ ಕೈಜೋಡಿಸಿದಲ್ಲಿ ನಲಿ–ಕಲಿ ಬೋಧನಾ ವಿಧಾನ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವುದರಲ್ಲಿ ಯಾವುದೇ ಅನುಮಾನವೇ ಇಲ್ಲ. ಈ ನಿಟ್ಟಿನಲ್ಲಿ ನಲಿ–ಕಲಿ ಬೋಧನಾ ವಿಧಾನ ಮಕ್ಕಳ ಕಲಿಕೆಯನ್ನು ಸಂತಸದಾಯಕ ಹಾಗೂ ಉಲ್ಲಾಸದಾಯಕ ಮಾಡಿರುವುದಲ್ಲಿ ಯಾವುದೇ ಅನುಮಾನವಿಲ್ಲ.

**ಪರಾಮರ್ಶನ ಗ್ರಂಥಗಳು**


- *ಬೆಳ್ಳಿ ಚುಕ್ಕಿ ನಲಿ–ಕಲಿ ಶಿಕ್ಷಕರ ಕೈಪಿಡಿ.* (2010). ಸರ್ವ ಶಿಕ್ಷಣ ಅಭಿಯಾನ. ಕರ್ನಾಟಕ ಸರ್ಕಾರ.
- *ನಲಿ–ಕಲಿ.* ರಾಜ್ಯ ಶಿಕ್ಷಣ ಮತ್ತು ತರಬೇತಿ ಇಲಾಖೆ.
- Annigeri V.B., A.R. Kulakarni., D.R.Revankar. (2010). *Evalution of Effectiveness of NaliKali Program in Karnataka.* CMDR
- *Handbook of Joyful learning.* (2020). CBSE.
- Padmaja, R. (2013, April). Nali-Kali in Primary school in Karnataka. *Azim Premji University Learning Curve.*
- Rajesh Raj S.N., Kunal Sen., Vinod B. Annigeri., Arun K. Kulkarni., D.R. Revankar. (2015). Joyful learning? The effects of a school intervention on learning outcomes in Karnataka. *International Journal of Educational Development.* 40. 83-195
- Umashanker Periodi. (2020, August). Nali-Kali: A Step Towards Quality Education for All. *Azim Premji University Learning Curve.*

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 58-63
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಹೊಸಕೋಟೆ ತಾಲೂಕಿನ ನಂದಗುಡಿಯ ಕಾಡುಮಲ್ಲೇಶ್ವರ ದೇವಾಲಯ: ಒಂದು ಅವಲೋಕನ

**ಡಾ. ಸುಷ್ಮಾ ಹೆಚ್**
ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಮಹಿಳಾ ಕಾಲೇಜು, ದೊಡ್ಡಬಳ್ಳಾಪುರ.

***Abstract:***
*ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲೂಕುಗಳಲ್ಲಿ ಒಂದಾದ ಹೊಸಕೋಟೆಯ ಬೆಂಗಳೂರು ನಗರದಿಂದ 27 ಕಿ.ಮೀ. ದೂರವಿದ್ದು, ಹಳೆಯ ಮದ್ರಾಸ್ ರಸ್ತೆಯಲ್ಲಿದೆ. ಹೊಸಕೋಟೆ ತಾಲೂಕಿನ ನಂದಗುಡಿ 9 ನೇ ಶತಮಾನದಿಂದಲೂ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಐತಿಹಾಸಿಕ ಸ್ಥಳವಾದ ನಂದಗುಡಿಯಲ್ಲಿ ಕಾಡುಮಲ್ಲೇಶ್ವರು ದೇವಾಲಯವಿದೆ. ಈ ದೇವಾಲಯದ ಆವರಣದಲ್ಲಿ ಮೂರು ಪ್ರಾಚೀನ ದೇವಾಲಯಗಳಿವೆ. ಕಾಡುಮಲ್ಲೇಶ್ವರ ದೇವಾಲಯ, ಬಸಪ್ಪನಗುಡಿ, ಸೋಮೇಶ್ವರಗುಡಿ. ನೊಳಂಬರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿದ್ದು ಈ ಗುಡಿಗಳು ನೊಳಂಬರ ಕಾಲದ್ದಾಗಿದೆ. ನಂತರದಲ್ಲಿ ಸಗಟೂರು ಪಾಳೆಗಾರರ ಕಾಲದಲ್ಲಿ ದೇವಾಲಯ ನಿರ್ಮಿಸಲಾಗಿದೆ.*

***Keywords:*** *ಅಮೃತ ಮಲ್ಲಿಕಾರ್ಜುನ ಲಿಂಗ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಕಂಭ*

**ಪೀಠಿಕೆ**

ಹೊಸಕೋಟೆ ಮತ್ತು ಸುತ್ತಮುತ್ತಲಿನ ಪ್ರದೇಶವು ಗಂಗರು, ನೊಳಂಬರು, ಚೋಳರು, ಹೊಯ್ಸಳರು, ಸಗಟೂರು ಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು. ರಣದುಲ್ಲಾಖಾನನ ದಾಳಿ ನಂತರ ಇಡೀ ಬೆಂಗಳೂರು ಮತ್ತು ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳ ಆಡಳಿತ ಸ್ವರೂಪವು ಬದಲಾವಣೆಯಾಯಿತು. ಷಹಾಜಿಯು ಬೆಂಗಳೂರನ್ನು ಜಹಗೀರಾಗಿ ಪಡೆದಾಗ ಹೊಸಕೋಟೆಯು ಈ ಜಹಗೀರಿನ ಭಾಗವಾಗಿತ್ತು. ಈ ಸಂದರ್ಭದಲ್ಲಿಯೇ ಅವಿಮುಕ್ತೇಶ್ವರ ದೇವಾಲಯದ ಮುಂಭಾಗದಲ್ಲಿ ಮರಾಠ ಶೈಲಿಯ ದೀಪಸ್ತಂಭ ಹಾಕಿಸಲಾಯಿತು. ಹೊಸಕೋಟೆ ಪ್ರದೇಶವು ಶಿವಾಜಿಯ ಸ್ವರಾಜ್‌ನ ಭಾಗವಾಗಿಯೂ ಮುಂದುವರೆಯಿತು.

ನಂದಗುಡಿಯು 9ನೇ ಶತಮಾನದಿಂದಲೂ ಪ್ರಮುಖ ಆಡಳಿತ ಕೇಂದ್ರವಾಗಿತ್ತು. 10ನೇ ಶತಮಾನದಿಂದ ನಿರಂತರವಾಗಿ ಶಾಸನಗಳಲ್ಲಿ ಈ ಊರು ಕಾಣಿಸಿಕೊಂಡಿದೆ. ಶಾಸನಗಳಲ್ಲಿ ನಂದುಕುಳಿ[1], ನಂದಿಗೋಳಿ[2], ನಂಜಿಗುಳಿ[3], ನಂದನಗುಳಿ ನಾಡು[4], ನಲ್ಲೂರು ರಾಜ್ಯಕ್ಕೆ ಸೇರಿದ ನಂದಗುಳಿ ಸ್ಥಳ[5], ನಂದುಗಳಿ ಹೋಬಳಿ[6] ಎಂದು

---

[1] ಬಿ.ಎಲ್.ರೈಸ್. (1905). *ಎಪಿಗ್ರಾಫಿಯಾ ಕರ್ನಾಟಿಕ.* ಸಂ–09, ಮೈಸೂರು ಸರ್ಕಾರ ಕೇಂದ್ರೀಯ ಮುದ್ರಣಾಲಯ. Ht-36, AD-1065

[2] ಮೇಲಿನದೇ, Ht-37, AD-950

[3] ಮೇಲಿನದೇ, Ht-01, 02, AD-1559

[4] ಮೇಲಿನದೇ, Ht-50, AD-1379

[5] ಮೇಲಿನದೇ, Ht-28, AD-1530

[6] ಮೇಲಿನದೇ, Ht-16

***Please cite this article as:*** ಸುಷ್ಮಾ ಹೆಚ್. (2024). ಹೊಸಕೋಟೆ ತಾಲೂಕಿನ ನಂದಗುಡಿಯ ಕಾಡುಮಲ್ಲೇಶ್ವರ ದೇವಾಲಯ: ಒಂದು ಅವಲೋಕನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 58–63

ಕಾಲಕಾಲಕ್ಕೆ ಉಲ್ಲೇಖಗೊಂಡಿದೆ. ನಂದಗುಳಿಯು ಕೈವಾರ ನಾಡಿನ ಭಾಗವಾಗಿದ್ದು[7] ನೊಳಂಬರ ಆಳ್ವಿಕೆಯಲ್ಲಿ ಮಿಯಬಸಪ್ಪನ ನಿಯಂತ್ರಣದಲ್ಲಿತ್ತು. ಕೈವಾರ ನಾಡು ಮತ್ತು ನಕ್ಕುಂದಿ ನಾಡಿನ ಆಡಳಿತಗಾರನಾದ ಈರವ ನೊಳಂಬರಾಜನು ನಂದಿಗೋಳಿಯ ಗಾವುಂಡ– – – ಮಿಯ ಬಸಪ್ಪನಿಗೆ, (ಹೆಸರು ತ್ರುಟಿತವಾಗಿದೆ) ತನ್ನ ಆಳ್ವಿಕೆಗೆ ಒಳಪಡುವ ಕೈವಾರನಾಡು ಮತ್ತು ನೆಕ್ಕುಂದಿ ನಾಡಿನ ಎಲ್ಲಾ ದೇವಾಲಯಗಳ ನಿರ್ವಹಣೆಯ ಜವಾಬ್ದಾರಿಯನ್ನು ನೀಡಿದ್ದಾನೆ.[8] ನಂದಕುಳಿಯ ಬ್ರಾಹ್ಮಣ ಕಣವಯ್ಯನ್ ಈರುಗಯ್ಯನು, ಈರವಿ–ಸಂದಿರ–ಈರುಗೇಶ್ವರಂ ಅಲಿಯಾಸ್ ಸೋಮೆಶ್ವರಂ ಉದ್ಯೆಯಾರ ದೇವಾಲಯವನ್ನು ಹೊಸಹಳ್ಳಿಯಲ್ಲಿ ಮಾಡಿಸಿದ್ದಾನೆ.[9]

ಕಾಡುಮಲ್ಲೇಶ್ವರ ದೇವಾಲಯದ ಆವರಣದಲ್ಲಿ ಮೂರು ಪ್ರಾಚೀನ ದೇವಾಲಯಗಳಿವೆ. ಕಾಡುಮಲ್ಲೇಶ್ವರ ದೇವಾಲಯ, ಬಸಪ್ಪನಗುಡಿ, ಸೋಮೇಶ್ವರಗುಡಿ. ಸ್ಥಳೀಯರು ಹೇಳುವಂತೆ ಇಲ್ಲಿಗೆ 30–40 ವರ್ಷಗಳ ಹಿಂದಿನವರೆಗೂ ಇಲ್ಲಿ ಐದು ಗುಡಿಗಳು ಇದ್ದವಂತೆ. ಇಂದು ಉಳಿದಿರುವುದು ಮೂರು ಗುಡಿಗಳು ಮಾತ್ರ. ಕಾಡುಮಲ್ಲೇಶ್ವರನ ಎಡಭಾಗದ ಪುಟ್ಟಗುಡಿಯಲ್ಲಿ ಪಾರ್ವತಿ ಅಮ್ಮನವರನ್ನು ಇತ್ತೀಚೆಗೆ ಪ್ರತಿಷ್ಠಾಪಿಸಲಾಗಿದೆ. ದೇವನಹಳ್ಳಿಯ ತಬ್ಲಿಂಗೇಶ್ವರ ದೇವಾಲಯ, ಐಗಂಡಪುರದ ದೇವಾಲಯಗಳಂತೆ ಇಲ್ಲಿಯೂ ಐದು ಲಿಂಗಗಳು ಇದ್ದಿರಬಹುದು. ಇವು ಪಾಂಡವರ ಗುಡಿಗಳಾಗಿದ್ದಿರಬಹುದು. ನೊಳಂಬರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟಿದ್ದು ಈ ಗುಡಿಗಳು ನೊಳಂಬರ ಕಾಲದ್ದಾಗಿದೆ. ನಂತರದಲ್ಲಿ ಸಗಟೂರು ಪಾಳೆಗಾರರ ಕಾಲದಲ್ಲಿ ದೇವಾಲಯ ನಿರ್ಮಿಸಲಾಗಿದೆ.

ಈ ಕಾಡುಮಲ್ಲೇಶ್ವರ ಲಿಂಗವು ಸಗಟೂರು ನಾಡಪ್ರಭು ತಿಮ್ಮಪ್ಪಗೌಡನ ಕಾಲದಲ್ಲಿ ಅಮ್ರುತ ಮಲ್ಲಿಕಾರ್ಜುನ ಲಿಂಗವಾಗಿತ್ತು.[10] ಮಲ್ಲಿಕಾರ್ಜುನನು ವೀರಶೈವ ಧರ್ಮದ ಪ್ರಭಾವದಿಂದ ಮಲ್ಲೇಶ್ವರನಾಗಿದ್ದು ದೇವಾಲಯವು ಕಾಡಿನ ಅಂಚಿನಲ್ಲಿರುವುದರಿಂದ ಕಾಡುಮಲ್ಲೇಶ್ವರ ಎಂದು ಹೆಸರು ಪಡೆದಿದೆ. ಕ್ರಿ.ಶ.1559ರ ಸದಾಶಿವರಾಯನ ಹೆಸರಿನಲ್ಲಿನ ಶಾಸನವನ್ನು ಸಗಟೂರು ತಿಮ್ಮಪ್ಪಗೌಡನು ಹಾಕಿಸಿದ್ದು ತಮ್ಮ ತಂದೆ–ತಾಯಿಗಳಿಗೆ ಗುರುದೈವಕ್ಕೆ ಪುಣ್ಯವಾಗಲೆಂದು ಧರ್ಮಶಾಸನ ಹಾಕಿಸಲಾಗಿದೆ.[11] ಸಗಟೂರು ಸೀಮೆಗೆ ಸೇರಿದ ನಂಜಿಗುಳಿ ಗ್ರಾಮದ ಸಿಮಸಮುದ್ರ ಅದಕ್ಕೆ ಸೇರಿದ ಕೆರೆಕುಂಟೆ, ಸಮಸ್ತ ಸುವರ್ಣಾದಾಯ ಭತ್ತಾದಾಯವನ್ನು ನಂಜಿಗುಳಿಯ ಅಮ್ರುತ ಮಲ್ಲಿಕಾರ್ಜುನ ಲಿಂಗಕ್ಕೆ ನೀಡಲಾಗಿದೆ. ಈ ಆದಾಯವನ್ನು ಅಮ್ರುತ ಮಲ್ಲಿಕಾರ್ಜುನ ಲಿಂಗದ ಅಮೃತಪಡಿ ಸೇವೆ, ನೈವೇದ್ಯಕ್ಕೆ ಬಳಸಿಕೊಳ್ಳುವುದು[12] ಎಂದು ಶಾಸನ ತಿಳಿಸುತ್ತದೆ. 16ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಸ್ಥಾನಿಕನು ಕೇವಲ ದೇವರ ಆರಾಧನೆಗೆ ಮಾತ್ರ ಮೀಸಲಿದ್ದಂತೆ ಕಾಣುತ್ತದೆ. ಈ ಧರ್ಮಶಾಸನವನ್ನು ಸ್ಥಾನಿಕ ಅಪ್ಪಾಜಿಗೆ ನೀಡಲಾಗಿದೆ. ಕ್ರಿ.ಶ.1559ರ ಮತ್ತೊಂದು ಶಾಸನವು ದೇವಾಲಯದ ಆಗ್ನೇಯ ದಿಕ್ಕಿನಲ್ಲಿದ್ದು[13] ಈ ಹಿಂದೆ ಚರ್ಚಿಸಲಾದ ಶಾಸನವನ್ನೇ ಬಹುವಾಗಿ ಹೋಲುತ್ತದೆ. ಈ ಶಾಸನದಲ್ಲಿ ನಂಜಿಗುಳಿಯ ವಿಟ್ಟಸಂದ್ರ ಗ್ರಾಮ ಇಲ್ಲಿಗೆ ಸಲ್ಲುವ ಕೆರೆಕಟ್ಟೆಗಳನ್ನು ಅಮ್ರುತ ಮಲ್ಲಿಕಾರ್ಜುನನ ಸೇವೆಗೆ ನೀಡಲಾಗಿದೆ.[14]

ದೇವಾಲಯದ ಬಾಗಿಲ ಹೊರಗೆ ಎಡಗಡೆ ಕಂಭದಲ್ಲಿನ ಶಾಸನವು ತ್ರುಟಿತವಾಗಿದ್ದು ದೂವಸಟ್ಟಿ,

[7] ಮೇಲಿನದೇ, Ht-36, 37, AD-950

[8] ಮೇಲಿನದೇ, Ht-37, AD-950

[9] ಮೇಲಿನದೇ, Ht-36, AD-1065

[10] ಮೇಲಿನದೇ, Ht-01, AD-1559

[11] ಮೇಲಿನದೇ, Ht-01, AD-1559

[12] ಮೇಲಿನದೇ, Ht-01, AD-1559

[13] ಮೇಲಿನದೇ, Ht-02, AD-1559

[14] ಮೇಲಿನದೇ, Ht-02, AD-1559

ಮಸೆಟ್ಟಿ, ಕಂಭಸೆಟ್ಟಿ, ಸೆಟ್ಟಿಗಳಿಗೆ ಎಂದು ನಮೂದಿಸಲಾಗಿದೆ.[15] ಶೆಟ್ಟಿ ಸಮುದಾಯವು ನಂದಗುಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದು ವರ್ತಕರಾದ ಇವರು ವ್ಯಾಪಾರಿ ಕೇಂದ್ರಗಳಲ್ಲಿ ನೆಲೆಸಿರುತ್ತಾರೆ. ನಂದಗುಳಿಯು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.

ಕ್ರಿ.ಶ.1693ರ ಶಾಸನದಲ್ಲಿ ಸಗಟೂರು ಪ್ರಭು ಮುಮ್ಮಡಿ ಚಿಕ್ಕರಾಯ ತಮ್ಮೇಗೌರಯ್ಯನು ಹೊಸಕೋಟೆಯ ಗುರು ವೆಂಕಟಾಚಾರ್ಯರಿಗೆ ವರ್ತನ ಭೂದಾನ ಧರ್ಮಶಾಸನವನ್ನು ಅಮ್ರುತ ಮಲ್ಲಿಕಾರ್ಜುನ ಸ್ವಾಮಿಯವರ ಸನ್ನಿದಾನದಲ್ಲಿ ಬರೆಸಿದ್ದಾನೆ.[16]

**ದೇವಾಲಯದ ವಾಸ್ತು ಲಕ್ಷಣಗಳು**

ನೊಳಂಬರ ಕಾಲದಲ್ಲಿ ಪ್ರತಿಷ್ಠಾಪಿಸಿದ್ದಿರಬಹುದಾದ ಲಿಂಗವನ್ನು ಕ್ರಿ.ಶ.1559ಕ್ಕೆ ಮೊದಲು ದೇವಾಲಯವಾಗಿ ನಿರ್ಮಿಸಲಾಗಿದೆ. ದೇವಾಲಯದ ವಾಸ್ತು ಲಕ್ಷಣಗಳು 15, 16ನೇ ಶತಮಾನದ ಲಕ್ಷಣಗಳಿಗೆ ಹೋಲುತ್ತದೆ. ಇಲ್ಲಿನ ಮೂರು ದೇವಾಲಯಗಳಲ್ಲಿ ಕಾಡುಮಲ್ಲೇಶ್ವರ ಪುರಾತನವು ವಿಸ್ತಾರವಾದುದು ಆಗಿದೆ. ದೇವಾಲಯವು ಒಂದು ಗರ್ಭಗುಡಿ, ಅಂತರಾಳ, ಅರ್ಧಮಂಟ, ಮಂಟಪ ಮತ್ತು ಮುಖಮಂಟಪವನ್ನು ಹೊಂದಿದೆ. ಮುಖಮಂಟಪದ ಮುಂದೆ ಅಲಂಕೃತ ಬಲಿಪೀತವಿದೆ. ಬಲಿಪೀತದ ಮುಂಭಾಗದಲ್ಲಿ ಹನ್ನೆರಡು ಕಂಭಗಳ ದ್ವಾರಮಂಟಪವಿದೆ. ಇದರ ಮಧ್ಯಭಾಗದಲ್ಲಿನ ಮೆಟ್ಟಿಲುಗಳನ್ನು ಹತ್ತಿ ನೇರವಾಗಿ ದೇವಾಲಯ ಪ್ರವೇಶಿಸಬಹುದು. ದ್ವಾರಮಂಟಪದ ಮುಂಭಾಗದಲ್ಲಿ ನಂದಿಕೇಶ್ವರ ದೇವಾಲಯವಿದೆ. ಇದರ ಬಲಪಕ್ಕಕ್ಕೆ ಸೋಮೇಶ್ವರ ದೇವಾಲಯವಿದೆ. ಮಲ್ಲಿಕಾರ್ಜುನ ದೇವಾಲಯದ ಬಲಭಾಗದಲ್ಲಿ ಪಾರ್ವತಿ ದೇವಿಯ ಪುಟ್ಟಗುಡಿ ಇದೆ. ಗುಡಿಯು ಪುರಾತನವಾದುದ್ದು. ಪಾರ್ವತಿ ದೇವಿಯ ವಿಗ್ರಹವನ್ನು ಇತ್ತೀಚೆಗೆ ಪ್ರತಿಷ್ಠಾಪಿಸಲಾಗಿದೆ.[17] ಮುಜರಾಯಿ ಇಲಾಖೆಗೆ ಒಳಪಟ್ಟು ಈ ದೇವಾಲಯಕ್ಕೆ ಸುಣ್ಣಬಣ್ಣ ಬಳಿದು ಆಧುನಿಕ ಹರವನ್ನು ಕಟ್ಟಲಾಗಿದೆ. ದೇವಾಲಯದ ಊರ್ಧ್ವಮುಖಕ್ರಮ ಅಧ್ಯಯನ ನಡೆಸಲಾಗಿದೆ.

**ಅಧಿಷ್ಠಾನ**

15ನೇ ಶತಮಾನದ ನಂತರ ಅಧಿಷ್ಠಾನಗಳು ತಮ್ಮ ಪ್ರಾಮುಖ್ಯತೆ ಕಳೆದುಕೊಂಡು ಸರಳ ಮಾದರಿಯ ಉಪಪೀಠ ಮಾದರಿಯ ಅಧಿಷ್ಠಾನಗಳಾದವು. ಎರಡು ಪಟ್ಟಿಕಾಗಳಂತ ರಚನೆಗಳ ಮಧ್ಯೆ ಎತ್ತರವಾದ ಗಳದ ರಚನೆಯನ್ನು ಕಾಣಬಹುದು. ಇದೊಂದೇ ದೇವಾಲಯದಲ್ಲಿ ಮಾತ್ರವಲ್ಲದೆ ಈ

ಕಾಲಘಟ್ಟದ ಬಹಳಷ್ಟು ದೇವಾಲಯಗಳಲ್ಲಿ ಇದೇ ಮಾದರಿ ಅಧಿಷ್ಠಾನಗಳಿವೆ. ಹೊಸಕೋಟೆಯ ಅವಿಮುಕ್ತೇಶ್ವರ ದೇವಾಲಯ, ದೊಡ್ಡಬಳ್ಳಾಪುರದ ಹಣಬೆಯ ವೀರಭದ್ರಸ್ವಾಮಿ ದೇವಾಲಯಗಳಲ್ಲಿ ಇಂತಹ ಅಧಿಷ್ಠಾನ ಗುರುತಿಸಬಹುದು. ಭಿತ್ತಿಯ ಗೋಡೆಯ ಬಾರ ಕಡಿಮೆಯಾಗಿ ದೇವಾಲಯ ಒಳಗಿನ ದೈತ್ಯಕಾರದ ಚಿತ್ರಕಾಂಡ ಕಂಭಗಳು ದೇವಾಲಯದ ಬಾರ ಹೊರುವುದರಿಂದ ಅಧಿಷ್ಠಾನದಲ್ಲಿ ಇಂತಹ ಬದಲಾವಣೆ ಆಗಿದೆ. ಇದರೊಂದಿಗೆ ಪ್ರಬಲ ರಾಜಸತ್ತೆಯ ಪೋಷಣೆಯ ಕೊರತೆ, ಪಳಗಿದ ಕುಶಲಕರ್ಮಿಗಳ ಕೊರತೆಯನ್ನು ಅಲ್ಲಗಳೆಯಲು ಬರುವುದಿಲ್ಲ.

**ಭಿತ್ತಿ**

ಭಿತ್ತಿಯು ಸರಳವಾಗಿದ್ದು, ಗೋಡೆಯ ಮಾದರಿಯಲ್ಲಿದೆ. ಇದು ವಿಜಯನಗರ ಶೈಲಿಯ ಪ್ರಮುಖ ಲಕ್ಷಣ. ಭಿತ್ತಿಯ ಖಾಲಿತನವನ್ನು ಹೋಗಲಾಡಿಸಲು ಮೀನು, ಒಂಟೆ, ಸಲಗ, ರತಿ

[15] ಮೇಲಿನದೇ, EC-IX, ಅನುಬಂಧ, Ht-196

[16] ಮೇಲಿನದೇ, Ht-105, AD-1693

[17] ಸಂದರ್ಶನ: ಅರ್ಚಕರು, ಕಾಡುಮಲ್ಲೇಶ್ವರ ದೇವಾಲಯ, ನಂದಗುಡಿ, ದಿನಾಂಕ:02–10–2018

ಕ್ರೀಡೆಯಲ್ಲಿ ನಿರತವಾದ ಮಂಗಗಳ ಜೋಡಿಯನ್ನು ಮಂಟಪದ ಭಿತ್ತಿಯಲ್ಲಿ ಕಾಣಬಹುದು. ಜಾಲವಾತಾಯನಗಳೂ ಸಹ ಇಲ್ಲಿ ಇಲ್ಲವಾಗಿವೆ. ಪ್ರನಾಳವು ಪಟ್ಟಿಕಾಯಿಂದ ಹೊರಬಂದಿದ್ದು ಗಜಮುಖದ ರೇಖಾಚಿತ್ರವಿದೆ.

**ಪ್ರಸ್ತರ**

ಪ್ರಸ್ತರ ವರ್ಗದಲ್ಲಿ ಉತ್ತರ, ವಾಜನಗಳಿದ್ದು ಕಪೋತದ ಬದಲು ಪಟ್ಟಿಕಾವನ್ನು ಕಾಣುತ್ತೇವೆ. ಯಾವುದೇ ಅಲಂಕಾರಗಳಿಲ್ಲದೆ ಪ್ರಸ್ತರ ವರ್ಗ ಸರಳವಾಗಿದೆ. ಇದರ ಮೇಲೆ ಗಾರೆಯ ಹರವನ್ನು ಕಟ್ಟಿ ಗರ್ಭಗುಡಿಯ ಮೇಲೆ ಆಧುನಿಕ ಗೋಪುರ ನಿರ್ಮಿಸಲಾಗಿದೆ.

ಚೌಕಾಕಾರದ ಗರ್ಭಗುಡಿಯಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಶಿವಲಿಂಗವಿದೆ. ಗರ್ಭಗುಡಿಯ ಮುಂದಿನ ಅಂತರಾಳವು ಖಾಲಿ ಇದೆ. ಅಂತರಾಳದ ಮುಂಭಾಗದಲ್ಲಿ ಅರ್ಧಮಂಟಪವನ್ನು ಕಾಣುತ್ತೇವೆ. ಇಲ್ಲಿ ಸರ್ವಾಲಂಕೃತ ನಂದಿಯು ಶಿವಲಿಂಗಕ್ಕೆ ಮುಖಮಾಡಿ ಕುಳಿತಿದೆ. ಅರ್ಧಮಂಟಪದ ಮುಂದಿನ ಮಂಟಪದಲ್ಲಿ ನಾಲ್ಕು ಚಿತ್ರಕಾಂಡ ಕಂಭಗಳಿವೆ. ಮೂರು ಘನಭಗಳ ಮಧ್ಯೆ ಬಹುಕೋನಾಕಾರವಿದೆ. ಕಂಭಗಳು ನಾಲ್ಕು ದಿಕ್ಕಿಗೂ ಪುಷ್ಪಬೊದಿಗೆಯನ್ನು ಹೊಂದಿವೆ. ಮಂಟಪದ ನೆಲಕ್ಕೆ ಗ್ರಾನೈಟ ಹಾಕಿರುವುದರಿಂದ ಕಂಭದ ಕೆಳಬಾಗವು ಮುಚ್ಚಿಹೋಗಿದ್ದು ಪೀಠದವಿದ್ದ ಬಗ್ಗೆ ಮಾಹಿತಿ ಇಲ್ಲ. ಕಂಭದ ಘನಭಗಳಲ್ಲಿ ಕಾಮಧೇನು, ವ್ಯಾಪಾರಸ್ಥೆ, ಕಾಳಮುಖ ಮುನಿ, ವೀರಭದ್ರ, ನಂದಿ, ಯೋಗಸನ

ಮಾಡುತ್ತಿರುವ ವ್ಯಕ್ತಿ, ನೃತ್ಯಗಾರ್ತಿ ಮಹಿಳೆಯರ ಸುಂದರ ಉಬ್ಬುಶಿಲ್ಪಗಳು ಇವೆ. ಮಂಟಪದಲ್ಲಿನ ಗಣಪತಿಯ ವಿಗ್ರಹವು ವಿಜಯನಗರ ಶೈಲಿಯದಾಗಿದೆ. ಷಣ್ಮುಕನ ವಿಗ್ರಹವನ್ನು ಕಳೆದ ಐದು ವರ್ಷಗಳ ಹಿಂದೆ ಪ್ರತಿಷ್ಟಾಪಿಸಲಾಗಿದೆ. ಒಂಭತ್ತು ಅಂಕಣದ ಮಂಟಪದ ಮುಚ್ಚಿಗೆಯು ನಾಭಿಚಂದ ಮಾದರಿಯಲ್ಲಿದೆ. 16ನೇ ಶತಮಾನದ ನಂತರ ದೇವಾಲಯಗಳಲ್ಲಿ ಈ ಮಾದರಿಯ ಮುಚ್ಚಿಗೆಯು ಸಾಮಾನ್ಯವಾದುದು.

ಮಂಟಪದ ಮುಂಭಾಗದಲ್ಲಿ ನಾಲ್ಕು ಕಂಭಗಳ ಮುಖಮಂಟಪವಿದೆ. 14ನೇ ಶತಮಾನದ ನಂತರ ಮುಖಮಂಟಪದ ರಚನೆಯಲ್ಲಿ ಹಲವಾರು ಬದಲಾವಣೆಗಳಾದವು. ಮುಖಮಂಟಪವು ಮಂಟಪವಷ್ಟು ಅಗಲವಿದ್ದು ಜಗತಿಯಂತಹ ರಚನೆಯನ್ನು ಹೊಂದಿರುತ್ತಿದ್ದವು. ಮತ್ತೆ ಕೆಲವು ಬಾರಿ ಮಂಟಪಕ್ಕಿಂತ ಅಗಲ ಹೆಚ್ಚಾಗಿದ್ದು ಮಹಾ ಮುಖಮಂಟಪಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದವು. ಆದರೆ ಕಾಡುಮಲ್ಲೇಶ್ವರ ದೇವಾಲಯದ ಮುಖಮಂಟಪವು ಮಂಟಪದ ಅಗಲದ ಮೂರನೇ ಒಂದು ಭಾಗದಷ್ಟು ಮಾತ್ರ ಅಗಲವಿದೆ.

ಮುಖಮಂಟಪದಲ್ಲಿಯೂ ನಾಲ್ಕು ಚಿತ್ರಕಾಂಡ ಸ್ತಂಭಗಳಿದ್ದು ನಾಲ್ಕು ದಿಕ್ಕಿಗೂ ಬದಲಾಗಿ ಮುಖಮಂಟಪದ ಒಳಮುಖನಾಗಿ ಪುಷ್ಪಬೋದಿಗೆಯನ್ನು ಹೊಂದಿವೆ. ಸ್ತಂಭದ ಘನಭಗಳಲ್ಲಿ ಗಣಪತಿ, ವೀರಭದ್ರ, ಸಿಂಹ, ಲಿಂಗ, ಹೂಬಳ್ಳಿಯ ಅಲಂಕಾರಗಳಿವೆ. ನಾಲ್ಕು ಸೋಪಾನಗಳನ್ನು ಹತ್ತಿ ಮುಖಮಂಟಪವನ್ನು ತಲುಪಬೇಕು. ಸೋಪಾನವು ಮುಖಮಂಟಪದಷ್ಟೇ ಅಗಲವಿದೆ. ಕಟಾಂಜನದಲ್ಲಿ ಆನೆ ಇದೆ. ಸಂಪೂರ್ಣವಾಗಿ ನಿಂತಿರುವ ಭಂಗಿಯಲ್ಲಿ ಆನೆ ಕೆತ್ತಲಾಗಿದೆ.

ಮುಖಮಂಟಪದ ಮುಂದೆ ಸಾಕಷ್ಟು ದೊಡ್ಡದಾದ ಬಲಿಪೀಠವಿದೆ. ನನ್ನ ಅಧ್ಯಯನ ವ್ಯಾಪ್ತಿಯ ದೇವಾಲಯಗಳಲ್ಲಿ ಇದೇ ಸುಂದರವಾದ ಬಲಿಪೀಠ. ಜಗತಿಯ ಮೇಲೆ ತ್ರಿಪಟ್ಟಕುಮುದ, ಅದರ ಮೇಲೆ ಗಳ, ಗಳದ ಮೇಲೆ ಕಪೋತವಿದೆ. ಕಪೋತದ ಮೇಲೆ ಪ್ರತೀ ಇದೆ. ಕಪೋತದ ಕರ್ಣಗಳಲ್ಲಿ ಕೀರ್ತಿಮುಖವಿದೆ. ಕೀರ್ತಿಮುಖದ ಬಾಯಿಯಿಂದ ಹೂಬಳ್ಳಿಗಳು ಹೊರಬಂದಿವೆ.

ಬಲಿಪೀಠದ ಮುಂಭಾಗದಲ್ಲಿ ಹನ್ನೆರಡು ರುಚಕ ಸ್ತಂಭಗಳ ಮಂಟಪವಿದೆ. ಮಂಟಪವು ಸರಳವಾದ ಅಧಿಷ್ಠಾನವನ್ನು ಹೊಂದಿದೆ. ಈ ಮಂಟಪವನ್ನು ದ್ವಾರಮಂಟಪ ಎಂದು ಪರಿಗಣಿಸಲೂ ಸಾಧ್ಯವಾಗದಿದ್ದರೂ ಇಲ್ಲಿನ ಜಗತಿಯಂತಹ ರಚನೆ ದ್ವಾರಮಂಟಪವಿದ್ದಿರಬಹುದು ಎನ್ನುವ ಊಹೆಗೆ ಎಡೆಮಾಡಿಕೊಡುತ್ತದೆ. ಇಲ್ಲಿಯ ಆರು ಕಂಭಗಳು ಬ್ರಹ್ಮಕಾಂತ ಕಂಭಗಳಾಗಿದ್ದು ಉಳಿದವು ಸಾಧಾರಣ ಕಂಭಗಳು.

**ನಂದಿಕೇಶ್ವರ ಗುಡಿ**

ಇದು ಸರಳವಾದ ಬ್ರಹ್ಮಕಾಂತ ಕಂಭಗಳಿಂದ ಮಾಡಲಾದ ಮಂಟಪದಂತಹ ರಚನೆಗೆ ಮೂರು ಕಡೆಗಳಲ್ಲೂ ಗಾರೆಯ ಗೋಡೆ ಕಟ್ಟಲಾಗಿದ್ದು ಮಧ್ಯಭಾಗದಲ್ಲಿ ಸುಮಾರು 3**x**2 ಅಡಿ ದೊಡ್ಡದಾದ ನಂದಿಯ ವಿಗ್ರಹವಿದೆ.

**ಸೋಮೇಶ್ವರ ಗುಡಿ**

ನಂದಿಕೇಶ್ವರ ದೇವಾಲಯದ ಬಲಭಾಗಕ್ಕಿರುವ ಸರಳವಾದ ಈ ದೇವಾಲಯವು ಮೂರು ಗರ್ಭಗುಡಿಗಳನ್ನು ಹೊಂದಿದೆ. ಮುಖ್ಯ ಗರ್ಭಗುಡಿಯಲ್ಲಿ ಸುಮಾರು ಒಂದು ಅಡಿ ಎತ್ತರದ ಪುಟ್ಟ ಲಿಂಗವು ಅಷ್ಟೇ ಪುಟ್ಟದಾದ ಪಾಣಿಪೀಠದ ಮೇಲಿದೆ. ಅಕ್ಕಪಕ್ಕದ ಗರ್ಭಗುಡಿಗಳಲ್ಲಿ ಗಣಪತಿ ಮತ್ತು ಪಾರ್ವತಿ ದೇವಿಯ ದೇವಶಿಲ್ಪಗಳಿವೆ. ಇದು 18ನೇ ಶತಮಾನದ ನಂತರದ ರಚನೆಯಾಗಿದೆ. ಮಂಟಪದಲ್ಲಿ ಆರು ಬ್ರಹ್ಮಕಾಂತ ಕಂಭಗಳಿವೆ. ಮುಂಭಾಗದಲ್ಲಿ ಮುಖಮಂಟಪದಂತೆ ಕಾರ್ಯನಿರ್ವಹಿಸುತ್ತಿರುವ ಆಧುನಿಕ ರಚನೆ ಇದೆ.

**ಪಾರ್ವತಿ ಗುಡಿ**

ಕಾಡುಮಲ್ಲೇಶ್ವರ ದೇವಾಲಯದ ಬಲಭಾಗದಲ್ಲಿರುವ 7×7 ಅಡಿ ಅಳತೆಯ ಪುಟ್ಟ ಗುಡಿಯು ಕಾಡುಮಲ್ಲೇಶ್ವರ ದೇವಾಲಯದ ಸಮಕಾಲೀನ. ಅಧಿಷ್ಠಾನ, ಭಿತ್ತಿ, ಪ್ರಸ್ತರವರ್ಗಗಳು ಕಾಡುಮಲ್ಲೇಶ್ವರ ದೇವಾಲಯವನ್ನೇ ಹೋಲುತ್ತವೆ. ಗರ್ಭಗುಡಿಯು ಗೋಡೆಗಳಿಂದ ಸುತ್ತುವರೆದಿದ್ದು ಅದರ ಮುಂದೆ ತೆರೆದ ಮಂಟಪವಿದೆ. ಸೋಪಾನವನ್ನು ಏರಿ ಗುಡಿಯನ್ನು ತಲುಪಬೇಕು. ಗರ್ಭಗುಡಿಯ ದ್ವಾರದಲ್ಲಿ ಎರಡು ಕೈಗಳ ದ್ವಾರಪಾಲಕರು ಆಲೀಢಾಸನ ಭಂಗಿಯಲ್ಲಿ ನಿಂತಿದ್ದಾರೆ. ಏಕಶಾಖಾ ದ್ವಾರಬಂಧವು ಸರಳವಾಗಿದೆ. ಬಹುಶಃ ಇಲ್ಲಿದ್ದ ಶಿವಲಿಂಗವು ಕಳುವಾಗಿದ್ದು ಖಾಲಿ ಇದ್ದ ಗುಡಿಯಲ್ಲಿ ಇತ್ತೀಚೆಗೆ ಪಾರ್ವತಿ ದೇವಿಯ ಶಿಲ್ಪವನ್ನು ಇಡಲಾಗಿದೆ.

**ಆಕರ ಗ್ರಂಥಗಳು**

**ಪ್ರಾಥಮಿಕ ಆಕರಗಳು**


- *Annual Report of the Mysore Archeological Department, Survey of Mysore, MAR, 1902-1942,* The Government Press.
- Rice, B.Lewis. (1905). *Epigraphia Carnatica-IX and Supplementary.* Mysore Government Central Press.
- Suryanath U Kamath. (1989). *Bangalore Rural District Gazetteer,.* Government of Karnataka.
- Suryanath U Kamath. (1989). *Karnataka State Gazetteer.* Government of Karnataka.


**ಆನುಷಂಗಿಕ ಆಕರಗಳು**


- ಚಿದಾನಂದಮೂರ್ತಿ.ಎಂ. (2015). *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕ್ರಿ.ಶ.450 ರಿಂದ ಕ್ರಿ.ಶ.1150.* ಸಪ್ನ ಬುಕ್‌ಹೌಸ್.
- ದೇವರ ಕೊಂಡಾರೆಡ್ಡಿ. (1994). *ತಲಕಾಡಿನ ಗಂಗರ ದೇವಾಲಯಗಳು.* ಕನ್ನಡ ಸಾಹಿತ್ಯ ಪರಿಷತ್.
- ಗೋಪಾಲ್‌ರಾವ್.ಎಚ್.ಎಸ್ (ಪ್ರ.ಸಂ.) ಮತ್ತು ದೇವರ ಕೊಂಡಾರೆಡ್ಡಿ (ಸಂ.). (2019).

*ಕರ್ನಾಟಕ ಶಿಲ್ಪಕಲಾ ಮಾಲೆ–3, ಗಂಗರ ಶಿಲ್ಪಕಲೆ.* ಕರ್ನಾಟಕ ಶಿಲ್ಪಕಲಾ ಅಕಾಡೆಮಿ.

- ವಸುಂಧರಾ ಫಿಲಿಯೋಜಾ. (2003). *ಕರ್ನಾಟಕದಲ್ಲಿ ಲಾಖುಳ ಶೈವ ಜಕ್ಕಣಾಚಾರ್ಯರು.* ಕನ್ನಡ ಸಂಶೋಧನಾ ಸಂಸ್ಥೆ.

**ವಕ್ತೃ ವಿವರ**

- ಅರ್ಚಕರು, ಕಾಡುಮಲ್ಲೇಶ್ವರ ದೇವಾಲಯ, ನಂದಗುಡಿ. ದಿನಾಂಕ:02–10–2018
- ಗೋಪಾಲರಾವ್.ಹೆಚ್.ಎಸ್, ಶಾಸನತಜ್ಞರು, ಕರ್ನಾಟಕ ಇತಿಹಾಸ ಅಕಾಡೆಮಿ. ದಿನಾಂಕ: ಮೇ 27–29, 2018

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 64-72
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಗೋಕಾಕ ಕಾಷ್ಠಕಲೆ: ಒಂದು ಅಧ್ಯಯನ

**ಡಾ. ಉಮಾದೇವಿ**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರಕಾರಿ ಪ್ರಥಮ ದರ್ಜೆ ಕಾಲೇಜು, ಗೋಕಾಕ.

**Abstract:**
*ಜನ ಜೀವನರ ಬದುಕು ಜೀವನ ಚರಿತ್ರೆಯೆನಿಸಿದರೆ, ಕಲೆಗಳು ಅದರ ಆತ್ಮ ಚರಿತ್ರೆಯೆನಿಸುತ್ತದೆ. ವ್ಯಾಪಕವಾದ ಅರ್ಥದಲ್ಲಿ ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆ, ಜೀವನ ಮೌಲ್ಯ ಇತ್ಯಾದಿಗಳ ವಿವರಣೆಯೇ ಇತಿಹಾಸವೆನಿಸುತ್ತದೆ. ಆ ಇತಿಹಾಸದ ಒಳ ಚೌಕಟ್ಟಿನಲ್ಲಿ ಬೆಳೆದುಬಂದ ಕಲೆಗಳು ಅದಕ್ಕೆ ಸುಂದರ ಸಂಸ್ಕಾರವನ್ನು ನೀಡುತ್ತವೆ. ಕಲೆಯು ದೇಶದ ಅಥವಾ ಜನಾಂಗದ ಇತಿಹಾಸವನ್ನು ತಿಳಿಸುವ ಮಹತ್ವದ ಸಾಧನವಾಗಿದೆ. ಇದು ಸಂಸ್ಕೃತಿಯನ್ನು ಬಿಂಬಿಸುವುದರ ಜೊತೆಗೆ ಆನಂದವನ್ನು ನೀಡುತ್ತವೆ. ಅಂತಹ ಕಲೆಗಳಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ್ ಕಾಷ್ಠಕಲೆ ಪ್ರಮುಖವಾಗಿದೆ. ಪ್ರಸ್ತುತ ಲೇಖನದಲ್ಲಿ ಈ ಕಲೆಯ ಬಗ್ಗೆ ವಿವರಿಸಲಾಗಿದೆ.*

**Keywords:** *ಕರ್ನಾಟಕ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ, ಗೋಕಾಕ್ ಕಾಷ್ಠಕಲೆ, ಮರ ಮಾಧ್ಯಮ ಕಲಾಕೃತಿ.*

## ಪೀಠಿಕೆ

ಬೆಳಗಾವಿ ಜಿಲ್ಲೆಯು ವೈವಿಧ್ಯದ್ಯಮಯ ಕಲಾ ಶ್ರೀಮಂತಿಕೆಯನ್ನು ಹೊಂದಿದ್ದು, ಜನಪದ ಹಿನ್ನೆಲೆಯ ಅನೇಕ ಕಲೆಗಳು ಹಲವು ಸ್ಥಳಗಲ್ಲಿ ಕಂಡುಬಂದಿವೆ. ಅವುಗಳಲ್ಲಿ ಗೋಕಾಕ್‌ದ ಕಾಷ್ಠಕಲೆ (ಮರ ಮಾಧ್ಯಮ ಕಲಾಕೃತಿಗಳು) ಪ್ರಮುಖವಾಗಿದೆ. ಗೋಕಾಕ ಬೆಳಗಾವಿ ಜಿಲ್ಲೆಯ ತಾಲೂಕಾ ಕೇಂದ್ರವಾಗಿದೆ. ಗೋಕಾಕ ತಾತ್ವಿಕಾ ಮತ್ತು ಐತಿಹಾಸಿಕ ಮಹತ್ವದ ಸ್ಥಳವು ಹೌದು. ಗೋಕಾಕ ಪಟ್ಟಣವು ಹಲವು ವೈವಿಧ್ಯಮಯ ವಿಷಯಗಳಿಗಾಗಿ ನಾಡಿನಲ್ಲಿ ಹೆಸರು ಮಾಡಿದೆ. ಅದರಲ್ಲಿ ಗೋಕಾಕ್ ಕಾಷ್ಠಕಲೆ ಪ್ರಮುಖವಾಗಿದೆ.

ಪ್ರಾಕೃತಿಕ ಸಿರಿ ಸೌಂದರ್ಯದ ನೆಲೆಬೀಡಾದ ಗೋಕಾಕ್ ಸಾಹಿತ್ಯ, ಕಲೆ, ಸಂಸ್ಕೃತಿಯ ತಾಣವಾಗಿದೆ. 'ಗೋಕಾಕ್ ಬಣ್ಣ, ಯಾದವಾಡ ಸುಣ್ಣ, ಬನಹಟ್ಟಿ ಹೆಣ್ಣ' ಎಂದು ಜನಪದ ಕಾವ್ಯಗಳಲ್ಲಿ ಗೋಕಾಕ್‌ನ್ನು ಬಣ್ಣಿಸಲ್ಪಟ್ಟಿದೆ. ಬೆಳಗಾವಿ ಜಿಲ್ಲೆಯ ಗೋಕಾಕ್ ಬಣ್ಣ ಹಾಗೂ ಬಣ್ಣದ ತಯಾರಿಕೆಗೆ ಪ್ರಸಿದ್ಧಿ ಪಡೆದ ಊರಾಗಿದೆ.[1] ಈ ಗೋಕಾಕ್ ಕಲೆಯ ಕಲಾಕೃತಿಗಳನ್ನು ಮದುವೆ, ಹುಟ್ಟು ಹಬ್ಬದ ಸಂದರ್ಭಗಳಲ್ಲಿ ಉಡುಗೊರೆಯಾಗಿ ನೀಡುವ ಹಾಗೂ ಮನೆಯ ಅಲಂಕರಣ ವಸ್ತುಗಳಾಗಿಯೂ ಬಳಸುವಂತಹ ಪ್ರತೀತಿ ಕೂಡ ಕಂಡುಬರುತ್ತದೆ. ಇಂತಹ ಉಡುಗೊರೆಯು ಪ್ರತಿಷ್ಠೆಯ ಸಂಕೇತವು ಕೂಡ ಆಗಿರುವುದಲ್ಲದೆ, ಈ ಕಲೆಗೆ ಗೋಕಾಕ್ ಟಾಯ್ಸ ಎಂದೇ ಹೆಸರಿಸಲಾಗಿದೆ.

[1] ಶ್ರೀರಾಮ ಇಟ್ಟಣ್ಣವರ. *ಗೋಕಾಕ್ ಕಲೆ.* In ಪಾಟೀಲ, ಎಸ್.ಸಿ., ಶ್ರೀ ಸತ್ಯಾನಂದ ಪಾತ್ರೋಟ. (ಸಂ.). *ನಿಜದ ನೆಲೆ.* ಪುಟ. 145, 151

**Please cite this article as:** ಉಮಾದೇವಿ. (2024). ಗೋಕಾಕ ಕಾಷ್ಠಕಲೆ: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(2), 64–72

ನಿಸರ್ಗ ನಿರ್ಮಿತ ವಸ್ತುಗಳಲ್ಲಿ ಕಂಡುಬರುವಂತಹ ನಿಖರತೆ ಸ್ಪಷ್ಟವಾಗಿ ಮಾನವ ನಿರ್ಮಿತ ವಸ್ತುಗಳಲ್ಲಿ ಗೋಚರವಾಗದು. ಮಾನವನು ಎಷ್ಟೇ ವೈಜ್ಞಾನಿಕವಾಗಿ ಮುಂದುವರೆದರೂ ಪ್ರಕೃತಿಗೆ ಸರಿಸಾಟಿಯಾಗಲಾರದು. ಪ್ರಕೃತಿ ನಿರ್ಮಿತ ವಸ್ತುಗಳ ಪ್ರತಿಕೃತಿ ತಯಾರಿಕೆಯಲ್ಲಿ ಮಾನವನು ಕೌಶಲ್ಯದ ಬಳಕೆ ಪೂರ್ಣ ಪ್ರಮಾಣದಲ್ಲಿ ಬಳಕೆಯಾದಲ್ಲಿ ಮಾತ್ರ ಅದಕ್ಕೊಂದು ನಿರ್ದಿಷ್ಟತೆ ದೊರಕುತ್ತದೆ. ಬೇಸಿಗೆ ಬಂತೆಂದರೆ ವಿವಿಧ ತರದ ಹಣ್ಣು, ಹೂವುಗಳು ಮಾರುಕಟ್ಟೆಯನ್ನು ಆಕ್ರಮಿಸುತ್ತವೆ. ಪ್ರಕೃತಿ ನಿರ್ಮಿತ ವಿಸ್ಮಯತೆಯ ಪ್ರತೀಕವೆನಿಸಿದ ಭಿನ್ನ ಭಿನ್ನವಾದ ವರ್ಣಮಯ ವಿನ್ಯಾಸಗಳನ್ನು ಹೊಂದಿರುವ ಹಣ್ಣು ಹಂಪಲುಗಳು ನೋಡುಗರ ಮನಸ್ಸನ್ನು ಸೂರೆಗೊಳಿಸುತ್ತವೆ. ಅಲ್ಪಾಯುಷಿಗಳಾದ ಪ್ರಕೃತಿ ನಿರ್ಮಿತ ಇಂತಹ ಹಣ್ಣುಗಳು ನೋಡುಗನ ಮನಸ್ಸಿನಲ್ಲಿ ಒಂದು ಬಗೆಯ ಅವ್ಯಕ್ತ ಆನಂದವನ್ನು ಉಂಟುಮಾಡುವುದರಲ್ಲಿ ಸಂಶಯವೇ ಇಲ್ಲ. ಆದರೆ ಇಂತಹ ವಸ್ತುಗಳು ಬಹುಕಾಲ ಉಳಿಯುವುದಿಲ್ಲ. ಆದಕಾರಣ ಬಣ್ಣ ತಯಾರಿಕೆಯ ತವರೂರಾದ ಗೋಕಾಕ್‌ನಲ್ಲಿ ನುರಿತ ಕಲಾವಿದರಿಂದ ಕಾಷ್ಠದಿಂದ ತಯಾರಾಗುವ ವಸ್ತುಗಳು ಚಿರಕಾಲ ನೋಡುಗರ ಮನಸ್ಸನ್ನು ಮುದಗೊಳಿಸುತ್ತವೆ.

ಕಲಾವಿದನ ಕಲಾಭಿವ್ಯಕ್ತಿಗೆ ಅನೇಕ ಬಗೆಯ ಮಾಧ್ಯಮಗಳು ಪೂರಕವೆನಿಸುತ್ತವೆ. ವಿಭಿನ್ನ ಮಾಧ್ಯಮಗಳ ಕುಲುಮೆಯಲ್ಲಿ ಹೊರಹೊಮ್ಮುವ ಕಲಾವಿದನ ಕಲಾಭಿವ್ಯಕ್ತಿ ಅನೇಕ ಬಗೆಯ ವಿಧಿ–ವಿಧಾನಗಳ ಮೂಲಕ ಹೊರಬಂದು ತನ್ನತನವನ್ನು ಪ್ರದರ್ಶಿಸುತ್ತದೆ. ಕಲಾವಿದನಲ್ಲಿ ಆಶಯವು ಬೀಜವಾಗಿ ಕಲಾಂತರದಲ್ಲಿ ಅದು ಫಲಿತಗೊಂಡು ಅವನ ಕೃತಿಯಲ್ಲಿ ಅದು ಬೆಳೆದು ಹೆಮ್ಮರವಾಗುತ್ತದೆ. ಅದೇ ರೀತಿಯಾಗಿ ನೋಡುಗರ ಮನಸ್ಸಿನಲ್ಲಿ ಚಿರಕಾಲ ಸ್ಥಾನವನ್ನು ಪಡೆಯುತ್ತದೆ. ಕಲಾವಿದನ ಈ ಬಗೆಯ ಕೃತಿ ಸೃಷ್ಟಿಯ ಸಂದರ್ಭದಲ್ಲಿ ನಿಸರ್ಗವು ಕೂಡ ಪೂರಕವೆನಿಸುತ್ತದೆ.[2] ಅದೇ ಬಗೆಯಲ್ಲಿ ನಿಸರ್ಗದ ಕೊಡುಗೆ ಅನನ್ಯ. ವಿಸ್ಮಯತೆಯ ಕಡಲಾಗಿರುವ ಪ್ರಕೃತಿಯಿಂದ ಸಾಮಾನ್ಯ ನೋಡುಗನು ಕೂಡ ಪ್ರೇರಿತನಾಗುವಂತ ಸಂದರ್ಭದಲ್ಲಿ ಕಲಾವಿದರು ಕೂಡ ಪ್ರೇರಣೆಯನ್ನು ಪಡೆದುಕೊಂಡಿರುವುದು ಆಶ್ಚರ್ಯವೇನಲ್ಲ. ಜನಪದ ಕಲಾವಿದರು ಸಮಾಜದ ಆಗುಹೋಗುಗಳ ಮೂಲಕ ಪ್ರೋತ್ಸಾಹಗೊಂಡು ತಮ್ಮ ಕಲೆಯ ಮೂಲಕ ಅದನ್ನು ಪ್ರಚಾರಪಡಿಸಿದರು. ಈ ದೆಸೆಯಲ್ಲಿ ಆಧುನಿಕ ಕಲಾವಿದರು ತನ್ನ ಕಲಾಭಿವ್ಯಕ್ತಿಗೆ ಪಾರಂಪರಿಕತೆಯ ಜೊತೆ ಜೊತೆಗೆ ಆಧುನಿಕತೆಯನ್ನು ತಮ್ಮ ಕಲೆಯ ಮುಖಾಂತರ ಪ್ರಚಾರಪಡಿಸುತ್ತಿದ್ದಾರೆ.

ಬಣ್ಣಗಾರಿಕೆಯಲ್ಲಿ ಕರ್ನಾಟಕದ ಅನೇಕ ಊರುಗಳು ಪ್ರಸಿದ್ಧವಾಗಿವೆ. ಕೊಪ್ಪಳ ಜಿಲ್ಲೆಯ ಕಿನ್ನಾಳ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣ, ಬೆಳಗಾವಿ ಜಿಲ್ಲೆಯ ಗೋಕಾಕ್ ಇವು ಬಣ್ಣಗಾರಿಕೆಯಲ್ಲಿ ಪ್ರಸಿದ್ಧಿಯಾಗಿವೆ. ತಮ್ಮ ಪೂರ್ವಜರಿಂದ ಈ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಗೋಕಾಕ್ ಜಿನಗಾರರು ಕಾಷ್ಠ ಮಾಧ್ಯಮದಲ್ಲಿ ತಯಾರಿಸಲ್ಪಡುತ್ತಿರುವ ಕಲೆಯನ್ನು ಗೋಕಾಕ್ ಕಲೆಯೆಂದೇ ಹೆಸರು ಪಡೆದಿದೆ. ಅನೇಕ ಕಲಾವಿದರ ಕುಟುಂಬಗಳು ಈ ಕಲೆಯನ್ನು ಧಾರ್ಮಿಕ ವಿಧಿ–ವಿಧಾನಗಳಿಂದ ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ. ಎಲೆಮರೆಯ ಕಾಯಿಯಂತೆ ತಮ್ಮ ಈ ಕಾಯಕವನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇಂತಹ ಕಲೆ, ಕಲಾವಿದರ, ಹಾಗೂ ಕಲಾವಿದರ ಕುಂಟುಂಬವನ್ನು ಪರಿಚಯಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಗೋಕಾಕ್ ಕಲೆಗೆ ಸುಮಾರು ಮುನ್ನೂರು ವರ್ಷಗಳ ಇತಿಹಾಸವಿದೆ. ಈ ಕಲೆಯು ಆಧುನಿಕತೆಯ ಜೊತೆಗೆ ತನ್ನ ಸಂಪ್ರದಾಯವನ್ನು

---

[2] ಪಾಟೀಲ, ಎಸ್.ಸಿ. *ಕರ್ನಾಟಕದ ಜನಪದ ಚಿತ್ರಕಲೆ.* ಪುಟ, 256

ಮರೆತಿಲ್ಲ. ಇಂದಿನ ತಲೆಮಾರಿನ ಕಲೆಯ ಜೊತೆಗೆ ಆಧುನಿಕತೆಯನ್ನು ಮೈಗೂಡಿಸಿಕೊಂಡು ಪರಿವರ್ತನೆಗೊಂಡಿದೆ. ಮಾಹಿತಿಗಳ ಆಧಾರದ ಮೇಲೆ ಗೋಕಾಕ್ ನಗರಕ್ಕೆ ಈ ಕಲೆಯನ್ನು ತಂದವರು ಜಿನಗಾರರು. ಈ ಜಿನಗಾರರು ಮೂಲತಹ ಕೊಲ್ಹಾಪುರ ಪ್ರದೇಶದವರು. ಸುಮಾರು ಎರಡು ದಶಕಗಳ ಹಿಂದೆ ಭೀಮಪ್ಪ ಎಂಬ ಹೆಸರಿನ ಜಿನಗಾರನ ನೇತೃತ್ವದಲ್ಲಿ ಗೋಕಾಕ್ ಪ್ರದೇಶಕ್ಕೆ ವಲಸೆಬಂದರು. ಭೀಮಪ್ಪನ ಮೊಮ್ಮಗ ಬಾಪೂ ಜಿನಗಾರ ಇವನು ಒಬ್ಬ ಕುಶಲ ಬಣ್ಣಗಾರ. ಕೊಲ್ಹಾಪುರ ಮಹಾರಾಜನ ಆಶ್ರಯದಲ್ಲಿದ್ದನು. ಮಹಾರಾಜನ ಮರಣದ ನಂತರ ಇವನು ಗೋಕಾಕ್‌ಗೆ ಬಂದು ತನ್ನ ಬಂದುಗಳನ್ನು ಸೇರಿಸಿಕೊಂಡು ಕಟ್ಟಿಗೆಯ ಆಟಿಕೆ, ಪಲ್ಲಕ್ಕಿ, ದೇವರ ಮೂರ್ತಿಗಳು, ಆಭರಣಗಳು ಮತ್ತು ಆಗಿನ ಪ್ರಾದೇಶಿಕ ಮುಖಂಡರು ಉಪಯೋಗಿಸುತ್ತಿದ್ದ ಛತ್ರಿ, ಚಾಮರ ಹೀಗೆ ಮುಂತಾದ ಕರಕುಶಲ ವಸ್ತುಗಳನ್ನು ಮಾಡುತ್ತಿದ್ದನು. ಬಾಪು ಜಿನಗಾರನೇ ಕಟ್ಟಿಗೆಯ ಆಟಿಕೆಗಳನ್ನು ತಯಾರಿಸುವ ಕಲೆಯನ್ನು ಗೋಕಾಕ್‌ನಲ್ಲಿ ನೆಲೆಸಿದ್ದ ತನ್ನ ಬಂಧುಗಳಿಗೆ ಹೇಳಿಕೊಟ್ಟನೆಂಬ ಪ್ರತೀತಿ ಇದೆ.[3]

ಕಲಾಂತರದಲ್ಲಿ ಗೋಕಾಕ್ ಕಲೆಯನ್ನು ಜಿನಗಾರರು ಮಾತ್ರವಲ್ಲದೆ ಸೋಮವಂಶಿಯ ಕ್ಷತ್ರಿಯ ಮತ್ತು ಪಂಚಾಳರ ಮನೆತನಕ್ಕೆ ಸೇರಿದವರು, ಇವೆರಡು ಮನೆತನಗಳು ಮರಗೆಲಸ, ಅಕ್ಕಸಾಲಿಗ ಹೀಗೆ ಗೋಕಾಕ್ ಕಲೆಯನ್ನು ಮುಂದುವರೆಸಿಕೊಂಡು ಬಂದರು. ಇವರಿಗೆ ಸರ್ಕಾರದಿಂದ ಯಾವ ಸೌಲಭ್ಯಗಳು ದೊರೆತಿಲ್ಲ. ಇವರ ಸ್ವಂತ ಬುದ್ಧಿಯಿಂದ, ಚತುರತೆಯಿಂದ ಈ ಕಲೆಯನ್ನು ಮಾಡುತ್ತಾ ಬಂದಿದ್ದಾರೆ. ಎಲೆಯ ಬಳ್ಳಿಯ ತೋಟದಲ್ಲಿ ಬೆಳೆದ 'ಹಾರಿವಾಳ' ಕಟ್ಟಿಗೆಯನ್ನು ತಂದು ಕಲಾಕೃತಿಗಳಾದ ಹಣ್ಣುಗಳು, ತರಕಾರಿಗಳು, ಪ್ರಾಣಿ–ಪಕ್ಷಿಗಳುನ್ನು ಇನ್ನೂ ಮುಂತಾದ ವಿವಿಧ ರೀತಿಯ ಕಲಾಕೃತಿಗಳನ್ನು ತಯಾರಿಸುತ್ತಾರೆ.

ಕಲಾಕೃತಿಗಳ ವರ್ಗೀಕರಣಕ್ಕೆ ತಕ್ಕಂತೆ ಅವುಗಳಿಗೆ ಆಕಾರವನ್ನು ನೀಡಿ ಸುಂದರವಾದ ವಸ್ತುಗಳನ್ನಾಗಿ ತಯಾರಿಸುತ್ತಾರೆ. ಕಾಷ್ಠ ಪ್ರತಿಮೆಗಳನ್ನು ತಯಾರಿಸುವುದರ ಜೊತೆಗೆ ಈಗಿನ ಪೀಳಿಗೆಯವರು ಇಂತಹ ಸುಂದರ ಕಲಾಕೃತಿಗಳನ್ನು ಚೆನ್ನಾಗಿ ತಯಾರಿಸುತ್ತಾರೆ. ಈಗಿರುವ ಕಲಾವಿದರ ಪೂರ್ವಜರು ಕಾಷ್ಠದಲ್ಲಿ ಪ್ರತಿಮೆಗಳನ್ನು ತಯಾರಿಸುತ್ತಿದ್ದರು.

ಜಾತ್ರೆ, ಉತ್ಸವಗಳಲ್ಲಿ ಉಪಯೋಗಿಸುವ ರಥ, ಪಲ್ಲಕ್ಕಿಗಳಿಗೆ ಅಲಂಕರಕ್ಕಾಗಿ ಸುಂದರವಾದ ಕಾಷ್ಠದ ಗೊಂಬೆಗಳನ್ನು ತಯಾರಿಸಿಕೊಡುತ್ತಿದ್ದರು. ನಂತರದ ದಿನಗಳಲ್ಲಿ ಅವುಗಳಿಗೆ ಬೇಡಿಕೆ ಕಡಿಮೆಯಾದಂತೆ ಯುವಜನತೆಯ ಆಶೋತ್ತರಗಳಿಗೆ ಸ್ಪಂದಿಸುವಂತೆ ಆಧುನಿಕ ಕಲಾಕೃತಿಗಳ ನಿರ್ಮಾಣಕ್ಕೆ ಮುಂದಾದರು. ಕುಟುಂಬದವರ ಸಹಕಾರದಿಂದ ಇಂತಹ ಕಲಾಕೃತಿಯ ತಯಾರಿಕೆಯಲ್ಲಿ ಈಗಲೂ ತಮ್ಮನ್ನೂ ತೊಡಗಿಸಿಕೊಂಡಿದ್ದಾರೆ.

**ಗೋಕಾಕ್ ಕಾಷ್ಠ ಕಲೆಯ ಕಲಾಕೃತಿಗಳ ವರ್ಗೀಕರಣ**

1. ಹಣ್ಣುಗಳು
2. ತರಕಾರಿಗಳು
3. ಪ್ರಾಣಿ–ಪಕ್ಷಿಗಳು
4. ಮೂರ್ತಿಗಳು ಮತ್ತು ಆಟಿಕೆಯ ವಸ್ತುಗಳು

**1. ಹಣ್ಣುಗಳು**

ಪ್ರಕೃತಿಯಲ್ಲಿ ನಮಗೆ ದೊರಕುವ ಹಣ್ಣಗಳು ಈ ಕಾಷ್ಠ ಮಾಧ್ಯಮದಲ್ಲಿ ಮತ್ತೊಮ್ಮೆ ಜೀವ ಪಡೆಯುತ್ತವೆ. ನಿಸರ್ಗದತ್ತವಾಗಿ ಋತುಮಾನ, ಕಲಾಕ್ಕನುಗುಣವಾಗಿ ದೊರೆಯುವ ಹಣ್ಣುಗಳು ಇಲ್ಲಿ ರೂಪತಳೆದು ಯಾವಾಗಲೂ ವರ್ಷಪೂರ್ತಿ ಮಳೆ, ಚಳಿಗಾಳಿಯನ್ನದೇ ನೋಡುಗರನ್ನು ಮನತಣಿಸುತ್ತವೆ. ಹೀಗೆ ಇವುಗಳನ್ನು ನಿರ್ಮಿಸುವಲ್ಲಿ ಅವುಗಳ ಆಕಾರ,

[3] ಪಾಟೀಲ, ಎಸ್.ಸಿ. *ಕರ್ನಾಟಕದ ಜನಪದ ಚಿತ್ರಕಲೆ.* ಪುಟ, 256

ಗಾತ್ರ, ಬಳಕೆ ಇವೆಲ್ಲವುಗಳನ್ನು ಗಮನಕ್ಕೆ ತೆಗೆದುಕೊಂಡು ಬೇಡಿಕೆಗಳಿಗನುಸಾರವಾಗಿ ಇವುಗಳು ರಚನೆಯಾಗುತ್ತವೆ. ಒಂದು ಪೆಟ್ಟಿಗೆಯನ್ನು ತಯಾರಿಸಿಕೊಂಡು ಅದರಲ್ಲಿ ವಿವಿಧ ತರಹದ ಹಣ್ಣಗಳನ್ನು ಜೊಡಿಸಿಡುತ್ತಾರೆ. ಮೊದಲನೆಯದಾಗಿ ಪ್ರಕೃತಿ ನಿರ್ಮಿತ ವಸ್ತುಗಳ ವಸ್ತುವಿಷಯಕ್ಕೆ ಹತ್ತಿರವಾಗಿ ನೈಜತೆ ಮೂಡುವಂತೆ ಅವುಗಳನ್ನು ವಿಂಗಡಿಸಲಾಗುತ್ತದೆ. ಬಗೆ ಬಗೆಯ ಹಣ್ಣುಗಳ ಪ್ರತಿಕೃತಿಗಳನ್ನು ತಯಾರಿಸಿಕೊಳ್ಳುತ್ತಾರೆ. ಅವುಗಳೆಂದರೆ ದ್ರಾಕ್ಷಿ, ಸೇಬು, ಬಳೆಹಣ್ಣು, ಗೊಡಂಬಿ, ಕಿತ್ತಳೆ, ಮೊಸಂಬಿ, ಪೇರುಹಣ್ಣು, ಕಲ್ಲಂಗಡಿ ಹಣ್ಣು, ನಿಂಬೆ, ಗಜನಿಂಬೆ, ಸೀತಾಫಲ ಇನ್ನೂ ಮುಂತಾದವುಗಳು.

ಈ ವರ್ಗದಲ್ಲಿ ಬರುವ ವಸ್ತುಗಳ ಪಟ್ಟಿಯನ್ನು ಮಾಡಿಕೊಂಡು ನಂತರ ಕ್ರಮವಾಗಿ ಹಣ್ಣುಗಳ ಆಕಾರ, ಗಾತ್ರ, ಬಣ್ಣ ಇವುಗಳ ಮೇಲೆ ನಿರ್ಧರಿಸಿ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಕಲಾವಿದರು ಕಾಷ್ಠ ಮಾಧ್ಯಮದಲ್ಲಿ ಅವುಗಳಿಗೆ ರೂಪು ಕೊಡುತ್ತಾರೆ. ಅವುಗಳು ಕಟ್ಟಿಗೆಯಿಂದ ಮಾಡಿದವುಗಳೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅವು ಅಷ್ಟೊಂದು ನೈಜತೆಯಿಂದ ಕೂಡಿರುತ್ತವೆ. ಇಲ್ಲಿಯ ವರ್ಣವಿನ್ಯಾಸ ಪರಿಣಿತಿ, ಬಣ್ಣಗಳ ಮಿಶ್ರಣದ ರೀತಿಗಳು ಈ ಜನಪದ ಕಲಾವಿದರ ಪ್ರತಿಭೆಯನ್ನು ಮನಗೆ ತಿಳಿಸಿಕೊಡುತ್ತವೆ. ಇವರ ಅದ್ಭುತ ಕಲಾ ಸೃಷ್ಟಿ ನೋಡುಗರನ್ನು ಮೂಕವಿಸ್ಮಿತರನ್ನಾಗಿಸುತ್ತವೆ.

**2. ತರಕಾರಿಗಳು**

ನಿಸರ್ಗದಲ್ಲಿ ದೊರೆಯುವ ಖನಿಜ, ಪೋಷಕಾಂಶಗಳಿಂದ ಕೂಡಿರುವ ತರಕಾರಿಗಳನ್ನು ವರ್ಗೀಕರಿಸಿಕೊಳ್ಳುತ್ತಾರೆ. ಅಲ್ಲದೇ ಅವುಗಳ ವಸ್ತುವಿಷಯಕ್ಕೆ ಅನುಗುಣವಾಗಿ ಅವುಗಳ ಗಾತ್ರ, ಬಣ್ಣ, ಆಕಾರ ಇವೆಲ್ಲವುಗಳನ್ನು ಗಣನೆಗೆ ತೆಗೆದುಕೊಂಡು ತರಕಾರಿಗಳ ಪ್ರತಿಕೃತಿಗಳನ್ನು ನಿರ್ಮಾಣ ಮಾಡುತ್ತಾರೆ. ದೂರದಿಂದ ನೋಡಿದಾಗ ನೋಡುಗನಿಗೆ ತಕ್ಷಣ ಚಿತ್ತಭ್ರಮೆಯುಂಟು ಮಾಡುವಂತೆ ಕಾಷ್ಠ ಮಾಧ್ಯಮದಲ್ಲಿ ತರಕಾರಿಗಳು ರೂಪುಗೊಳ್ಳುತ್ತವೆ. ಉದಾಹರಣೆಗೆ ಬೆಂಡೆಕಾಯಿ, ಬದನೆಕಾಯಿ, ಹೀರೆಕಾಯಿ, ಈರುಳ್ಳಿ, ಮೂಲಂಗಿ, ನುಗ್ಗೆಕಾಯಿ, ಗಜ್ರೆ, ಟೋಮೆಟೋ ಇನ್ನೂ ಮುಂತಾದವುಗಳನ್ನು ರಚಿಸಲ್ಪಟ್ಟಿವೆ. ಇವುಗಳಲ್ಲಿ ಕಲಾವಿದನ ಪ್ರೌಢಿಮೆಯು ಎದ್ದುಕಾಣುತ್ತದೆ.

**3. ಪ್ರಾಣಿ–ಪಕ್ಷಿಗಳು**

ಪ್ರಾಣಿ–ಪಕ್ಷಿಗಳನ್ನು ಅವುಗಳ ಆಕಾರ, ಗಾತ್ರ, ಬಣ್ಣಕ್ಕೆ ಅನುಗುಣವಾಗಿ ವರ್ಗೀಕರಿಸಿಕೊಂಡು ಕಾಷ್ಠ ಮಾಧ್ಯಮದಲ್ಲಿ ರಚಿಸಲಾಗುತ್ತದೆ. ಕಲಾವಿದನ ಆಶಯಕ್ಕೆ ತಕ್ಕಂತೆ ರೂಪುಗೊಳ್ಳುವ ಈ ಕಲಾಕೃತಿಗಳು ನೋಡುಗನ ಮನಸ್ಸಿನಲ್ಲಿ ಅಚ್ಚಳಿಯದ ಪ್ರಭಾವವನ್ನು ಉಂಟುಮಾಡುವಲ್ಲಿ ಸಂಶಯವೇ ಇಲ್ಲ. ನಿಸರ್ಗದಲ್ಲಿ ಪ್ರಸ್ತುತ ಲಭ್ಯವಿರುವ ಪ್ರಾಣಿ–ಪಕ್ಷಿಗಳ ಪ್ರತಿಕೃತಿಗಳನ್ನು ತಯಾರಿಸುವಲ್ಲಿ ಇಲ್ಲಿನ ಕಲಾವಿದರು ತಮ್ಮ ಕೈಚಳಕವನ್ನು ತೋರಿಸಿದ್ದಾರೆ. ಉದಾಹರಣೆಗೆ ಕೋಳಿ, ಪಾರಿವಾಳ, ಗಿಳಿ, ಬಾತುಕೋಳಿ, ಪ್ರಾಣಿಗಳಲ್ಲಿ ಕುದುರೆ, ಸಿಂಹ, ಆನೆ ಇನ್ನೂ ಮುಂತಾದವುಗಳನ್ನು ಈ ಕಲಾಕೃತಿಗಳಲ್ಲಿ ಕಾಣಬಹುದಾಗಿದೆ.

**4. ಮೂರ್ತಿಗಳು ಮತ್ತು ಆಟಿಕೆಗಳು**

ವಸ್ತುಗಳ ವಿಂಗಡಣೆ ವಿಷಯದ ಆಧಾರದ ಮೇಲೆ ನಿರ್ಣಯಿಸುವಾಗ ಅವುಗಳ ಲಭ್ಯತೆ, ಗಾತ್ರ, ಬಣ್ಣ, ಆಕಾರಗಳಿಗೆ ಅನುಗುಣವಾಗಿ ಇಲ್ಲಿ ರೂಪಗಳನ್ನು ನಿರ್ಮಿಸಲಾಗುತ್ತದೆ. ಕಾಷ್ಠ ಮಾಧ್ಯಮದಲ್ಲಿ ಮೂರ್ತಿಗಳು, ಆಟಿಕೆಗಳು ಈ ರೀತಿಯಾಗಿ ವರ್ಗೀಕರಿಸಿಕೊಂಡು ವಸ್ತುಗಳನ್ನು ನಿರ್ಮಾಣ ಮಾಡಲಾಗುತ್ತದೆ. ದೇವಸ್ಥಾನಗಳಲ್ಲಿ ಜಾತ್ರೆ, ಉತ್ಸವಗಳ ಸಂದರ್ಭಗಳಲ್ಲಿ ಕಾಷ್ಠದಿಂದ ಕೆತ್ತಲ್ಪಟ್ಟ ದೇವರ ಸಣ್ಣ ಸಣ್ಣ ಮೂರ್ತಿಗಳನ್ನು ಪಲ್ಲಕ್ಕಿಯ ಸುತ್ತಲೂ ಕೆತ್ತುತ್ತಾರೆ. ಅಲ್ಲದೇ ಸುಂದರ ವಿನ್ಯಾಗಳನ್ನು ನಿರ್ಮಾಣ ಮಾಡುತ್ತಾರೆ. ಹಾಗೂ

ಮಕ್ಕಳ ಆಟಿಕೆಗಳನ್ನು ಸುಂದರವಾಗಿ ನಿರ್ಮಿಸಲಾಗುತ್ತದೆ. ಆಟಿಕೆಗಳಲ್ಲಿಯೂ ಜೀವಸೆಲೆಯನ್ನು ತುಂಬುವಂತೆ ಇಲ್ಲಿನ ಕಲಾವಿದರು ಶ್ರಮಿಸುತ್ತಾರೆ. ತಮ್ಮ ನಿರೀಕ್ಷೆಗೆ ತಕ್ಕಂತೆ ವಸ್ತುಗಳನ್ನು ನಿರ್ಮಿಸುವರು. ಕೃತಕವಾದರು ಅವುಗಳಲ್ಲಿ ಜೀವಂತಿಕೆಯನ್ನು ತುಂಬುದು ಸುಲಭಸಾಧ್ಯವಾಗದ ಮಾತು ಆದರೂ ಇದಕ್ಕೆ ಅಪವಾದವೆಂಬಂತೆ ಇಲ್ಲಿನ ಕಲಾವಿದರ ಕಲಾಪ್ರತಿಭೆಯು ಅತ್ಯಂತ ಅದ್ಭುತವಾಗಿದೆ.

ಪ್ರಮಾಣ ಬದ್ಧವಾದ ಮೂರ್ತಿಗಳ, ಆಕೃತಿಗಳ ನಿರ್ಮಾಣಕ್ಕೆ ಹೆಸರುವಾಸಿಯಾಗಿರುವ ಗೋಕಾಕ್ ಕಲಾವಿದರು ತಮ್ಮ ಕಲಾಪ್ರೌಢಿಮೆಯನ್ನು ಕಲಾಕೃತಿಗಳ ಮೂಲಕ ಹೊರ ಜಗತ್ತಿಗೆ ಪರಿಚಯಿಸುತ್ತಿದ್ದಾರೆ. ನಿಸರ್ಗಕ್ಕೆ ಮಾನವ ಎಂದೂ ಸಾಟಿಯಾಗಲಾರ ಆದರೂ ಗೋಕಾಕ್‌ನ ಕಲಾವಿದರು ತಮ್ಮ ಕಲಾಕೌಶಲ್ಯದಿಂದ ನಿಸರ್ಗಕ್ಕೆ ತುಂಬ ಹತ್ತಿರವಾಗಿದ್ದಾರೆ. ಕಲಾವಿದನಿಗಿರುವ ಸೂಕ್ಷ್ಮ ಕುಶಲತೆ, ಗ್ರಹಿಸುವಿಕೆ ಇವರಲ್ಲಿ ರಕ್ತಗತವಾಗಿ ಬಂದ ಗುಣ. ಹೀಗಾಗಿ ಇಂದು ನಿಸರ್ಗ ನಿರ್ಮಿತ ವಸ್ತುಗಳ ಪ್ರತಿಕೃತಿ ತಯಾರಿಸುವುದರಲ್ಲಿ ಗೋಕಾಕ್ ಕಲಾವಿದರು ಸಿದ್ಧಹಸ್ತರು.

**ಕಲಾಕೃತಿಗಳ ರಚನೆಯ ಪರಿಕರಗಳು**

ಈ ಗೋಕಾಕ್ ಕಲೆಯ ಕಲಾಕೃತಿಗಳನ್ನು ರಚಿಸಲು ತೀರಾ ಹಗುರವಾಗಿರುವ ಹಾರಿವಾಳ (ಹಲವಾಣ) ಎಂಬ ಮರದ ಕಟ್ಟಿಗೆಯನ್ನು ಬಳಸುತ್ತಾರೆ. ಈ ಕಲಾಕೃತಿಗಳನ್ನು ರಚಿಸಲು ಇಲ್ಲಿ ಹಾರಿವಾಳದ ಮರವನ್ನೇ ಹೆಚ್ಚಾಗಿ ಬಳಸುತ್ತಾರೆ. ಎಲೆ ತೋಟಗಳಲ್ಲಿ ಎಲೆಯ ಬಳ್ಳಿಯ ಆಧಾರಕ್ಕಾಗಿ ಈ ಮರಗಳನ್ನು ಬೆಳೆಸಿರುತ್ತಾರೆ. ಈ ಮರದಿಂದ ಕಲಾಕೃತಿಗಳನ್ನು ತಯಾರಿಸಲು ಬಳಸುವ ಇನ್ನೂಳಿದ ಪರಿಕರಗಳೆಂದರೆ ಉಳಿ, ಸುತ್ತಿಗೆ, ಅರ, ರಂಧ್ರ ಮಾಡಲು ಚಿಕ್ಕ ತುದಿ ಅಥವಾ ಮೊನೆಯಿರುವ ಮೊಳೆಗಳು, ಪಾಲಿಶ್ ಕಾಗದಗಳು, ಅಂಟುವಾಳದ ಕಾಯಿಂದ ಸೋಸಿದ ನೀರು, ಅಂಟು, ಚಾಕ್‌ಪೌಡರ್, ಬಣ್ಣಗಳು ಹಾಗೂ ಕುಂಚಗಳು ಹೀಗೆ ಇಂತಹ ಕಲಾಪರಿಕರಗಳನ್ನು ಗೋಕಾಕ್ ಕಾಷ್ಠ ವಸ್ತುಗಳ ತಯಾರಿಕೆಗೆ ಬಳಸಲಾಗುತ್ತದೆ.

**ಸಿದ್ಧತಾ ವಿಧಿ–ವಿಧಾನ**

ಕಲಾಕೃತಿಗಳನ್ನು ರಚನೆ ಮಾಡುವ ಮೊದಲು ಹಾರಿವಾಳದ ಮರವನ್ನು ಕಡಿದು ಕಟ್ಟಿಗೆಯನ್ನು ಬಿಸಿಲಿನಲ್ಲಿ ಪೂರ್ತಿಯಾಗಿ ಒಣಗಿಸುತ್ತಾರೆ. ನಂತರ ಅದರ ಮೈಮೇಲಿನ ಮುಳ್ಳುತೊಗಟೆಯನ್ನೆಲ್ಲ ತೆಗೆಯುತ್ತಾರೆ. ವಸ್ತುಗಳ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿಕೊಂಡು ಕಟ್ಟಿಗೆಯನ್ನು ಆ ವಸ್ತುವಿಷಯಕ್ಕೆ ತಕ್ಕಂತೆ ಆಕಾರ ಬರುವ ಹಾಗೆ ಕೊರೆದುಕೊಳ್ಳುತ್ತಾರೆ. ಇದು ಕಲಾವಿದನ ಜಾಣ್ಮೆಯ ಪರೀಕ್ಷೆಯ ಮೊದಲ ಹೆಜ್ಜೆಯಾಗಿರುತ್ತದೆ. ತದನಂತರ ಕೊರೆದುಕೊಂಡ ಆ ಆಕೃತಿಯ ಮರದ ತುಂಡಿಗೆ ಚಾಕ್‌ಪೌಡರ್‌ನ್ನು ಹಚ್ಚುತ್ತಾರೆ. ಒಣಗಿದ ನಂತರ ಪಾಲಿಶ್ ಪೇಪರನಿಂದ ಉಜ್ಜುತ್ತಾರೆ. ಆಕೃತಿಯ ಮೇಲ್ಮೈಯನ್ನು ಚೆನ್ನಾಗಿ ಸವರುತ್ತಾರೆ. ಹೀಗೆ ಈ ಪ್ರಕ್ರಿಯೆ ನಾಲ್ಕೈದು ಬಾರಿ ನಡೆಯುತ್ತದೆ. ಹೀಗೆ ಮಾಡಿದಾಗ ಆ ಕೃತಿಯ ಮೇಲ್ಮೈ ನುಣುಪಾಗುತ್ತದೆ. ಇದನ್ನು ಹಚ್ಚಿದ ನಂತರ ಅಂಟವಾಳ ಕಾಯಿಯನ್ನು ನೀರಿನಲ್ಲಿ ಚೆನ್ನಾಗಿ ನೆನೆಸಿಟ್ಟು ಎರಡು ಮೂರು ದಿವಸ ಬಿಡುತ್ತಾರೆ. ಇದಾದ ನಂತರ ಆ ನೀರನ್ನು ಒಂದು ಬಾಟಲಿನಲ್ಲಿ ಸೋಸಿ ತೆಗೆದು ಇಡುತ್ತಾರೆ. ಒಂದು ದಿವಸ ಬಿಟ್ಟು ಮರುದಿನವೇ ಆರಿಸಿದ ಅಂಟುವಾಳದ ನೀರನ್ನು ಕೊರೆದಿಟ್ಟ ವಸ್ತುಗಳಿಗೆ ಚೆನ್ನಾಗಿ ಲೇಪನ ಮಾಡುತ್ತಾರೆ.

ಹೀಗೆ ಈ ಪ್ರಕ್ರಿಯೆಯನ್ನು ಎರಡು ಮೂರು ಬಾರಿ ಮಾಡಲಾಗುತ್ತದೆ. ಕಟ್ಟಿಗೆಯಲ್ಲಿರುವ ಬಿರುಕು, ತಗ್ಗುಗಳನ್ನು ಲಾಂಬಿಯಿಂದ ತುಂಬಿಕೊಂಡು ಆರಲು ಬಿಡುತ್ತಾರೆ. ನಂತರ ಅದನ್ನು ಪುಡಿ ಬಣ್ಣವನ್ನು ನೀರಿನಲ್ಲಿ ಮಿಶ್ರಣಗೊಳಿಸಿ, ಲೇಪಿಸಿದ ನಂತರ ಆಕೃತಿಗಳ ಮೇಲೆ ಕ್ಲಿಯರ್ ವಾರ್ನಿಸ್‌ನಿಂದ ಲೇಪನ ಮಾಡಲಾಗುತ್ತದೆ. ಆಯಾ ವಸ್ತುವಿನ ಗುಣ, ಬಣ್ಣಕ್ಕನುಗುಣವಾಗಿ ಬಣ್ಣವನ್ನು ತಿಳಿಯಾಗಿ

ಹೆಚ್ಚುತ್ತಾರೆ. ಮೂರ್ನಾಲ್ಕು ಬಾರಿ ವರ್ಣಲೇಪನದಿಂದ ಬೆಳಕು ನೆರಳುಗಳ ಛಾಯೆಯನ್ನು ವರ್ಣಗಳಲ್ಲಿ ಮೂಡಿಸುತ್ತಾರೆ.

**ವರ್ಣಗಳ ಬಳಕೆ**

ಇಲ್ಲಿ ತಯಾರುಗುವ ಕಲಾಕೃತಿಗಳ ರಚನೆಯಲ್ಲಿ ವರ್ಣಗಳನ್ನು ಉಪಯೋಗಿಸುವ ಮತ್ತು ಬಳಕೆಯಲ್ಲಿಯು ಒಂದು ವಿಧವಿದೆ. ಸ್ಥಳೀಯ ಕಲಾವಿದರು ಬಣ್ಣ ತಯಾರು ಮಾಡುವ ದೇಸಿ ರೀತಿಯನ್ನು ಅನುಸರಿಸುತ್ತಾರೆ. ಹಿಂದೆ ಬಳಸುತ್ತಿದ್ದಂತಹ ಬಳಪದ ಮಣ್ಣುಕಲ್ಲು, ಹಳದಿ ಮಣ್ಣುಕಲ್ಲು, ಕೆಂಪು ಮಣ್ಣುಕಲ್ಲು ಇವುಗಳು ಇಂದಿಗೂ ಪೇಟೆಯಲ್ಲಿ ಲಭ್ಯವಾಗುತ್ತವೆ. ಅವುಗಳನ್ನು ಅರೆದು ಪುಡಿಮಾಡಿ ಪ್ರಮಾಣಬದ್ಧವಾಗಿ ಅದಕ್ಕೆ ಅಂಟು ಹಾಕಿ ಉಜ್ಜಿ ಸೋಸಿ ಬಣ್ಣವನ್ನು ತಯಾರಿಸಲಾಗುತ್ತದೆ. ಅಂಟುನ್ನು ಹಾಕುವದರಿಂದ ಬಣ್ಣವು ಜಿಗುಟಾಗಿರಲು ಹಾಗೂ ಕೈಗೆ ಹತ್ತಬಾರದೆಂಬ ಉದ್ದೇಶವಾಗಿದೆ.

ಈಗ ಮಾರುಕಟ್ಟೆಯಲ್ಲಿ ವಿವಿಧ ಬಗೆಯ ಸಿದ್ಧ ಬಣ್ಣಗಳು ಲಭಿಸುತ್ತವೆ. ಆದರೆ ಅವುಗಳ ಆಯುಷ್ಯ ಕಡಿಮೆಯೆಂದು ಕಲಾವಿದರ ಅಭಿಪ್ರಾಯವಾಗಿದೆ. ದೇಸಿ ಪದ್ಧತಿಯ ಬಣ್ಣದ ಬಳಕೆಯ ಮಾಡುವುದರಿಂದ ಆ ಕಲಾಕೃತಿಗಳು ಹಲವಾರು ವರ್ಷಗಳ ಕಾಲ ಬಾಳಿಕೆ ಬರುತ್ತವೆ. ಅಲ್ಲದೇ ದೇಸಿ ಬಣ್ಣಗಳಿಂದ ರಚಿತವಾದ ಆಕೃತಿಗಳು ಬಳಕೆಯಾದಂತೆಲ್ಲ ತಮ್ಮ ಹೊಳಪು ಹೆಚ್ಚುತ್ತದೆ ಹೊರತು ಹೊಳಪು ಕಳೆದುಕೊಳ್ಳುವುದಿಲ್ಲ. ಇಲ್ಲಿನ ಕಲಾವಿದರ ಪ್ರಕಾರ ದೇಸಿ ಬಣ್ಣಕ್ಕೆ ಸುಮಾರು ನೂರು ವರ್ಷಗಳ ಕಾಲ ಆಯುಷ್ಯವಿದೆ ಎನ್ನುತ್ತಾರೆ.

**ಕಲಾ ಸಮುದಾಯ**

ಒಂದು ಕಾಲಕ್ಕೆ ಸುಮಾರು 150–200 ಜನ ಈ ಕಲೆಯಲ್ಲಿ ತೊಡಗಿರುತ್ತಿದ್ದರು. ಆದರೆ ಕ್ರಮೇಣ ಈ ಕಲೆಗೆ ಬೇಡಿಕೆ ಇಲ್ಲವಾಗಿದೆ. ಈ ಮನೆತನದವರು ಬೇರೆ ಉದ್ಯೋಗಗಳಿಗೆ ಸಹಜವಾಗಿ ಅಂಟಿಕೊಂಡಿದ್ದಾರೆ. ಈಗ ಈ ಕಲೆಗಾರಿಕೆ ಮಾಡುವವರು 20 ರಿಂದ 25 ಜನ ಇರುವುದು ಕಂಡುಬರುತ್ತದೆ. ಈಗಿರುವ ಅತ್ಯಂತ ಪ್ರಸಿದ್ಧ ಕಲಾವಿದರೆಂದರೆ ಆನಂದರಾವ್, ವಾಸುದೇವ್ ರಾವ್, ಅಪ್ಪಾರಾವ್, ಮಾರುತಿರಾವ್ ಮತ್ತು ಸಿದ್ದಪ್ಪ ಬಳವಂತ ಇಗವೆ ಇವರು ಈಗಲೂ ಜಿನಗಾರಿಕೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರ ಗುರುಗಳು ಹಾಲಪ್ಪ ಸಿದ್ದಲಿಂಗಪ್ಪ ಬೆಳಗಾವೆ ಇವರ ತಂದೆಯ ಕಾಲದಿಂದಲೂ ಜಿನಗಾರಿಕೆಯನ್ನು ಮಾಡಿಕೊಂಡು ಬಂದಿದ್ದಾರೆ. ಇವರ ತಂದೆಯ ಹೆಸರು ಬಳವಂತರಾವ್ ತಾಯಿ ವಿಮಲಾಬಾಯಿ. ಇವರ ಮಗ ಸಿದ್ದಪ್ಪ ಇಗವೆ. ಇವರು ಹುಟ್ಟಿದ್ದು ಗೋಕಾಕ್‌ನಲ್ಲಿ, ಅವರ ವಿದ್ಯಾಭ್ಯಾಸವು ಇಲ್ಲಿಯೇ ನಡೆಯಿತು. ಮೆಟ್ರಿಕ್ ವರೆಗು ನಡೆದ ವಿದ್ಯಾಭ್ಯಾಸವು ಆರ್ಥಿಕ ಸಮಸ್ಯೆಯಿಂದ ಮುಂದುವರೆಸಲು ಆಗಲಿಲ್ಲ. ಇವರಿಗೆ ಕರಕುಶಲ ಕಲೆಯಲ್ಲಿ ತುಂಬ ಆಸಕ್ತಿ ಇದ್ದು, ಕಲೆಗಾಗಿ ಜೀವಿಸುವ ವ್ಯಕ್ತಿಯಾಗಿದ್ದಾರೆ. ಈ ಕಲೆಯು ಅವರ ಮನೆತನದಿಂದ ಬಂದಂತಹ ಕಲೆಯಾಗಿದೆ. ಈ ಜಿನಗಾರಿಕೆಯ ಕೆಲಸಕ್ಕೆ ತುಂಬಾ ಗೌರವವನ್ನು ನೀಡುತ್ತಾರೆ.

ಹವ್ಯಾಸಕ್ಕಾಗಿ ಈ ಕಲೆಯನ್ನು ಮುಂದುವರೆಸಿಕೊಂಡು ಬಂದಂತೆ ಇದರಲ್ಲಿ ಆಸಕ್ತಿ ಹುಟ್ಟಿ ಇದನ್ನೇ ಕ್ರಮೇಣ ಉದ್ಯೋಗವನ್ನಾಗಿಸಿಕೊಂಡ ಹಲವಾರು ಕಲಾವಿದರಲ್ಲಿ ಲಕ್ಷ್ಮಣ ಸುಬ್ಬರಾವ್ ನೇರವಾಡಿ ಇವರೂ ಒಬ್ಬರು. ಇವರು ಹುಟ್ಟಿದ್ದು 1962 ರಲ್ಲಿ ಗೋಕಾಕ್‌ನಲ್ಲಿ ಜನಿಸಿದ ಇವರು ಮಟ್ರಿಕ್ ವರೆಗು ತಮ್ಮ ವಿದ್ಯಾಭ್ಯಾಸವನ್ನು ಮಾಡಿದ್ದಾರೆ. ಇವರ ಕುಟುಂಬವು ಕೂಡ ಈ ಕರಕುಶಲ ಕೈಗಾರಿಕೆಯನ್ನು ಮಾಡುತ್ತ ಬಂದಿದ್ದಾರೆ. ಗೋಕಾಕ್‌ನಲ್ಲಿ ಇವರು ಗೋಕಾಕ್ ಚಿತ್ರಗಾರ ಸಹಕಾರಿ ಸಂಘದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. (1996 ರಿಂದ 2005ರ ವರೆಗೆ)

ಇದಕ್ಕೆ ಮುಂಚೆ 1993 ರಲ್ಲಿ ಸಂಘದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ಒಟ್ಟಿನಲ್ಲಿ ಇವರು ಗೋಕಾಕ್‌ನಲ್ಲಿ ಬಣ್ಣಗಾರರು, ಜಿನಗಾರರು, ಚಿತ್ರಗಾರರು ಎಂಬ ಹೆಸರುಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಅದೇ ರೀತಿ ಇನ್ನೂ ಅನೇಕ ಕಲಾವಿದರುಗಳಾದ ಸಂಬಾಜಿ, ಶಂಕರ, ಶಶಿಕಾಂತ ಚಿತ್ತಾಳೆ, ಆನಂದ ತುಕಾರಾಮ, ಜೋಶಿ, ಶಿವಾಜಿ, ಸಂತ್ರಾನ್ ಕಾಗಿಯನ್‌ಕರ್ ಹೀಗೆ ಹಲವಾರು ಕಲಾವಿದರು ಈ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಈ ವೃತ್ತಿಯೇ ಇವರ ಜೀವನಕ್ಕೆ ಆಧಾರವಾಗಿದೆ. ಇವರ ಬದುಕೇ ಬಣ್ಣದ ಬದುಕು ಎಂದು ಹೇಳಬಹುದು. ಈ ಕಲೆಯಲ್ಲಿ ಸಾಕಷ್ಟು ಅನುಭವವನ್ನು ಗಳಸಿದ ಪ್ರಸ್ತುತ ಹಿರಿಯ ಕಲಾವಿದರೆಂದರೆ ಗುರುನಾಥ ಚಿತಾರೆ, ದತ್ತಾತ್ರೇಯ ಚವ್ಹಾಣ, ಚೂಡಾಮಣಿ ಹಾಗೂ ವಾಗಲೇಯವರು.

ತರಬೇತಿ ಶಾಲೆಯಲ್ಲಿ ಕಲಿತ ಗುರುಸಾತಯ್ಯ ಕೆಳಗಿನಮಠ ಎನ್ನುವವರು ಅತ್ಯಂತ ಪ್ರಸಿದ್ಧ ಕಲಾವಿದರಾಗಿದ್ದು, ಇತ್ತೀಚೆಗೆ ತೀರಿಕೊಂಡರು. ಇವರ ಅಣ್ಣಂದಿರು ಕೂಡ ತರಬೇತಿಯನ್ನು ಪಡೆದುಕೊಂಡವರಾಗಿದ್ದಾರೆ. ಗುರುನಾಥ ಚಿತ್ತಾರೆ ಎಂಬ ಮತ್ತೊಬ್ಬ ಕಲಾವಿದನು ಬಣ್ಣಗಾರಿಕೆಯಲ್ಲಿ ತುಂಬ ನೈಪುಣ್ಯತೆಯನ್ನು ಸಾಧಿಸಿದ್ದಾರೆ. ಶಿವ, ರಾಮ, ಕೃಷ್ಣ, ವೀರಭದ್ರ, ದುರುಗವ್ವ ಮತ್ತು ದ್ಯಾಮವ್ವ ಹೀಗೆ ಅನೇಕ ಮೂರ್ತಿಗಳಿಗೆ ಒಪ್ಪುವ ಬಣ್ಣವನ್ನು ಇವರು ಲೇಪಿಸುತ್ತಿದ್ದರು. ಈತನು ಹಳೆಯ ಮೂರ್ತಿಗಳನ್ನು ತನ್ನ ವರ್ಣವಿನ್ಯಾಸ ಕೌಶಲ್ಯದಿಂದ ಹೊಸತನದ ಭಾವನೆಯನ್ನು ತುಂಬುತ್ತಿದ್ದನು. ಗೋಕಾಕ್ ನಗರವು ಬಣ್ಣಗಾರಿಕೆಯ ಅನೇಕ ಕುಟುಂಬಗಳಿಗೆ ಜೀವನೋಪಾಯದ ಮಾರ್ಗವಾಗಿದೆ. ಪುರುಷರಷ್ಟೇ ಅಲ್ಲದೆ ಕುಟುಂಬದ ಸ್ತ್ರೀಯರು ಈ ಕೆಲಸದಲ್ಲಿ ಭಾಗಿಯಾಗುತ್ತಿರುವುದು ಶ್ಲಾಘನೀಯ. ಕುಟುಂಬದ ವರಮಾನವನ್ನು ಹೆಚ್ಚಿಸುವಲ್ಲಿ ಸ್ತ್ರೀ–ಪುರುಷರೆನ್ನದೆ ಎಲ್ಲರೂ ದುಡಿಯುತ್ತಾರೆ. ಹೀಗೆ ಕಷ್ಟ–ನಷ್ಟದ ಮಧ್ಯದಲ್ಲೂ ಅನೇಕ ವೃತ್ತಿನಿರತ ಈ ಕಲಾವಿದರ ಕುಟುಂಬಗಳು ಇನ್ನೂ ಈ ಕಲೆಯ ಉಳಿಯುವಿಕೆಗಾಗಿ ಶ್ರಮಿಸುತ್ತಿದ್ದಾರೆ.

ಈ ಗೋಕಾಕ್ ಕಲೆಯನ್ನು ಉಳಿಸಿ ಬೆಳೆಸಿ, ಸಂರಕ್ಷಣೆಯ ದೃಷ್ಟಿಯಿಂದಾಗಿ ಒಂದು ಸಂಘ ಅಸ್ತಿತ್ವದಲ್ಲಿದೆ. ಈ ಗೋಕಾಕ್ ಚಿತ್ರಗಾರರ ಸಹಕಾರಿ ಸಂಘವನ್ನು ಎಲ್ಲ ಕಲಾವಿದರು ಸೇರಿ ರಚಿಸಿಕೊಂಡಿದ್ದಾರೆ. ಈ ಸಂಘದ ವತಿಯಿಂದ ಕಲಾಕೃತಿಗಳ ಮಾರಾಟಕ್ಕಾಗಿ ಹಾಗೂ ಪ್ರಚಾರಕ್ಕಾಗಿ ಮಾರಾಟ ಮಳಿಗೆಯನ್ನು ಸ್ಥಾಪಿಸಿದ್ದಾರೆ. ಈ ರೀತಿಯ ಸಂಘವನ್ನು ರಚಿಸಿಕೊಳ್ಳುವ ಕಾರಣವೇನೆಂದರೆ ಸರ್ಕಾರದ ವತಿಯಿಂದ ಯಾವುದೇ ಸೌಲಭ್ಯಗಳು ಇಲ್ಲಿನ ಕಲಾವಿದರಿಗೆ ದೊರಕಿಲ್ಲ. ಹಾಗಾಗಿ ತಮ್ಮ ಕುಂದು ಕೊರತೆಗಳನ್ನು ಪರಿಹರಿಸಿಕೊಳ್ಳಲು ಈ ಸಂಘವನ್ನು ಅಸ್ತಿತ್ವಕ್ಕೆ ತಂದಿದ್ದಾರೆ.

**ಆಕರ ಗ್ರಂಥಗಳು**


- ಅನುರಾಧ ಯ. ದೀಕ್ಷಿತ. (1997). ಈ ಹಣ್ಣು ಕಣ್ಣಿಗಷ್ಟೆ, ಬಾಯಿಗಲ್ಲ. *'ಸುಧಾ' ವಾರಪತ್ರಿಕೆ.*
- ಗವಿಸಿದ್ಧ ಎನ್. ಬಳ್ಳಾರಿ. (1996). ಕಿನ್ನಾಳದ ಗೊಂಬೆಗಳು. ಗುಲ್ಬರ್ಗಾ ವಿ.ವಿ.
- ಕರೀಗೌಡ ಬೀಚನಹಳ್ಳಿ. (ಸಂ.). (2000). *ಕರಕುಶಲ ಕಲೆಗಳು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಕಾಳೆ ಕೆ.ವಿ. (2000). *ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಮಹಾಲಿಂಗ ಮಂಗಿ. (1993). ಗೋಕಾಕದ ಜೀವಂತ ಕಲೆ – ಜೀನಗಾರಿಕೆ. *ಜನಪದ.*
- ನಾರಾಯಣರಾವ್ ಎಂ.ವಿ. (1997). *ನಮ್ಮ ಕರಕುಶಲ ವಸ್ತುಗಳು.* ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ.

- ಪಾಟೀಲ ಎಸ್.ಸಿ. (1993). *ಕರ್ನಾಟಕ ಜನಪದ ಚಿತ್ರಕಲೆ* . ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ.
- ಪಾಟೀಲ ಎಸ್.ಸಿ. (1995). ಗೋಕಾಕದ ಅಂದದ ಚೆಂದದ ಆಟಿಕೆಗಳು. *ಕರ್ಮವೀರ ವಾರಪತ್ರಿಕೆ*
- ಪಾಟೀಲ, ಎಸ್.ಸಿ ಮತ್ತು ಶ್ರೀ ಸತ್ಯಾನಂದ ಪಾತ್ರೋಟ. (ಸಂ.). *ನಿಜದ ನೆಲೆ.* (ಡಾ. ಬಿ.ಕೆ. ಹಿರೇಮಠ ಅಭಿನಂದನ ಗ್ರಂಥ), ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ.
- ಸುರೇಶ, ಡಿ. (1995). *ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು.* ರೇಣುಕಾ ಮುದ್ರಣಾಲಯ,


**ಅನುಬಂಧ–1**

**ಗೋಕಾಕ್ ಕಾಷ್ಠ ಕಲೆಯ ಛಾಯಾ ಚಿತ್ರಗಳು**



**ಪಕ್ಷಿಗಳು**



**ಗೋಕಾಕ್ ಕಾಷ್ಠ ಕಲೆಗೆ ಬಳಸುವ ಹಾರವಾಳ ಕಟ್ಟಿಗೆ**







**ಹಣ್ಣು ಮತ್ತು ತರಕಾರಿಗಳು**



ವೃತ್ತಿ ನಿರತ ಕುಟುಂಬ



ಗೋಕಾಕ್ ಕಾಷ್ಠಕಲೆ ತಯಾರಿಕೆಗೆ ಬಳಸುವ ಉಪಕರಣಗಳು



ಗೋಕಾಕ್ ಕಾಷ್ಠಕಲೆ ತಯಾರಿಕೆಗೆ ಬಳಸುವ ಮರದ ಅಂಟು



ಗೋಕಾಕ್ ಕಾಷ್ಠಕಲೆ ತಯಾರಿಕೆಗೆ ಬಳಸುವ ಬಣ್ಣ ಮತ್ತು ಕುಂಚಗಳು



ಗೋಕಾಕ್ ಚಿತ್ರಗಾರ ಸಹಕಾರಿ ಉತ್ಪದಾಕ ಸಂಘದ ಕಲಾವಿದರು

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 73-77
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಶೋಷಿತರ ಧ್ವನಿಯಾಗಿ ಪ್ರೊ. ಬಿ. ಕೃಷ್ಣಪ್ಪ

**ಶಿವಾನಂದ ಶಿರಸಂಗಿ[1] ಮತ್ತು ಡಾ. ಎಂ. ಬಿ. ದಳಪತಿ[2]**

[1] ಸಂಶೋಧನಾ ವಿದ್ಯಾರ್ಥಿ, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

[2] ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

***Abstract:***

*ಇತಿಹಾಸವನ್ನು ಮರೆತವನು ಇತಿಹಾಸವನ್ನು ಸೃಷ್ಟಿಸಲಾರನು, ಚರಿತ್ರೆಯನ್ನು ಯಾರೋ ಸಹ ನಿರ್ಮಿಸುವುದಿಲ್ಲ, ಚರಿತ್ರೆಯ ಅರಿವು ಇದ್ದವರು ಅದರ ವಾರಸುದಾರರಾಗುತ್ತಾರೆ. ಅಲ್ಲಿಗೂ ಇತಿಹಾಸ ನಿಲ್ಲುವುದಿಲ್ಲ, ಅಂಥ ವಾರಸುದಾರರ ಚಾರಿತ್ರ್ಯವನ್ನು ಜನರು ನಿರ್ಧರಿಸುತ್ತಾರೆ. ಎಲ್ಲರೂ ಮಲಗಿದ್ದಾಗ ಕೆಲವರು ದರೋಡೆ ಮಾಡುತ್ತಾರೆ. ಇದು ಇಲ್ಲಿಯವರೆಗಿನ ಭಾರತದ ಪರಿಸ್ಥಿತಿ. ಈಗ ಬಹುಜನರು ಎಚ್ಚರಗೊಂಡಿದ್ದಾರೆ, ಹಾಗಾಗಿ ಅಲ್ಪವರ್ಗದ ದರೋಡೆಕೋರರಿಗೆ ಕಷ್ಟವಾಗಿದೆ. ಎಲ್ಲವನ್ನು ಕಳೆದುಕೊಂಡು ದೌರ್ಜನ್ಯ, ಜಾತಿ ವಿಷಬೀಜ ಬಿತ್ತಿ ಸಮಾಜ ಒಡೆಯುವ ನಿಟ್ಟಿನಲ್ಲಿ (ಶಕುನಿ) ಕಾರ್ಯವನ್ನು ಸಾಧಿಸುತ್ತಿಸುತ್ತಿದ್ದಾರೆ. ಇದನ್ನು ತಡಗಟ್ಟುವ ನಿಟ್ಟಿನಲ್ಲಿ ಚರಿತ್ರೆಯಲ್ಲಿ ಮಾನವತಾವಾದದ ಪ್ರತಿಪಾದನೆ ಪ್ರಬಲವಾಗಿ ಬೇರೂರುತ್ತಿದೆ. ಇಂತಹ ಸನ್ನಿವೇಶದಲ್ಲಿ ಶೋಷಿತರ ಶೋಷಣೆಯನ್ನು ಸಂಪೂರ್ಣವಾಗಿ ನಿರ್ನಾಮವಾಗಬೇಕು ಎನ್ನುವುದು ಪ್ರೊ. ಬಿ. ಕೃಷ್ಣಪ್ಪನವರ ಅಚಲ ನಿಲುವುವಾಗಿತ್ತು. ಅವರ ಜೀವನನೂದ್ದಕ್ಕೂ ದಲಿತರ, ಮಹಿಳೆಯರ, ಹಿಂದೂಳಿದವರ ಸಮಸ್ಯೆಗಳಿಗೆ ಪೂರ್ಣವಿರಾಮವನ್ನು ನೀಡಲು ಹೋರಾಟವನ್ನು ಹಮ್ಮಿಕೊಂಡು ಸಮಾಜಕ್ಕೆ ನ್ಯಾಯವನ್ನು ಒದಗಿಸುಲ್ಲಿ ಯಶಸ್ವಿಯಾದರು. ಪ್ರಸ್ತುತ ಲೇಖನದಲ್ಲಿ ಪ್ರೊ. ಬಿ. ಕೃಷ್ಣಪ್ಪನವರ ಹೋರಾಟ ಹಾದಿಯನ್ನು ವಿಶ್ಲೇಷಿಸಲಾಗಿದೆ.*

**Keywords:** *ಶೋಷಿತ ಸಮುದಾಯ, ದಲಿತ ಚಳವಳಿ, ಶೋಷಿತರ ಧ್ವನಿ, ಪ್ರೊ.ಬಿ.ಕೃಷ್ಣಪ್ಪ, ದಲಿತ ಸಂಘರ್ಷ ಸಮಿತಿ.*

## ಪೀಠಿಕೆ

ಪ್ರೊ. ಬಿ. ಕೃಷ್ಣಪ್ಪನವರು ನಾಡಿನ ಲಕ್ಷಾಂತರ ಶೋಷಿತ ಧ್ವನಿಗಳಿಗೆ ಧ್ವನಿಯಾದವರು. 'ಹಿಂದೂ ಸಮಾಜ ಅಸಮಾನತೆಯ ತವರು' ಎಂಬ ಸಾಮಾನ್ಯ ನುಡಿಯಂತೆ ಅದು ಇಂದಿಗೂ ಪ್ರಚಲಿತದಲ್ಲಿದೆ. ಭಾರತದ ಎಲ್ಲ ಭಾಗಗಳಲ್ಲಿಯೂ ಹರಡಿಕೊಂಡಿರುವ ಅಸ್ಪೃಶ್ಯರು ಸಾವಿರಾರು ವರ್ಷಗಳಿಂದಲೂ ಶೋಷಣೆಗೆ ಒಳಗಾಗಿದ್ದಾರೆ. ಅಂದಿನ ಅಸ್ಪೃಶ್ಯರೆ ಇಂದಿನ ದಲಿತ ವರ್ಗ. ಈ ಹಿಂದೂ ಧರ್ಮದಲ್ಲಿರುವ ಅಸ್ಪೃಶ್ಯತೆ ಆಚರಣೆ, ಜಾತಿತಾರತಮ್ಯ ಮತ್ತು ಅಮಾನವೀಯ ನಡೆಗೆ ಆಕ್ರೋಶ. ನಮ್ಮ ಜನರ ಮೇಲೆ ನಡೆಯುತ್ತಿರುವ ಅನ್ಯಾಯ, ದೌರ್ಜನ್ಯದ ವಿರುದ್ಧ ಸಂಘಟಿತ ಹೋರಾಟ ಮಾಡದಿದ್ದರೆ ನಮ್ಮ ಜನಾಂಗಕ್ಕೆ ಉಳಿಗಾಲವಿಲ್ಲ ಎಂದು ದಲಿತರ ಸ್ಥಿತಿಗತಿಗೆ ಸದಾ ಮಿಡಿಯುತ್ತಿದ್ದ ಈ ಅಂತಃಕರಣದ ವ್ಯಕ್ತಿಯೇ ಪ್ರೊ. ಬಿ. ಕೃಷ್ಣಪ್ಪನರು. ಇವರು ದಾವಣಗೆರಿ ಜಿಲ್ಲೆ

***Please cite this article as:*** ಶಿವಾನಂದ ಶಿರಸಂಗಿ ಮತ್ತು ಎಂ. ಬಿ. ದಳಪತಿ. (2024). ಶೋಷಿತರ ಧ್ವನಿಯಾಗಿ ಪ್ರೊ. ಬಿ. ಕೃಷ್ಣಪ್ಪ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(2), 73–77

ಹರಿಹರದಲ್ಲಿ ಜೂನ್ 9, 1938 ರಂದು ಬಸಪ್ಪ ಮತ್ತು ಚೌಡಮ್ಮ ದಂಪತಿಗೆ ಮಗನಾಗಿ ಜನಿಸಿದರು.

ಪ್ರೊ. ಬಿ. ಕೃಷ್ಣಪ್ಪನವರು ಸ್ನಾತಕೋತ್ತರ ಪದವಿ ಪಡೆದ ನಂತರ 1964 ರಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರದ ಲಾಲಬಹದ್ದೂರ್ ಶಾಸ್ತ್ರೀ ಕಾಲೇಜಿನಲ್ಲಿ ಪ್ರಥಮವಾಗಿ ಅರೆಕಾಲಿಕ ಕನ್ನಡ ಉಪನ್ಯಾಸಕ ಹುದ್ದೆಗೆ ಸೇರಿಕೊಂಡರು. ನಂತರ ಪೂರ್ಣಕಾಲಿಕ ಉಪನ್ಯಾಸಕರಾಗಿ ತಮ್ಮ ವೃತ್ತಿಯನ್ನು ಭದ್ರಾವತಿಯಲ್ಲಿ ಪ್ರಾರಂಭ ಮಾಡಿದರು. ಅಲ್ಲಿನ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು ಕಾರ್ಖನೆಯ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಮತ್ತು ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ. ದಲಿತ ಸಂಘರ್ಷ ಸಮಿತಿಯನ್ನು ವ್ಯವಸ್ಥಿತವಾಗಿ ಒಂದು ಪ್ರಬಲ ಚಳುವಳಿಯನ್ನಾಗಿ ರೂಪಿಸಿದವರಲ್ಲಿ ಪ್ರೊ. ಕೃಷ್ಣಪ್ಪ ಮೊದಲಿಗರು. ವೃತ್ತಿಯಲ್ಲಿರುವಾಗ ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶನ, ಸಹಕಾರ, ಸಹಾಯ ನೀಡುವದರ ಜೊತೆಗೆ ಬಡವರಿಗೆ ಸದಾ ಸಹಾಯಹಸ್ತ ಚಾಚುತ್ತಿದ್ದರು. ಪ್ರೊ. ಬಿ. ಕೃಷ್ಣಪ್ಪನವರು ಗುಡಿಸಲ್ಲಿ ಹಚ್ಚಿರುವ ದೀಪ ಆರದಂತೆ ಕಾಪಾಡಿಕೊಳ್ಳಬೇಕು ಎಂಬ ಸಂದೇಶವನ್ನು ನೊಂದ ಜನರಿಗೆ ಕರೆ ನೀಡಿದರು. ನೇರ ನುಡಿ, ಮಾತಿನಲ್ಲಿ ಕಪಟವಿರದ ಶಿಸ್ತಿನ ಸಿಪಾಯಿ. ತಮ್ಮ ಜೀವನೂದ್ದಕ್ಕು ಎಲ್ಲರಿಗೂ ಗೌರವ ಕೊಟ್ಟು ಶೋಷಿತರ ಪರವಾಗಿ ಅಸಮಾನತೆ ತೊಡೆದು ಹಾಕಲು ತೀವ್ರತರವಾದ ಚಳುವಳಿ ಕೈಗೊಂಡು ನ್ಯಾಯ ಒದಗಿಸುವಲ್ಲಿ ಇವರ ಪಾತ್ರ ಹಿರಿದ್ದಾಗಿದೆ.

ಯಾವುದೇ ವಿಷಯದಲ್ಲಿ ನಿಸ್ಸಕಾಳಜಿತವನ್ನು ಎಂದು ಪ್ರದರ್ಶಿಸದ ನಾಯಕರಾಗಿದ್ದರು. ಪ್ರಮುಖವಾಗಿ ಹೋರಾಟದಲ್ಲಿ ಬೇರೆಯವರೊಡನೆ ಹೆಚ್ಚು ತಮಾಷೆಯಾಗಲಿ ಮೈಗಳ್ಳತನವನ್ನು ಮಾಡುತ್ತಿರಲಿಲ್ಲ. ವಿಷಯಗಳನ್ನು ಚರ್ಚಿಸುವಾಗ ಚಿಂತನಾತ್ಮಕವಾಗಿ ಗಂಭೀರತೆಯಿಂದ ಅಂತಿಮ ಹಂತಕ್ಕೆ ತಲುಪಿ ಪೂರ್ಣಪ್ರಮಾಣದಲ್ಲಿ ಫಲಿತಾಂಶವನ್ನು ನೀಡುತ್ತಿದ್ದರು. ಧಣಿವರಿಯದ ಈ ನಾಯಕ ದಿನಪೂರ್ತಿ ಸಾಕಷ್ಟು ಜವಾಬ್ದಾರಿಯನ್ನು ನಿರ್ವಹಿಸಿ ಸಂಘಟನೆ, ಹೋರಾಟಕ್ಕೆ ಹೆಚ್ಚಿನ ಸಮಯ ಕೊಟ್ಟು ತಮ್ಮ ವೈಯಕ್ತಿಕ ಸಂತೋಷವನ್ನು ತ್ಯಜಿಸಿ ದೀನ ದಲಿತರಿಗಾಗಿ ಶ್ರಮಿಸಿದರು. ಮೇಲ್ವರ್ಗದವರ ದೌರ್ಜನ್ಯದ ಜೊತೆಗೆ ಸರ್ಕಾರದ ನಿರ್ಲಕ್ಷ್ಯತನಕ್ಕೆ ಒಳಗಾಗಿದ್ದ ಅಸ್ಪೃಶ್ಯ ಸಮಾಜವನ್ನು ಸಾಮಾಜಿಕ ಮುನ್ನೆಲೆಗೆ ತರುವಲ್ಲಿ ಇವರ ಪಾತ್ರ ಪ್ರಮುಖವಾಗಿದೆ. ಪ್ರೊ. ಬಿ. ಕೃಷ್ಣಪ್ಪನವರು ಕರ್ನಾಟಕದಲ್ಲಿ ಕ್ರಾಂತಿಯ ಅಲೆಯನ್ನೆಬ್ಬಿಸಿ ಸಾಮಾಜಿಕ ಬದಲಾವಣೆಗೆ ಶಕ್ತಿ ತುಂಬಿದರು.

ಪ್ರೊ. ಬಿ. ಕೃಷ್ಣಪ್ಪನವರು ದಲಿತರಾಗಿದ್ದು, ಜಾತಿ ನಿಂದನೆ, ದೇವಾಲಯ ಪ್ರವೇಶ ನಿಷೇಧ, ಸಾಮಾಜಿಕ ಬಹಿಷ್ಕಾರದಂತಹ ಅಮಾನವೀಯ ಪದ್ಧತಿಯನ್ನು ಅನುಭವಿಸಿದವರು. ಯಾವುದೇ ತಪ್ಪು ಮಾಡದಿದ್ದರೂ, ಯಾರೇ ತಪ್ಪು ಮಾಡಿದರೂ ಅದು ದಲಿತರೆ ಮಾಡಿದ್ದು ಎಂದು ಅವರಿಗೆ ಶಿಕ್ಷೆ ನೀಡಿ ಮೇಲ್ವರ್ಗದವರು ಅದರ ಮೂಲಕ ಸಂತೋಷಪಡುತ್ತಿದ್ದರು. ಇಂತಹ ಸಾಕಷ್ಟು ದೌರ್ಜನ್ಯಗಳು ದಲಿತರ ಮೇಲೆ ನಡೆದಿವೆ. ಪ್ರೊ. ಬಿ. ಕೃಷ್ಣಪ್ಪನವರ ವೈಚಾರಿಕತೆ ಆರಂಭವಾದದ್ದು ಎಲ್ಲ ದಲಿತರಂತೆ ಜಾತಿ ಮತ್ತು ಅಸ್ಪೃಶ್ಯತೆಯ ನೋವಿನಿಂದ. ಅದರ ವಿಮೋಚನೆಗಾಗಿ ನಡೆಸಿದ ಹೋರಾಟದಲ್ಲಿ ಅವರಿಗೆ ಪ್ರಮುಖವಾಗಿ ಮೊದಲಿಗೆ ಕಂಡದ್ದು ರಾಮ್ ಮನೋಹರ್ ಲೋಹಿಯಾ ಅವರ ಚಿಂತನೆ. ನಂತರ ಗಾಂಧಿ ಮತ್ತು ಡಾ. ಅಂಬೇಡ್ಕರ್ ಅವರ ಹೋರಾಟ ಮತ್ತು ವೈಚಾರಿಕತೆ ಚಿಂತನೆಗಳಿಂದ ಪ್ರಭಾವಿತರಾಗಿದ್ದರು. ಇದರಲ್ಲಿ ಡಾ. ಬಿ. ಆರ್. ಅಂಬೇಡ್ಕರ್‌ರವರ ವಿಚಾರಗಳು, ಚಿಂತನೆಗಳಿಗೆ ಪ್ರಮುಖ ಪ್ರಾಶಸ್ತ್ಯ ನೀಡಿದರು. ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ದಲಿತ ಚಳುವಳಿಯನ್ನು ಸಾಮೂಹಿಕ ನಾಯಕತ್ವದಡಿಯಲ್ಲಿ ಹೋರಾಟ ಪ್ರಾರಂಭ ಮಾಡಿದಾಗ ಅವರು ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಚಿಂತನೆ ಮತ್ತು ಹೋರಾಟದ ಹಾದಿಯಿಂದ ಮಾತ್ರ

ದಲಿತರಿಗೆ ವಿಮೋಚನೆ ಸಾಧ್ಯ ಗಾಂಧಿ ಚಿಂತನೆ ಮತ್ತು ಅವರ ಸುಧಾರಣಾವಾದಿ ಹೋರಾಟದ ಸ್ವರೂಪವನ್ನು ತೀವ್ರವಾಗಿ ಖಂಡಿಸಿದರು. ದಲಿತರ ವಿಮೋಚನೆ, ಏಳಿಗೆ ದಲಿತರಿಂದಲೇ ಸಾಧ್ಯ ಎಂಬುದರಲ್ಲಿ ನಂಬಿಕೆಯಿಟ್ಟಿದ್ದರು. ಡಾ. ಬಿ. ಆರ್. ಅಂಬೇಡ್ಕರ್‌ರವರ ಆದರ್ಶಗಳನ್ನು ಅಳವಡಿಸಿಕೊಂಡು ಹೋರಾಟದ ರೂಪುರೇಷೆಗಳನ್ನು ಹಮ್ಮಿಕೊಂಡರು. ದಲಿತ ಚಳುವಳಿಯು ಬಾಬಾ ಸಾಹೇಬ ಅಂಬೇಡ್ಕರ್ ತತ್ವ, ವಿಚಾರಗಳು, ಪ್ರಭಾವ ಮತ್ತು ಪ್ರೇರಣೆಯಿಂದ ದುಡಿಯುವ ಜನರು–ಹಸಿವು–ಅಸಮಾನತೆ, ದಾರಿದ್ರ್ಯ ದೂರ ಮಾಡಲು ಹೋರಾಡಬೇಕೆಂಬ ಸಾಮಾನ್ಯ ತಿಳುವಳಿಕೆ ಚಳುವಳಿಯಲ್ಲಿ ಮೂಡಿತು. ಇಂತಹ ಚಳುವಳಿಯ ನೇತೃತ್ವವನ್ನು ಯಶಸ್ವಿಯಾಗಿ ನಡೆಸಿದ ಕೀರ್ತಿ ಪ್ರೊ. ಬಿ. ಕೃಷ್ಣಪ್ಪವರಿಗೆ ಸಲ್ಲುತ್ತದೆ, ದಲಿತ ಸಂಘರ್ಷ ಸಮಿತಿ ನಾಯಕತ್ವವನ್ನು ತೆಗೆದುಕೊಂಡು ದಲಿತರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಅತ್ಯಾಚಾರ, ದಬ್ಬಾಳಿಕೆಯ ವಿರುದ್ಧ ಹೋರಾಟ ಕೈಗೊಂಡರು ಇದರ ಪರಿಣಾಮ ದಲಿತರಿಗೆ ಕನಿಷ್ಟ ಮಟ್ಟದ ಜೀವನ ಸಾಗಿಸಲಿಕ್ಕೆ ಸಾಧ್ಯವಾಯಿತು. ಹಲವಾರು ಭೂ ಚಳುವಳಿಯನ್ನು ಕೈಗೊಂಡು ಭೂರಹಿತರಿಗೆ ನ್ಯಾಯಯುತವಾಗಿ ಅವರಿಗೆ ಭೂಮಿ ಒದಗಿಸುವಲ್ಲಿ ಇವರ ಪರಿಶ್ರಮ ಸಾಕಷ್ಟಿದೆ. ಮೇಲ್ವರ್ಗದವರು ತಮ್ಮ ಮೋಜು, ಮಸ್ತಿಗಾಗಿ ಕೆಳವರ್ಗದವರ ಮೇಲೆ ಬಲವಂತವಾಗಿ ಹಲವು ಅನಿಷ್ಟ ಸಾಂಪ್ರದಾಯಗಳನ್ನು ಹೇರಿದ್ದರು. ಅದರಲ್ಲಿ ಚಂದ್ರಗುತ್ತಿ ಬೆತ್ತಲೆ ಸೇವೆ, ಚುಂಚನಸೂರು ಬೆತ್ತಲೆ ಸೇವೆಯಂತಹ ಆಚರಣೆ ಮಾಡಿಸುತ್ತಿದ್ದರು. ಈ ವಿಷಯವನ್ನು ಪ್ರೊ. ಬಿ. ಕೃಷ್ಣಪ್ಪನವರು ಸರಿಯಾಗಿ ಅರ್ಥೈಸಿಕೊಂಡು ಈ ಪದ್ಧತಿಯನ್ನು ಹೇಗಾದರೂ ಮಾಡಿ ನಿಲ್ಲಿಸಬೇಕು ಎಂದು ಪಣತೊಟ್ಟು ಚಳುವಳಿಯನ್ನು ಹಮ್ಮಿಕೊಂಡು ಈ ಬೆತ್ತಲೆ ಸೇವೆಯಿಂದ ದಲಿತ ಹೆಣ್ಣು ಮಕ್ಕಳ ಮಾನ ಮತ್ತು ಪ್ರಾಣ ಕಾಪಾಡಿದರು. ಈ ಚಂದ್ರಗುತ್ತಿ ಬೆತ್ತಲೆ ಸೇವೆಯಲ್ಲಿ ತಮ್ಮ ಪ್ರಾಣಕ್ಕೆ ಆಪತ್ತು ಒದಗಿದರು ಅದಕ್ಕೆ ಹೆದರದೆ ದಲಿತ ಜನಾಂಗದ ಮೌಢ್ಯವನ್ನು ಕಿತ್ತುಹಾಕಲು ಶ್ರಮಿಸಿದರು.

ಪ್ರೊ. ಬಿ. ಕೃಷ್ಣಪ್ಪನವರು ದಲಿತ ಜನಾಂಗದಲ್ಲಿರುವ ಮೂಢನಂಬಿಕೆಯನ್ನು ತೊಡೆದು ಹಾಕಲು ಸಾರ್ವಜನಿಕ ನಾಟಕ, ಸಭೆ, ಸಮಾರಂಭ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಈ ಅನಿಷ್ಟ ಪದ್ಧತಿಯ ಒಳ ಮರ್ಮವನ್ನು ಜನರಿಗೆ ಅರಿವು ಮೂಡಿಸಿ, ಇವುಗಳನ್ನು ಯಾರು ಆಚರಣೆ ಮಾಡಬಾರೆಂದು ಕರೆ ಕೊಟ್ಟರು. ಹಗುಲು ರಾತ್ರಿ ರಾಜ್ಯದಾದ್ಯಂತ ಓಡಾಟ ಮಾಡಿ ಸಂಘಟನೆಯನ್ನು ಭದ್ರಪಡಿಸಿದರು. ಹಾಗೂ ಸಂಘಟನೆಯ ಜೊತೆಗೆ ಡಾ. ಬಿ. ಆರ್. ಅಂಬೇಡ್ಕರ್‌ರವು ಹೇಳಿದಂತೆ ದಲಿತರು ರಾಜಕೀಯ ಪ್ರವೇಶ ಮಾಡಬೇಕು ಅದರಂತೆ ಪ್ರೊ. ಬಿ. ಕೃಷ್ಣಪ್ಪನವರು ರಾಜಕೀಯ ಪಕ್ಷಗಳನ್ನು ಅಳೆದು ತೂಗಿ ಕಾನ್ಸಿರಾಮ್ ನೇತೃತ್ವದ ಬಹುಜನ ಸಮಾಜ ಪಕ್ಷಕ್ಕೆ ಸೇರ್ಪಡೆಯಾದರು. ರಾಜಕೀಯ ನಾಯಕತ್ವ ಹೊಂದಿದ್ದ ಪ್ರೊ. ಬಿ. ಕೃಷ್ಣಪ್ಪ ರಾಜ್ಯದಾದ್ಯಂತ ಸಂಚರಿಸಿ ಬಿ.ಎಸ್.ಪಿ ಯ ತತ್ವಗಳನ್ನು ಜನರ ಮುಂದೆ ತಲುಪಿಸುವಲ್ಲಿ ಯಶಸ್ವಿಯಾದರು. ಆದರೆ ರಾಜಕೀಯ ಯಶಸ್ಸು ಸಿಗದೇ ಇರುವದು ದಲಿತರ ದುರ್ದೈವ. ಹಣ, ಹೆಂಡದ ನಡುವೆ ಪ್ರಾಮಾಣಿಕ ಆದರ್ಶ ತತ್ವಗಳನ್ನು ಹೊಂದಿದ ನಾಯಕರಿಗೆ ಅದಕ್ಕೂ ಮಿಗಿಲಾಗಿ ಪ್ರೊ. ಬಿ. ಕೃಷ್ಣಪ್ಪನವರು ದಲಿತ ಎಂಬುದಕ್ಕೆ ಮೇಲ್ವರ್ಗದವರ ಕುತಂತ್ರ ನೀತಿಗಳು ಅಂದು ರಾರಾಜಿಸಿದವು. ಇಂದು ಸಹ ಕುತಂತ್ರ ನೀತಿಗಳಿಂದ ಹೊರತಾಗಿಲ್ಲ. ಆದರೆ ಸಂವಿಧಾನ ನೀಡಿರುವ ಮೀಸಲಾತಿಯಿಂದ ದಲಿತರು ರಾಜಕೀಯ ಪ್ರವೇಶ ಮಾಡಿರುವುದನ್ನು ಬಿಟ್ಟರೆ ಸಾಮಾನ್ಯ ಕ್ಷೇತ್ರದಲ್ಲಿ ದಲಿತರು ರಾಜಕೀಯ ಪ್ರಬಲತೆ ಸಾಧಿಸುವುದು ಕಷ್ಟ. ಪ್ರಮುಖವಾಗಿ ರಾಜಕೀಯ ಪ್ರವೇಶ ಮಾಡಿರುವ ಅಸ್ಪೃಶ್ಯ ನಾಯಕರು ಆದರ್ಶ, ತತ್ವಗಳನ್ನು ಗಾಳಿಗೆ ತೂರಿರುವುದು ದಲಿತ ಜನಾಂಗಕ್ಕೆ ಹೋರಾಡಿದ

ನಾಯಕರಿಗೆ ಅವಮಾನ ಮಾಡಿದಂತೆ ಎಂಬುದನ್ನು ಅಂತಹ ನಾಯಕರು ಮನವರಿಕೆ ಮಾಡಿಕೊಳ್ಳಬೇಕು.

ಪ್ರೊ. ಬಿ. ಕೃಷ್ಣಪ್ಪನವರು ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ದಲಿತ ಚಳುವಳಿ, ಭೂ ಹೋರಾಟಗಳು ಮತ್ತು ವಸತಿ ನಿಲಯಕ್ಕಾಗಿ ಮಾಡಿರುವ ಹೋರಾಟಗಳು ಸ್ಮರಣೀಯ. ಅಂದು ರಾಜಕೀಯ ಕ್ಷೇತ್ರದಲ್ಲಿ ಡಾ. ಬಿ. ಆರ್. ಅಂಬೇಡ್ಕರ್‌ಗೆ ಬಂದಂತಹ ಪರಿಸ್ಥಿತಿಯ ಸಾಲಿನಲ್ಲಿ ಪ್ರೊ. ಬಿ. ಕೃಷ್ಣಪ್ಪನವರು ನಿಂತುಕೊಂಡರು. ಇವರ ಮುಖದಿಂದ ಬೇರೆ ಕ್ಷೇತ್ರದಲ್ಲಿ ದಲಿತ ಮತವನ್ನು ಪಡೆದುಕೊಳ್ಳುವುದು ಅಂದಿನ ಜನತಾ ಪಕ್ಷದ ದುರಾಸೆಯಾಗಿತ್ತು ಆದರಿಂದ ಪ್ರೊ. ಬಿ. ಕೃಷ್ಣಪ್ಪನವರಿಗೆ ಜನತಾ ಪಕ್ಷದ ಯಾವ ನಾಯಕನು ಪ್ರಮಾಣಿಕವಾಗಿ ಕೆಲಸ ನಿರ್ವಹಿಸಲಿಲ್ಲ. ಇದು ನಮ್ಮ ರಾಜಕೀಯ ವ್ಯವಸ್ಥೆಯ ಕುತಂತ್ರ ನೀತಿಗಳು. ಅಧಿಕಾರಕ್ಕಾಗಿ, ಓಟಿಗಾಗಿ ಪ್ರಮಾಣಿಕ ದಲಿತ ನಾಯಕನ ಬಳಕೆ ಎಷ್ಟು ಸರಿಯಾಗಿದೆ ಎನ್ನುವುದನ್ನು ನಾವೆಲ್ಲರೂ ತಿಳಿಯಬೇಕು. ಪ್ರೊ. ಬಿ. ಕೃಷ್ಣಪ್ಪನವರು ಈ ಅಸ್ಪೃಶ್ಯತಾ ಆಚರಣೆಯಿಂದ ರೋಷಿಹೋಗಿ ಹೋರಾಟವನ್ನು ತೀವ್ರಗೊಳಿಸಿ ನ್ಯಾಯ ಕಂಡುಕೊಳ್ಳಲು ಚಳುವಳಿ ಮಾರ್ಗವನ್ನು ಅನುಸರಿಸಿದರು. ಹಳ್ಳಿಗಳಲ್ಲಿ ದಲಿತರ ಜೀವನ ಪ್ರಾಣಿಗಳಿಗಿಂತಲೂ ಹೀನಾಯ ಸ್ಥಿತಿಯಲ್ಲಿತ್ತು, ಬಲಿಷ್ಠ ಜಾತಿಗಳು ನಡೆಸುವ ದೌರ್ಜನ್ಯದ ಬಗ್ಗೆ ಸಾಕಷ್ಟು ನೋವನ್ನು ಅನುಭವಿಸುತ್ತಿದ್ದರು. ಈ ವ್ಯವಸ್ಥೆಯಿಂದ ಪ್ರೊ.ಕೃಷ್ಣಪ್ಪರವರು ಕೆಂಡಾಮಂಡಲವಾಗಿದ್ದರು. ಈ ನೋವು, ಸಿಟ್ಟು ರಾಜ್ಯದ ಎಲ್ಲ ಕಡೆ ದಲಿತ ಚಳುವಳಿ ಮತ್ತು ಭೂ ಹೋರಾಟಗಳು ಪ್ರಾರಂಭವಾದವು. ದಲಿತ ಚಳುವಳಿಯಿಂದ ದಲಿತರ ಮೇಲಿನ ದೌರ್ಜನ್ಯಗಳನ್ನು ಖಂಡಿಸಿ, ತಪ್ಪಿತಸ್ಥರಿಗೆ ಕಾನೂನು ಪ್ರಕಾರ ಶಿಕ್ಷೆ ಕೊಡಿಸುವ ನಿಟ್ಟಿನಲ್ಲಿ ತಮ್ಮ ಕಾರ್ಯವೈಖರಿಯನ್ನು ಬಲಿಷ್ಠಗೊಳಿಸಿದರು. ವೈಯಕ್ತಿಕ ಜೀವನ, ವೃತ್ತಿಯ ಜೊತೆಗೆ ಸಮುದಾಯ ಕುರಿತು ಕಾಳಜಿವಹಿಸುದು ಕಷ್ಟಕರ. ಆದರೆ ಪ್ರೊ. ಬಿ. ಕೃಷ್ಣಪ್ಪನವರು ತಮ್ಮ ಕುಟುಂಬದ ಬೆಂಬಲದೊಂದಿಗೆ ಈ ಮಹತ್ತರ ಕಾರ್ಯವನ್ನು ಮಾಡಲು ಸಾಧ್ಯವಾಯಿತು.

ಪ್ರೊ. ಬಿ. ಕೃಷ್ಣಪ್ಪನವರು ಶಾಸಕರಾಗಲಿಲ್ಲ, ಸಾಹಿತಿಗಳಾಗಲಿಲ್ಲ, ಮಂತ್ರಿಗಳ ಚೇಲಾಗಿರಿ ಮಾಡಲಿಲ್ಲ, ನಿಗಮಗಳ ಅಧ್ಯಕ್ಷರಾಗಲಿಲ್ಲ, ತಮ್ಮವರ್‍ಯಾರನ್ನೂ ಅಲ್ಲಿಗೆ ತರಲಿಲ್ಲ, ತಮ್ಮ ಬಂಧು–ಬಳಗದವರಿಗೆ ಯಾವುದೇ ಆಸ್ತಿ ಮಾಡಲಿಲ್ಲ. ಪ್ರಶಸ್ತಿ ಪತ್ರಗಳಿಗೆ ಕೈ ಚಾಚಲಿಲ್ಲ. ಈ ನಾಡಿನ ಜನರಿಗೆ ನೆರವಾದರು. ದಲಿತರಿಗೆ ಸ್ವಾಭಿಮಾನದಿಂದ ಬದುಕುವ ಮಾರ್ಗ ತೋರಿದರು, ದಲಿತ ಸಂಘರ್ಷ ಸಮಿತಿಯ ಸಂಘಟನೆಯನ್ನು ಪ್ರಬಲವಾಗಿ ಕಟ್ಟಿ ಬೆಳಸಿದರು. ಮುಂದೆ ಬಿ.ಎಸ್.ಪಿ ಸೇರಿದರೂ ಸಂಘರ್ಷ ಸಮಿತಿಯ ಕಾರ್ಯವೈಖರಿಯ ಕರಿತು ಸದಾ ಚಿಂತಿಸುತ್ತಿದ್ದರು. ಹಾಗಾಗಿ ರಾಜ್ಯದ ದಲಿತ ವರ್ಗ, ಬಡವರು, ಮಹಿಳೆಯರು ಪ್ರೊ. ಬಿ. ಕೃಷ್ಣಪ್ಪನವರ ಮೇಲೆ ತುಂಬಾ ಅಭಿಮಾನ ಹೊಂದಿದ್ದರು.

ನಿರಂತರ ಹೋರಾಟಗಳಿಂದ ಪ್ರೊ. ಬಿ. ಕೃಷ್ಣಪ್ಪನವರು ಊಟ, ಆರೋಗ್ಯದ ಪೂರ್ಣ ಪ್ರಮಾಣದ ಗಮನ ಕೊಡಲಿಲ್ಲ. ಬಿಡುವಿಲ್ಲದ ಹೋರಾಟ, ಸಾಲು ಸಾಲು ಸಮಾವೇಶಗಳಲ್ಲಿ ಪಾಲ್ಗೊಂಡು ದೇಹಕ್ಕೆ ವಿರಾಮ ನೀಡಲಿಲ್ಲ. ದಿನಾಂಕ ಜೂನ್ 30, 1997 ರಂದು ಡಾ. ಬಿ. ಆರ್ ಅಂಬೇಡ್ಕರ್‌ರವರ ಪರಿನಿರ್ವಾಣ ಸಮಾವೇಶಕ್ಕೆ ಗದಗ್‌ನಲ್ಲಿ ಭಾಗಿಯಾಗಿದ್ದರು. ಆ ಸಂದರ್ಭದಲ್ಲಿ ಪ್ರೊ. ಬಿ. ಕೃಷ್ಣಪ್ಪನವರಿಗೆ ಹೃದಯಘಾತವಾಯಿತು. ಆಸ್ಪತ್ರೆಗೆ ಸಾಗಿಸಿದರೂ ಚಿಕಿತ್ಸೆ ಫಲಿಸದೆ ಕೊನೆಯುಸಿರೆಳೆದರು. ಲಕ್ಷಾಂತರ ಶೋಷಿತರ ಧ್ವನಿಯಾಗಿ, ಪ್ರಾಮಾಣಿಕ ಸಂಘಟಕರಾಗಿ ನಾಡಿನ ದಲಿತರಲ್ಲಿ ಪ್ರಜ್ಞಾವಂತಿಕೆಯನ್ನು ಬೆಳೆಸಿದರು. ಮಾತನಾಡಲು ಹೆದರುವ ಜನರಲ್ಲಿ ಘರ್ಜಿಸುವ ಧೈರ್ಯ ತುಂಬಿ ಹೋರಾಟದ ಮನೋಭಾವನೆಯನ್ನು ಬೆಳಸಿದ ಈ

ಮಾನವತಾವಾದಿಗೆ ಕರ್ನಾಟಕ ಸರ್ಕಾರ ಡಾ. ಬಿ. ಆರ್ ಅಂಬೇಡ್ಕರ್ ಪ್ರಶಸ್ತಿಯನ್ನು ಮರಣೋತ್ತರವಾಗಿ ನೀಡಿ ಗೌರವ ಸಲ್ಲಿಸಿದೆ.

**ಸಮಾರೋಪ**

ಡಾ. ಬಿ.ಆರ್. ಅಂಬೇಡ್ಕರರವರ ಜೀವನ ಮೌಲ್ಯಗಳನ್ನು ಸಾಕಾರಗೊಳಿಸುವ ಸಲುವಾಗಿ ದಲಿತ ಸಮುದಾಯವನ್ನು ಸಂಘಟಿಸಿ ಹೋರಾಟ ರೂಪಿಸಿ ಶಿಕ್ಷಣ, ಸಂಘಟನೆ ಮತ್ತು ಹೋರಾಟದ ಮಹತ್ವವನ್ನು ತಿಳಿಸಿಕೊಟ್ಟರು. ದಲಿತರು, ಮಹಿಳೆಯರು, ಬಡವರು ಮತ್ತು ಹಿಂದುಳಿದ ಸಮುದಾಯದವರನ್ನು ಶೋಷಣೆ ಮಾಡುತ್ತಿದ್ದ ಸವರ್ಣೀಯರ ವಿರುದ್ಧ ಹೋರಾಟ ರೂಪಿಸಿದರು. ಅದರ ಮೂಲಕ ತಮ್ಮ ಜೀವದ ಹಂಗು ತೊರೆದು ಅಸ್ಪೃಶ್ಯರ ಸಮಾನತೆ, ಗೌರವಯುತ ಜೀವನಕ್ಕಾಗಿ ತಮ್ಮ ಬದುಕುನ್ನು ಮೀಸಲಿಟ್ಟರು. ಮೇಲ್ವರ್ಗದವರ ದಬ್ಬಾಳಿಕೆಗೆ ನಲುಗಿ ಅದನ್ನು ಚಿಕ್ಕನಿಂದಲೇ ಪ್ರತಿಭಟಿಸಿದ ನಿದರ್ಶನಕ್ಕೆ ಪ್ರೊ. ಬಿ. ಕೃಷ್ಣಪ್ಪನವರು ಸಹ ಒಬ್ಬರು. ಅವರ ಬದುಕು ಮಾದರಿ ಅವರು ವ್ಯಕ್ತಿಯಾಗಿ ನಮ್ಮ ನಡುವೆ ಇಲ್ಲದಿರಬಹುದು ಆದರೆ ನಮ್ಮ ಮನಸ್ಸಿನೊಳಗೆ ಇದ್ದಾರೆ. ಅನ್ಯಾಯದ ವಿರುದ್ಧ ಹೋರಾಡುವ ಧೈರ್ಯದಲ್ಲಿ ಅವರ ಆದರ್ಶಗಳು ನಿಂತಿವೆ. ಆದರೆ ಪ್ರೊ. ಬಿ.ಕೃಷ್ಣಪ್ಪ ಮತ್ತು ಅಂತಹ ಪ್ರಾಮಾಣಿಕರಿಗೆ ಇಂದಿಗೂ ರಾಜಕೀಯ ಪ್ರಾತಿನಿಧ್ಯತೆ ದೊರೆಯದಿರುವುದು ದುರ್ದೈವ. ಈಗಲಾದರೂ ಬಹುಜನರು ಪ್ರೊ. ಬಿ. ಕೃಷ್ಣಪ್ಪನವರ ಹೋರಾಟ, ತ್ಯಾಗಕ್ಕೆ ಪ್ರತಿಫಲವಾಗಿ ಅವರಿಗೆ ಗೌರವ ಸಿಗುವಂತಹ ಕಾರ್ಯಗಳಲ್ಲಿ ತೊಡಗಿಕೊಂಡು, ಅವರ ವ್ಯಕ್ತಿತ್ವಕ್ಕೆ ಮೆರಗು ನೀಡುವುದು ಹಾಗೂ ಅವರ ಕನಸನ್ನು ಸಾಕಾರ ಮಾಡುವುದು ಅಗತ್ಯವಾಗಿದೆ.

**ಪರಾಮರ್ಶನ ಗ್ರಂಥಗಳು**


- ಚಿನ್ನಸ್ವಾಮಿ ಸೋಸಲೆ. (2018). ದಲಿತರ ಬದುಕು–ಮೆಲುಕು. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಮುನಿವೆಂಕಟಪ್ಪ, ವಿ. (2009). *ದಲಿತ ಚಳುವಳಿ ಚರಿತ್ರೆ.* ತನುಮನ ಪ್ರಕಾಶನ.
- *ಪ್ರೊ. ಬಿ. ಕೃಷ್ಣಪ್ಪ ಚಿಂತನೆಗಳು–ಬರಹಗಳು.* (2016). ಕನ್ನಡ ಪುಸ್ತಕ ಪ್ರಾಧಿಕಾರ.
- ಸಮತಾ ಬಿ. ದೇಶಮಾನೆ. (2019). ದಲಿತ ಚಳುವಳಿಯ ಸಮಾಜಶಾಸ್ತ್ರೀಯ ವಿಶ್ಲೇಷಣೆ. *ಪಂಚಮ.* ಸಂ–1.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 78-82
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ದಾವಣಗೆರೆ ಪರಿಸರದಲ್ಲಿ ದೋಂಡಿಯಾ ವಾಘ್‌ನ ಸ್ವಾತಂತ್ರ್ಯ ಹೋರಾಟ

**ಸುರೇಶ್ ಟಿ**

ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**Abstract:**

*1799ರಲ್ಲಿ 4ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದ ನಂತರ ಅನೇಕ ಪಾಳೇಯಗಾರರು ದೂರ ಪ್ರದೇಶಗಳಿಗೆ ಪಲಾಯನಗೈದು ಕರ್ನಾಟಕದ ಮೂಲನಿವಾಸಿಗಳ ಸಹಕಾರದೊಂದಿಗೆ ಬ್ರಿಟಿಷರ ಆಡಳಿತದ ವಿರುದ್ಧ ಬಂಡಾಯದ ಹೋರಾಟಗಳನ್ನು ಪ್ರಾರಂಭಿಸಿದರು. ಆ ಬಂಡಾಯ ಹೋರಾಟಗಳಲ್ಲಿ ಅತ್ಯಂತ ವಿಸ್ತಾರವಾದ ಮತ್ತು ಭಾರತರದಲ್ಲಿಯೇ ಮೊಟ್ಟಮೊದಲು ಬಾರಿಗೆ ಬ್ರಿಟಿಷರ ವಿರುದ್ಧ ಬಂಡಾಯ ಪ್ರಾರಂಭಿಸಿದ ಕೀರ್ತಿ ದೋಂಡಿಯಾ ವಾಘ್‌ಗೆ ಸೇರುತ್ತದೆ. ಪ್ರಸ್ತುತ ಲೇಖನದಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಸಾಮಾನ್ಯ ವ್ಯಕ್ತಿಯಾಗಿ ಬ್ರಿಟಿಷರ ವಿರುದ್ಧ ಬಂಡಾಯ ಪ್ರಾರಂಭಿಸಿದ ದೋಂಡಿಯಾ ವಾಘ್‌ನ ಎಲ್ಲಾ ಪ್ರಯತ್ನಗಳನ್ನು ಚರ್ಚಿಸಲಾಗಿದೆ.*

**Keywords:** *ಆಂಗ್ಲೋ-ಮೈಸೂರು ಯುದ್ಧ, ಟಿಪ್ಪು ಸುಲ್ತಾನ್, ಬ್ರಿಟಿಷ್ ಸರ್ಕಾರ, ದೋಂಡಿಯಾ ವಾಘ್.*

**ಪೀಠಿಕೆ**

ಬ್ರಿಟಿಷರ ವಿರುದ್ಧದ ಹೋರಾಟಗಳಲ್ಲಿ ದೋಂಡಿಯಾ ವಾಘ್‌ನ ಪಾತ್ರ ಬಹಳ ದೊಡ್ಡದು. ಹಿಂದೆ ಮೈಸೂರು ಸಂಸ್ಥಾನಕ್ಕೆ ಸೇರಿದ್ದ ಪ್ರಸ್ತುತ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲೂಕಿನಲ್ಲಿ ದೋಂಡಿಯಾ ವಾಘ್ ಜನಿಸಿದನು. ದೋಂಡಿಯಾ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ್ದರಿಂದ ಇತನಿಗೆ ವಾಘ್ ಎಂದು ಕರೆಯಲಯಿತು. 'ವಾಘ' ಎಂದರೆ ಮರಾಠಿಯಲ್ಲಿ 'ಹುಲಿ' ಎಂದರ್ಥ. ದೋಂಡಿಯಾನ ಹಿನ್ನೆಲೆಯನ್ನು ಗಮನಿಸಿದಾಗ ಕ್ರಿ.ಶ. 1660ರ ಸಂದರ್ಭದಲ್ಲಿ ಬಿಜಾಪುರ ಸುಲ್ತಾನರು ಕೆಳದಿಯ ಮೇಲೆ ದಂಡೆಯಾತ್ರೆಯನ್ನು ಕೈಗೊಂಡು ದಂಡೆಯಾತ್ರೆಯನ್ನು ಮುಗಿಸಿ ಹಿಂದಿರುಗುತ್ತಿದ್ದಾಗ ಶಿವಾಜಿಯ ತಂದೆ ಷಹಾಜಿಯು ಚನ್ನಗಿರಿ ಸಮೀಪದ ಹೊದಿಗೆರೆಯಲ್ಲಿ ಕ್ರಿ.ಶ. 1664ರಲ್ಲಿ ಮರಣ ಹೊಂದಿದನು. ಷಹಾಜಿಯನ್ನು ಅಲ್ಲಿಯೇ ಅಂತ್ಯ ಸಂಸ್ಕಾರ ಮಾಡಿ ಕೆಲವು ಮರಾಠ ಸೈನಿಕರ ಗುಂಪುಗಳು ಇಲ್ಲಿಯೇ ಉಳಿದವು. ಅವುಗಳಲ್ಲಿ ಪವಾರ್ ಕುಟುಂಬವು ಒಂದು. ಅಂತಹ ಪವಾರ್ ಕುಟುಂಬದಲ್ಲಿ ಚನ್ನಗಿರಿಯಲ್ಲಿ ಜನಿಸಿದ ಮರಾಠ ಯುವಕನೇ ದೋಂಡಿಯಾ ವಾಘ್ ಮತ್ತು ಇವನ ತಂದೆ ದತ್ತೋಜಿ ಖಂಡೋಬಾ ಮತ್ತು ತಾಯಿ ಚಂದ್ರಬಾಯಿಯಾಗಿದ್ದಾರೆ. ಇವನ ಮೊದಲ ಹೆಸರು "ದೋಂಡಿಯಾ ಪೀರಜೀ ಪವಾರ್" ಇವನು ಉತ್ತಮ ಪ್ರತಿಭಾವಂತನಾಗಿದ್ದು, ಧೈರ್ಯ, ಶೌರ್ಯ, ಪರಾಕ್ರಮ ಮತ್ತು ಆಕರ್ಷಣೀಯ ವ್ಯಕ್ತಿತ್ವ ಅವನದಾಗಿತ್ತು. ಈ ಎಲ್ಲಾ ಕೌಶಲ್ಯಗಳಿಂದ ದೋಂಡಿಯಾ ಸೇನಾನಾಯಕನಾಗಿ ಬೆಳೆಯಲು ಅವಕಾಶ ಮಾಡಿಕೊಟ್ಟವು. ಇದರ ಫಲವಾಗಿ

***Please cite this article as:*** ಸುರೇಶ್, ಟಿ. (2024). ದಾವಣಗೆರೆ ಪರಿಸರದಲ್ಲಿ ದೋಂಡಿಯಾ ವಾಘ್‌ನ ಸ್ವಾತಂತ್ರ್ಯ ಹೋರಾಟ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 78–82

ದೋಂಡಿಯಾ ಅನೇಕ ರಾಜರ ಗಮನ ಸೆಳೆದನು. ಹಲವಾರು ಸಂಸ್ಥಾನಗಳಲ್ಲಿ ಸೈನಿಕನಾಗಿ, ಸೈನಿಕ ನಾಯಕನಾಗಿ ಕಾರ್ಯ ನಿರ್ವಹಿಸಿದನು. ಹೈದರಾಲಿ ಸೈನ್ಯದಲ್ಲಿ ಅಶ್ವಾರೋಹಿ ದಳದ ನಾಯಕನಾಗಿ ಕಾರ್ಯ ನಿರ್ವಹಿಸಿ ಹೈದರಾಲಿಯ ಮರಣದ ನಂತರ ಟಿಪ್ಪುವಿನ ಸೈನ್ಯದಲ್ಲಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಟಿಪ್ಪು ಮತ್ತು ದೋಂಡಿಯಾನ ನಡುವೆ ಧಾರ್ಮಿಕ ವಿಚಾರವಾಗಿ ಭಿನ್ನಾಭಿಪ್ರಾಯಗಳು ಪ್ರಾರಂಭಗೊಂಡು ಟಿಪ್ಪು ದೋಂಡಿಯಾನನ್ನು ಬಲವಂತವಾಗಿ ಇಸ್ಲಾಂ ಧರ್ಮಕ್ಕೆ ಮತಾಂತರಿಸಿದನು. ದೋಂಡಿಯಾನನ್ನು "ಶೇಕ್ ಅಹಮದ್" ಎಂದು ಕರೆದನು. ನಂತರದಲ್ಲಿ ಮಲ್ಲಿಕ್ ಜಹಾನ್ ಖಾನ್ ಎಂದು ಕರೆಯಲಾಯಿತು. 4ನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಮೇ 4, 1799ರಲ್ಲಿ ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಡರು. ಬ್ರಿಟಿಷ್ ಸೈನಿಕರು ದೋಂಡಿಯಾನನ್ನು ಬಂದಿಖಾನೆಯಿಂದ ಬಿಡುಗಡೆಗೊಳಿಸಿದರು. ದೋಂಡಿಯಾ ತಕ್ಷಣ 4ನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಸಂಗ್ರಹಿಸಿದ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಬಿದನೂರಿಗೆ ಹೋಗಿ ಒಂದು ಖಾಸಗಿ ಸೈನಿಕ ಪಡೆಯನ್ನು ಕಟ್ಟಿದನು.

ಬಿದನೂರು ಕೋಟೆ ಮತ್ತು ಶಿವಮೊಗ್ಗವನ್ನು ವಶಪಡಿಸಿಕೊಂಡು ದೇಶಭಕ್ತಿಯುಳ್ಳ ಜಮೀನ್ದಾರರನ್ನು, ರೈತರನ್ನು ಮತ್ತು ಟಿಪ್ಪುವಿನ ಸೈನ್ಯದಿಂದ ಹೊರಬಂದ ಅನೇಕ ಸೈನಿಕರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡು ಬ್ರಿಟಿಷರ ವಿರುದ್ಧ ಬಂಡಾಯ ಪ್ರಾರಂಭಿಸಿದನು. ದೋಂಡಿಯಾ ಮಹಾರಾಷ್ಟ್ರ ಮತ್ತು ಮೈಸೂರು ಪ್ರದೇಶದಲ್ಲಿ ಬ್ರಿಟಿಷರ ವಿರೋಧಿಗಳಾಗಿ ಬಲಿಷ್ಠರಾದವರನ್ನು ಒಟ್ಟುಗೂಡಿಸಲು ಅನುಕೂಲಕರವಾಗಿತ್ತು. ಆದ್ದರಿಂದ 4ನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಚದುರಿಹೋಗಿದ್ದ ಟಿಪ್ಪುವಿನ ಸೈನಿಕರನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಂಡನು. ದೋಂಡಿಯಾನಿಗೆ "ಉಭಯ ಲೋಕೇಶ್ವರ" ಎಂದು ಬಿರುದನ್ನು ನೀಡಲಾಯಿತು. ಅಂದರೆ "ಎರಡು ಪ್ರಪಂಚದ ರೀತಿ" ಎಂದರ್ಥ. ದೋಂಡಿಯಾನು ಅನೇಕ ಪಾಳೇಯಗಾರರಿಗೆ ಹಾಗೂ ಸ್ಥಳೀಯ ಮುಖಂಡರಿಗೆ ಬ್ರಿಟಿಷರ ವಿರುದ್ಧದ ಹೋರಾಟಕ್ಕಾಗಿ ಸಹಾಯ ಕೇಳಲು ಪತ್ರಗಳನ್ನು ಬರೆದನು. ಅದರಲ್ಲಿ ಪ್ರಮುಖವಾಗಿ ಚನ್ನಗಿರಿ, ಹೊನ್ನಾಳಿ, ಬಸವಾಪಟ್ಟಣ, ಬೆಳಗುತ್ತಿ, ಚಿತ್ರದುರ್ಗ, ತರೀಕೆರೆ, ರಾಯದುರ್ಗ, ಆನೇಗುಂದಿ, ಮಲಬಾರ್, ಶಿವಗಂಗಂ, ಮದುರೈ, ಸೇಲಂ, ವಿರುಪಾಕ್ಷಿ ಮುಂತಾದವು. ದೋಂಡಿಯಾನ ಪರಿಣಾಮಕಾರಿ ಬಂಡಾಯ ಮಲೆನಾಡು ಮತ್ತು ಬಯಲುಸೀಮೆಯ ಪ್ರದೇಶಗಳಲ್ಲಿ ಹರಡತೊಡಗಿತು. ಮಲೆನಾಡಿನ ಪೂರ್ವಭಾಗ ವಿಶೇಷವಾಗಿ ಅಂದಿನ ಚಿತ್ರದುರ್ಗ ಜಿಲ್ಲೆಯ ಪ್ರದೇಶದಲ್ಲಿ ದೋಂಡಿಯಾನ ಕಾರ್ಯ ಚಟುವಟಿಕೆಗಳು ಬಹಳ ಉನ್ನತವಾಗಿದ್ದವು. ಲಾರ್ಡ್ ವೆಲ್ಲೆಸ್ಲಿಯ ಆಜ್ಞೆಯಂತೆ ಒಂದು ಸೈನ್ಯದ ತುಕ್ಕಡಿಯನ್ನು ಹಾಸನಕ್ಕೆ ಮತ್ತು ಇನ್ನೊಂದು ಸೈನಿಕ ತುಕ್ಕಡಿಯನ್ನು ಚಿತ್ರದುರ್ಗದ ಕಡೆಗೆ ಕಳುಹಿಸಿದನು.

ಈ ಸೈನ್ಯವು ಕರ್ನಲ್ ಸ್ಟೀವನ್ ಸನ್ ಮತ್ತು ಕರ್ನಲ್ ಡಾರ್ಲಿಂಪಲ್ ಅವರ ನೇತೃತ್ವದಲ್ಲಿ 300 ಸೈನಿಕರನ್ನು ಒಳಗೊಂಡಿತ್ತು. ಇವರ ಜೊತೆಗೆ ಜುಲೈ 6, 1799ರಲ್ಲಿ ಹೈದ್ರಬಾದ್ ಹಾಗೂ ಪಶ್ಚಿಮ ಬಂಗಾಳದಿಂದ ಫಿರಂಗಿ ದಳಗಳ ಜೊತೆಗೆ ಇವರು ಚಿತ್ರದುರ್ಗದ ಗುಡ್ಡದ ಮೇಲಿರುವ ಕೋಟೆಯನ್ನು ಹಾಗೂ ದೊಡ್ಡ ಪ್ರಮಾಣದ ಧಾನ್ಯಗಳನ್ನು ವಶಪಡಿಸಿಕೊಂಡರು. ಜುಲೈ 15, 1799ರಲ್ಲಿ ಕರ್ನಲ್ ಡಾರ್ಲಿಂಪಲ್ ಚಿತ್ರದುರ್ಗದಿಂದ 20 ಮೈಲಿ ದೂರದ ಪ್ರದೇಶದಲ್ಲಿ ಆಕ್ರಮಣ ಮಾಡಿದನು. ಇದರಿಂದ ದೋಂಡಿಯಾನ 250 ಕುದುರೆಗಳು ಮತ್ತು 400 ಸೈನಿಕರು ಬಲಿಯಾದರು.

ದೋಂಡಿಯಾನಿಂದ ಪ್ರೇರಣೆಗೊಂಡ ರೈತವರ್ಗ ಸಹ ಬ್ರಿಟಿಷರ ವಿರುದ್ಧ ದಂಗೆ ಎದ್ದಿತ್ತು. ಆದರಲ್ಲಿ ದೋಂಡಿಯಾನ ಸೈನಿಕರು ಮತ್ತು ರೈತರು ಸೇರಿ ಶಿವಮೊಗ್ಗ ಮತ್ತು ಚಿತ್ರದುರ್ಗ ಹೆದ್ದಾರಿಯಲ್ಲಿ ಹೊಳಲ್ಕರೆಯಿಂದ 1 ಮೈಲಿ ದೂರದಲ್ಲಿ ಇರುವ

ಗೂಂಡೇರಿ ಕೋಟೆಯಿಂದ ದಾಳಿ ನಡೆಸುತ್ತಿದ್ದರು. ಕರ್ನಲ್ ಡಾರ್ಲಿಂಪಲ್ ಈ ಮಾಹಿತಿಯನ್ನು ಸಂಗ್ರಹಿಸಿ ಗೂಂಡೇರಿ ಕೋಟೆಯ ಮೇಲೆ ಆಕ್ರಮಣ ಮಾಡಿ ಗೂಂಡೇರಿ ಕೋಟೆಯನ್ನು ವಶಪಡಿಸಿಕೊಂಡನು. ಆ ಸಂದರ್ಭದಲ್ಲಿ 40 ಜನ ಬಂಡೂಕೋರರನ್ನು ಬಂಧಿಸಿದನು. ಇವರ ವಿರುದ್ಧ ಕಠಿಣ ಕ್ರಮ ಕೈಗೊಂಡರೆ ದಂಗೆಗಳು ದಮನಗೊಳ್ಳಬಹುದು ಎಂದು ಕರ್ನಲ್ ಡಾರ್ಲಿಂಪಲ್ ಅಮಾನವೀಯ ಕೃತ್ಯಕ್ಕೆ ಕೈ ಹಾಕಿದನು. ಬಂಧಿಸಿದ 40 ಜನರಲ್ಲಿ 39 ಜನರಿಗೆ ಗೂಂಡೇರಿಯಲ್ಲಿಯೇ ಮರಣದಂಡನೆ ಶಿಕ್ಷೆ ನೀಡಿದನು. ಅವರನ್ನು ಚಿತ್ರಹಿಂಸೆ ಮಾಡಿ ಕೊಂದನು. ಒಬ್ಬ ವ್ಯಕ್ತಿಯನ್ನು ಬಿಡುಗಡೆ ಮಾಡಿದನು. ಏಕೆಂದರೆ 39 ಜನರನ್ನು ಕೊಂದ ಅಮಾನವಿಯ ದೃಶ್ಯವನ್ನು ಕಣ್ಣಾರೆ ಕಂಡು ಬ್ರಿಟಿಷರ ವಿರುದ್ಧ ದಂಗೆ ಮಾಡಿದರೆ ಏನಾಗುತ್ತದೆ ಎಂಬುದನ್ನು ದೋಂಡಿಯಾನ ಜನರಿಗೆ ತಿಳಿಸಲಿ ಮತ್ತು ಮರಣದಂಡನೆಗೆ ಸಾಕ್ಷಿಯಾಗಲಿ ಎಂದು ಭಾವಿಸಿದ್ದನು.

ಈ ಘಟನೆ ನಂತರ ಕರ್ನಲ್ ಡಾರ್ಲಿಂಪಲ್‌ನು ದೋಂಡಿಯಾ ಚನ್ನಗಿರಿಯಲ್ಲಿರುವ ವಿಷಯವನ್ನು ತಿಳಿದುಕೊಂಡು ಜುಲೈ 17, 1799 ರಂದು ಚನ್ನಗಿರಿ ಮೇಲೆ ಆಕ್ರಮಣ ಮಾಡಿದನು. 40 ಜನರನ್ನು ಕೊಂದು 40 ಜನರನ್ನು ಬಂಧಿಸಿದನು. ಆದರೆ ದೋಂಡಿಯಾ ಅಲ್ಲಿಂದ ಶಿವಮೊಗ್ಗಕ್ಕೆ ಪಲಾಯನಗೈದನು. ಕರ್ನಲ್ ಡಾರ್ಲಿಂಪಲ್‌ನು ದೋಂಡಿಯಾನ ಗ್ರಾಮಾಂತರದ ಬಂಜಾರಿಗಳ ಸೈನ್ಯದಿಂದ 6000 ದನದ ಹಿಂಡನ್ನು ಮತ್ತು ದೊಡ್ಡ ಪ್ರಮಾಣದಲ್ಲಿ ಕಾಳುಗಳನ್ನು ವಶಪಡಿಸಿಕೊಂಡನು. ನಂತರ ಬ್ರಿಟಿಷರ 2 ತುಕಡಿಗಳು ಶ್ರೀರಂಗಪಟ್ಟಣವನ್ನು ಜುಲೈ 10, 1799ರಲ್ಲಿ ಬಿಟ್ಟು ಜುಲೈ 24, 1799ರಲ್ಲಿ ಚಿತ್ರದುರ್ಗ ತಲುಪಿ ಒಂದು ತುಕಡಿಯು ಚಿತ್ರದುರ್ಗದಲ್ಲಿ, ಇನ್ನೊಂದು ತುಕಡಿಯು ಆಗಸ್ಟ್ 1, 1799ರಲ್ಲಿ ಹರಿಹರದಲ್ಲಿ ಬೀಡುಬಿಟ್ಟಿತು.

ಒಂದು ದಿನ ಮೊದಲೇ 30 ಜುಲೈ 1799ರಲ್ಲಿ ದೋಂಡಿಯಾ ಮತ್ತು ಅವನ ಅನುಯಾಯಿಗಳು ಹರಿಹರದ ಕೋಟೆಯಲ್ಲಿ ನೆಲೆಸಿದ್ದರು. ಬ್ರಿಟಿಷರ ಸೈನ್ಯದ ಮಾಹಿತಿ ತಿಳಿದ ತಕ್ಷಣ ದೋಂಡಿಯಾ ಅಲ್ಲಿಂದ ತುಂಗಭದ್ರ ನದಿಯನ್ನು ದಾಟಿದನು. ಇದರ ನಡುವೆ 8 ಆಗಸ್ಟ್ 1799ರಲ್ಲಿ ಲೆ.ಕರ್ನಲ್ ಡಾರ್ಲಿಂಪಲ್ 16 ಆಗಸ್ಟ್ 1799ರಲ್ಲಿ ಲೆ.ಕ.ವ್ಯಾಲೇಸ್ ಮತ್ತು ವಿಲ್ಗೆಟ್‌ನ ಕೈಕೆಳಗಿನ ಬೆಂಗಾಲ್ ಸಿಪಾಯಿ ತುಕಡಿ ಹರಿಹರದಿಂದ ಉತ್ತರಕ್ಕೆ ಮತ್ತು ನದಿ ಬಯಲಿನ ಪ್ರದೇಶವಾದ 'ಹೊಳಲು' ಕೋಟೆಯ ಮೇಲೆ ಆಕ್ರಮಣ ಮಾಡಿದನು. ಈ ಆಕ್ರಮಣದಲ್ಲಿ ದೋಂಡಿಯಾನ ಅನೇಕ ರಕ್ಷಣಾಪಡೆಯ ಸೈನಿಕರನ್ನು ಕೊಲ್ಲಲಾಯಿತು.

ಇದೇ ಸಮಯದಲ್ಲಿ ದೋಂಡಿಯಾ 1200 ಕುದುರೆಗಳನ್ನು ಮತ್ತು 300 ಕಾಲುದಳ ಪಡೆಗಳು ಶಿಕಾರಿಪುರದ ಕೋಟೆಯಲ್ಲಿ ನಿಯೋಜಿಸಿದ್ದನು. ಆದರೆ 17 ಆಗಸ್ಟ್ 1799ರಲ್ಲಿ ಕರ್ನಲ್ ಡಾರ್ಲಿಂಪಲ್ ಇದರ ಮೇಲೆ ಆಕ್ರಮಣ ಮಾಡಿ ದೋಂಡಿಯಾನನ್ನು ಸೋಲಿಸಿದನು. ನಂತರ ದೋಂಡಿಯಾ ವರದಾ ನದಿಯನ್ನು ದಾಟಿ ಮರಾಠ ಸಾಮ್ರಾಜ್ಯದ ಗಡಿ ನಾಡನ್ನು ತಲುಪಿದನು. ರಾಣೆಬೆನ್ನೂರು ಮತ್ತು ಅದರ ಪೂರ್ವ ದಿಕ್ಕಿನ ಐರಣಿ ಕೋಟೆಯ ಮೇಲೆ ದಾಳಿ ಮಾಡಿ ಅದನ್ನು ಆಕ್ರಮಿಸಿದನು. ಆದರೆ ಹರಿಹರದಲ್ಲಿ ಬೀಡುಬಿಟ್ಟಿದ್ದ ಸೈನ್ಯದ ಒಂದು ಗುಂಪು ತುಂಗಭದ್ರ ನದಿಯ ಬಲದಂಡೆಯ ಮೇಲೆ ನೆಲೆಗೊಂಡಿತು. ಇನ್ನೊಂದು ಆಕ್ರಮಣಕಾರಿ ಗುಂಪು ತುಂಗಭದ್ರ ನದಿಯ ಮಾರ್ಗವಾಗಿ ಸಂಚರಿಸಿ ಹಾವನೂರು ಕೋಟೆಯನ್ನು ಆಕ್ರಮಿಸಿತು. ಇಲ್ಲಿ ಕೋಟೆಯು ಉಳಿದಿರಲ್ಲಿಲ್ಲ. ಬ್ರಿಟಿಷರಿಗೆ ದೋಂಡಿಯಾ ಸವಾಲು ಹಾಕದೆ ಬ್ರಿಟಿಷರ ವಿರುದ್ಧ ದಾಳಿ ಮಾಡಲು ಪ್ರಾರಂಭಿಸಿದನು. ಅವನ ಆಕ್ರಮಣದಿಂದ ಹಲವಾರು ಪ್ರದೇಶಗಳು ದೋಂಡಿಯಾನ ಕೈವಶವಾದವು. ಅವುಗಳೆಂದರೆ ರಾಣೆಬೆನ್ನೂರು, ಹಾನಗಲ್, ಕುಂದಗೋಳ, ಶಿರಹಟ್ಟಿ

ಇನ್ನೂ ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡನು. ಆದ್ದರಿಂದ ಲಾರ್ಡ್ ವೆಲ್ಲೆಸ್ಲಿಯು ಬಹು ಬೇಗನೆ ಮುಯ್ಯಿ ತೀರಿಸಿಕೊಂಡನು. ದೋಂಡಿಯಾ ವಶಪಡಿಸಿಕೊಂಡಿದ್ದ ಕುಂದಗೋಳ, ಶಿರಹಟ್ಟಿ ಮೊದಲಾದ ಎಲ್ಲಾ ಸ್ಥಳಗಳನ್ನು ಅವನು ಗೆದ್ದುಕೊಂಡನು. ದೋಂಡಿಯಾನ ಕಡೆಯ 600 ಜನರನ್ನು ನಿರ್ದಾಕ್ಷಿಣ್ಯವಾಗಿ ಕೊಂದು ಹಾಕಿದನು. ವೆಲ್ಲೆಸ್ಲಿಯು ಮರಾಠ ರಾಜ್ಯದ ಪೇಶ್ವೆಯ ಅಧೀನನಾಗಿದ್ದ ಬಾಲಕೃಷ್ಣ ಪಂತ್ ನೆರವು ಕೋರಿದನು. 17 ಜೂನ್ 1800ರಂದು ಬಾಲಕೃಷ್ಣ ಪಂತ್ ವೆಲ್ಲೆಸ್ಲಿಯೊಡನೆ ಕೈಗೂಡಿಸಿದನು. ವೆಲ್ಲೆಸ್ಲಿಯು ತಕ್ಷಣ ಹರಿಹರವನ್ನು ಅಕ್ರಮಿಸಲು ತೆರಳುವಂತೆ ಆಜ್ಞೆಯನ್ನು ಮಾಡಿದನು. ಇದೇ ರೀತಿ ನದಿಯ ನೀರಿನ ಪ್ರಮಾಣ ಕಡಿಮೆಯಾದಾಗ ಅಗತ್ಯ ಬಂದರೆ ಹೊನ್ನಾಳಿಯನ್ನು ಆಕ್ರಮಣ ಮಾಡಲು ಯೋಚಿಸಿದನು. ನಂತರ ಹೊನ್ನಾಳಿಯಲ್ಲಿ ತುಂಗಭದ್ರಾ ನದಿಯನ್ನು ದಾಟಲು ನಿರ್ಧರಿಸಿದನು. ಬಿದನೂರು ಪ್ರದೇಶದ ಮೂಲಕ ಪ್ರಯಾಣದ ತೊಂದರೆಗಳಿಂದಾಗಿ ವೆಲ್ಲೆಸ್ಲಿಯು 20 ಜೂನ್ 1800ರಂದು ಹರಿಹರದಿಂದ 6 ಮೈಲಿ ದೂರವಿರುವ ತುಂಗಭದ್ರಾ ನದಿಯ ಗಸ್ತು ಸ್ಥಳಕ್ಕೆ ಹೊರಟು ಹೋದನು.

ರಕ್ಷಣಾ ಸೈನ್ಯವು ರಾತ್ರಿಯ ವೇಳೆ ಹರಿಹರದ ಕೋಟೆಯನ್ನು ಬಿಟ್ಟು ಕ್ರಿ.ಶ. 1800 ಜೂನ್ 21ರಂದು ಬೆಳಗ್ಗೆ ಗಸ್ತು ಸ್ಥಳವಾದ ಪಾಮೇನಹಳ್ಳಿ ಮತ್ತು ಸಾರಥಿ ಮಧ್ಯ ನದಿ ಬಯಲಿನಲ್ಲಿ ತನ್ನ ಬಿಡಾರವನ್ನು ಬೀಡುಬಿಟ್ಟಿತು. ನಂತರ ಜೂನ್ 23ರ ಹೊತ್ತಿಗೆ ಹರಿಹರದ ತುಂಗಭದ್ರ ನದಿಯನ್ನು ದಾಟಿದರು ಹಾಗೂ ಐರಣಿ ಕೋಟೆ ಮತ್ತು ಮರಾಠ ಪ್ರದೇಶದಲ್ಲಿ ಶಿಬಿರವನ್ನು ಸ್ಥಾಪಿಸಿದರು. ಹರಿಹರದ ವಾಯವ್ಯ ಭಾಗದಲ್ಲಿರುವ ರಾಣೆಬೆನ್ನೂರನ್ನು ವೆಲ್ಲೆಸ್ಲಿಯು 26 ಜೂನ್ 1800ರಂದು ಆಕ್ರಮಿಸಿದನು. ರಾಣೆಬೆನ್ನೂರಿನಲ್ಲಿದ್ದ 500 ದಂಗೆಕೋರರಿಂದ ರಾಣೆಬೆನ್ನೂರನ್ನು 28 ಜೂನ್ 1800ರಲ್ಲಿ ರಕ್ಷಿಸಿ ವೆಲ್ಲೆಸ್ಲಿ ತನ್ನ ವಶ ಮಾಡಿಕೊಂಡನು.

ಐರಣಿ ಕೋಟೆಯ ತರಹ ರಾಣೆಬೆನ್ನೂರನ್ನು ವಶಪಡಿಸಿಕೊಂಡು ಅದನ್ನು ಅಪ್ಪಾಸಾಹೇಬನಿಗೆ ಕೊಡಲಾಯಿತು. ಆದ್ದರಿಂದ ದೋಂಡಿಯಾನ ದಂಗೆಕೋರರು ತುಂಗಭದ್ರಾದಿಂದ ವರದಾ ನದಿಯ ನಡುವಿನ ಪ್ರದೇಶದಿಂದ ಪಲಾಯನಗೈದರು. ಆದರೆ ಮಾಸೂರು ಹಾಗೂ ರಟ್ಟಿಹಳ್ಳಿ, ಶಿಕಾರಿಪುರದ ನೆರೆಹೊರೆಯಲ್ಲಿ (ಸುತ್ತ–ಮುತ್ತ) ರೈತರ ತಾಳ್ಮೆಯು ಇನ್ನೂ ಬಲವಾಗಿತ್ತು. ಇದರ ನಡುವೆ ದೋಂಡಿಯಾ ದಕ್ಷಿಣ ಭಾರತದಲ್ಲಿ ಬ್ರಿಟಿಷರ ವಿರೋಧಗಳಿಂದ ಪೋರ್ಚುಗಲ್ ಹಾಗೂ ಫ್ರೆಂಚ್‌ರ ಮತ್ತು ಸ್ಥಳೀಯ ಪಾಳೇಗಾರರ ಮತ್ತು ರೈತರ ಸಂಘಟನೆಯ ಒಕ್ಕೂಟವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಇದನ್ನು ಅರಿತ ಲಾರ್ಡ್ ವೆಲ್ಲೆಸ್ಲಿಯು ದೋಂಡಿಯಾನನ್ನು ಹೀಗೇ ಬಿಟ್ಟರೆ 2ನೇ ಹೈದರಾಲಿಯಾಗುವನು ಎಂದು ಭಾವಿಸಿದನು.

ಹೀಗಾಗಿ ಬ್ರಿಟಿಷರು ದೋಂಡಿಯಾನ ವಿರುದ್ಧ ಅನೇಕ ಬಲವಾದ ಕ್ರಮಗಳನ್ನು ಮತ್ತು ಅವನನ್ನು ಶಿಕಾರಿಪುರ, ಚಿತ್ರದುರ್ಗ, ಹರಿಹರ, ರಾಣೆಬೆನ್ನೂರು, ಹಾವೇರಿ, ಕರ್ಜಗಿ, ಸವಣೂರು, ಲಕ್ಷ್ಮೇಶ್ವರ, ಶಿರಹಟ್ಟಿ, ಡಂಬಳ, ಕಿತ್ತೂರು, ಸವದತ್ತಿ, ಜಾಲಿಹಾಳದಿಂದ ಬೆನ್ನತ್ತಿದರು. ಅಂತಿಮವಾಗಿ 10 ಸೆಪ್ಟೆಂಬರ್ 1800ರಲ್ಲಿ ದೇಶದ್ರೋಹಿಗಳ ಸಹಾಯದೊಂದಿಗೆ ಕೋಣಗಲ್‌ನಲ್ಲಿ ಕೊಂದರು. ಹೀಗೆ ದೋಂಡಿಯಾ ತನ್ನ ವಿರುದ್ಧ ಬಂಡಾಯವನ್ನು ಪ್ರಾರಂಭಿಸಿ ಮಹಾನ್ ವ್ಯಕ್ತಿತ್ವವುಳ್ಳ ವ್ಯಕ್ತಿಯಾಗಿದ್ದು, ಭಾರತದ ಬಂಡಾಯ ಹೋರಾಟಕ್ಕೆ ನಾಂದಿಯಾಡಿದನು. ವಸಾಹತು ಕಾಲಘಟ್ಟದಲ್ಲೇ ಬ್ರಿಟಿಷರ ವಿರುದ್ಧ ಸಿಡಿದೇಳುವ ಒಬ್ಬ ವ್ಯಕ್ತಿಯಾಗಿ ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ಕಿಚ್ಚು ಹಚ್ಚಿದ ಧೀಮಂತ ನಾಯಕನಾಗಿದ್ದಾನೆ.

**ಪರಾಮರ್ಶನ ಗ್ರಂಥಗಳು**


- ಮುದ್ದಾಚಾರಿ, ಬಿ. (1912). ಮೈಸೂರು ಮರಾಠ ರಿಲೇಶನ್ಸ್ ಇನ್ ಸೆವೇಂಟೀನ್ಥ ಸೆಂಚೂರಿ. ಸಂಪುಟ–1, ಪು.ಸಂ.110.
- ಶ್ರೀಧರ್ ತೇಲಕರ. (1993). *ಹಿಂದವಿ ಸ್ವರಾಜ್ಯದ ಜನಕ ಷಹಾಜಿರಾಜೆ ಬೋಸಲೆ.* (ಅನು, ಮು.ಶೆ.ಕೇದನೂರ). ಕೇದನೂರು ಮುದ್ರಣಾಲಯ.
- ಮೋಹನ್ ಕುಮಾರ್ ಕದಮ್, ಆರ್. (2010). *ಕನ್ನಡ ನಾಡಿನಲ್ಲಿ ಮರಾಠ ಮೂಲ.* ಸಾಧನಾ ಪ್ರಕಾಶನ.
- ಸೂರ್ಯನಾಥ್‌ಕಾಮತ್ (1992). *ಕರ್ನಾಟಕದಲ್ಲಿ ಮರಾಠರು.* ಎಸ್.ಎಸ್ ಪ್ರಕಾಶನ.
- Nidon, D. R. (1998). *History of Jamkhandi State.* (Unpublished Ph.D thesis) Shivaji University.
- Muddachari. B (1969) *Mysore Marath Relations in The 17th Century Mysore.* (Unpublished Ph.D thesis). Mysore University.
- Ghorpade M.S. (1998). *History of Mudhol State*. Shivaji University

ಸೃಜನಿ

**SRUJANI: Indian Journal of Innovative Research and Development (SIJIRD)**
Volume-3 Issue 2, May-June 2024, Pp. 83-90
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಜಾಗತೀಕರಣ ಮತ್ತು ಸಾಮಾಜಿಕ ನ್ಯಾಯ: ಒಂದು ವಿಶ್ಲೇಷಣೆ

**ಡಾ. ಕೃಷ್ಣಪ್ಪ ಎ**
ಅತಿಥಿ ಉಪನ್ಯಾಸಕರು, ಸಮಾಜಶಾಸ್ತ್ರ ವಿಭಾಗ, ರಾಮನಗರ ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ರಾಮನಗರ.

***Abstract:***
*ಜಾಗತೀಕರಣದ ಪರಿಕಲ್ಪನೆ 19ನೇ ಶತಮಾನದಲ್ಲಿ ಹುಟ್ಟಿ ಬೆಳೆಯಿತು.ಈ ಪರಿಕಲ್ಪನೆ ರಾಜಕೀಯ, ವಾಣಿಜ್ಯ ಮತ್ತು ಸಂವಹನ ಮಾಧ್ಯಮಗಳಲ್ಲಿ ಕೆಲವು ದಶಕಗಳಿಂದ ವ್ಯಾಪಕವಾಗಿ ಬಳಕೆಯಾಗುತ್ತಿದೆ. ಜಾಗತೀಕರಣ ಎಂಬುದು ಜಗತ್ತಿನ ಎಲ್ಲಾ ಸಮಾಜಗಳ ಪರಸ್ಪರ ಅವಲಂಬನೆಯನ್ನು ಸೂಚಿಸುತ್ತದೆ. ಸರಳವಾಗಿ ಹೇಳುವುದಾದರೆ ಪ್ರಪಂಚಾದ್ಯಂತ ಏಕ ರೀತಿಯ ಸಂಸ್ಕೃತಿ ಮತ್ತು ಆರ್ಥಿಕ ಅವಲಂಬನೆಯ ಸಂಕೇತವಾಗಿದೆ. ಜಗತ್ತಿನ ಯಾವುದೇ ದೇಶದಲ್ಲಿ ಯಾವುದೇ ಕ್ರಾಂತಿಕಾರಕ ಪರಿವರ್ತನೆಯಾದರೂ ಕೂಡ ಕೆಲವು ಸವಾಲುಗಳ ಜೊತೆಗೆ ಹಲವು ಅವಕಾಶಗಳ ಸೃಷ್ಟಿಗೂ ಕಾರಣವಾಗುವುದು. ಇದು ಇತಿಹಾಸ ಕಂಡ ಸತ್ಯ. ಜಾಗತೀಕರಣದ ಬಗ್ಗೆಯೂ ಈ ಮಾತು ನಿಜ. ಇಂತಹ ಸವಾಲುಗಳು ಅಭಿವೃದ್ಧಿಯ ಪಥದಲ್ಲಿರುವ ಭಾರತಕ್ಕೆ ಮಾತ್ರ ಎದುರಾಗಿದೆ ಎನ್ನುವಂತಿಲ್ಲ, ಇದು ಸ್ಥಳೀಯ ಸಂಸ್ಕೃತಿ ಮತ್ತು ಅನನ್ಯತೆಗಳ ಮೇಲೂ ಕಾಣಬರುವುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನದಲ್ಲಿ ಜಾಗತೀಕರಣ ಮತ್ತು ಸಾಮಾಜಿಕ ನ್ಯಾಯ ಕುರಿತು ವಿಶ್ಲೇಷಿಸಲಾಗಿದೆ.*

***Keywords:*** *ಜಾಗತೀಕರಣ, ಸಾಮಾಜಿಕ ನ್ಯಾಯ, ಕೈಗಾರೀಕರಣ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು.*

## ಪೀಠಿಕೆ

ಪ್ರತಿಯೊಂದು ಸಮಾಜವು ಜಾಗತಿಕ ಕೇಂದ್ರೀಕೃತ ಆರ್ಥಿಕ, ವಾಣಿಜ್ಯ ಪ್ರಪಂಚದೊಂದಿಗೆ ನಿರಂತರ ಸಂಪರ್ಕ ಮತ್ತು ಅಂತರ್ ಅವಲಂಬನೆಯನ್ನು ಜಾಗತೀಕರಣ ಸೂಚಿಸುತ್ತದೆ. ಜಾಗೀಕರಣ ಜಗತ್ತಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಇನ್ನಿತರ ಅಂಶಗಳನ್ನು ಒಂದುಗೂಡಿಸುವ ಪ್ರಕ್ರಿಯೆ. ಮಾಹಿತಿ ಮತ್ತು ಸಂವಹನ ತಂತ್ರಗಳ ಪ್ರಗತಿಯಿಂದ ಜಗತ್ತಿನ ವಿವಿಧ ಮೂಲೆಗಳಲ್ಲಿರುವ ಸಮಾಜದ ಜನರೊಂದಿಗೆ ಸಂಪರ್ಕ ಬೆಳಸಿಕೊಳ್ಳಲು ಸಹಾಯಕವಾಗಿದೆ.. ಮೊದಲ ಮಹಾಯುದ್ಧದ ವರೆಗೆ ಅದು ಸಾಮ್ರಾಜ್ಯಶಾಹಿ ಹಿನ್ನೆಲೆಯಲ್ಲಿ ಇಂಗ್ಲೆಂಡ್ ಪರ ಚಾಲ್ತಿಯಲ್ಲಿತ್ತು. ದ್ವಿತೀಯ ಮಹಾಯುದ್ಧದ ನಂತರ ಅದು ಅಮೇರಿಕಾದ ಪಾಲಾಯಿತು. 1950ರ ನಂತರ ಉಂಟಾದ ಆರ್ಥಿಕ ಚಟುವಟಿಕೆ ವಿಸ್ತರಣೆಯನ್ನು ವಿಸ್ತರಿಸಲು ಜಾಗತೀಕರಣದ ಪದ ಹೆಚ್ಚು ವ್ಯಾಪಕವಾಗಿ ಬಳಕೆಗೆ ಬಂದದ್ದು 1980ರ ನಂತರ 1983 ರಲ್ಲಿ ಜಾಗತಿಕ ಆರ್ಥಿಕ ವಿಸ್ತರಣೆ ಯನ್ನು ವಿವರಿಸಲು ಜಾಗತೀಕರಣ ಎಂಬ ಪದವನ್ನು ಮೊಟ್ಟಮೊದಲ ಬಾರಿಗೆ ಥಿಯೋಡಾರ್ ಲಿವಿಟ್ ಬಳಸಿದರು. 1991ರಲ್ಲಿ ಸೋವಿಯತ್

***Please cite this article as:*** ಕೃಷ್ಣಪ್ಪ, ಎ. (2024). ಜಾಗತೀಕರಣ ಮತ್ತು ಸಾಮಾಜಿಕ ನ್ಯಾಯ: ಒಂದು ವಿಶ್ಲೇಷಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(2), 83–90

ವಿಘಟನೆಯಾದ ಮೇಲೆ ಅದು ಇನ್ನು ವ್ಯಾಪಕವಾಗಿ ಬಳಕೆಗೆ ಬಂದಿತು. 1991ರಲ್ಲಿ ಭಾರತ ಸರ್ಕಾರವು ಪ್ರಕಟಿಸಿದ ಹೊಸ ಆರ್ಥಿಕ ನೀತಿಯೊಂದಿಗೆ ಭಾರತದ ಆರ್ಥಿಕ ವ್ಯವಸ್ಥೆ ಜಾಗತೀಕರಣಕ್ಕೆ ಕಾಲಿಟ್ಟಿತು. 19ನೇ ಶತಮಾನದ ಮಧ್ಯ ಭಾಗದ ಮತ್ತು 20ನೇ ಶತಮಾನದ ಪ್ರಾರಂಭದಲ್ಲಿ ಕೈಗಾರೀಕರಣ, ನಗರೀಕರಣ, ಕಂಪ್ಯೂಟರೀಕರಣಗಳು ಪ್ರಪಂಚದಾದ್ಯಂತ ಹೆಚ್ಚು ಸಂಚಲನವನ್ನು ಉಂಟುಮಾಡಿದ್ದವು. ಅದೇ ರೀತಿಯಲ್ಲಿ 20ನೇ ಶತಮಾನದ ಕೊನೆಯ ದಶಕಗಳಲ್ಲಿ ಉದಾರೀಕರಣ, ಖಾಸಗೀಕರಣ, ಜಾಗತೀಕರಣದ ಪರಿಕಲ್ಪನೆಗಳು ಹೆಚ್ಚು ಮಹತ್ವ ಪಡೆದುಕೊಂಡಿವೆ. ಜಾಗತೀಕರಣದ ಮುಖ್ಯ ಲಕ್ಷಣವೆಂದರೆ ಭೌಗೋಳಿಕ ಅಂತರಗಳು ಅವನತಿ ಹೊಂದಿ ರಾಷ್ಟ್ರಗಳ ಮಧ್ಯೆ ಇದ್ದ ಗಡಿ ರೇಖೆಗಳು ಮುಕ್ತವಾಗಿ ಬಹುಮುಖ್ಯವಾಗಿ ಬದಲಾವಣೆಗೆ ಕಾರಣವಾಗಿದೆ. ಇದರಿಂದಾಗಿ ಭಾರತದಂತಹ ಸಾಂಪ್ರದಾಯಿಕ ದೇಶಗಳಲ್ಲಿನ ಗುಡಿ ಕೈಗಾರಿಕೆಗಳು ನಶಿಸಿ, ಅವಿಭಕ್ತ ಕುಟುಂಬಗಳು ನಾಶವಾಗಿ, ರೂಡಿ, ಸಂಪ್ರದಾಯ, ಆಚಾರ, ವಿಚಾರ, ಉಡುಪು, ಆಹಾರ ಪದ್ಧತಿಗಳಲ್ಲಿ ಅಗಾದವಾದ ಸಾಮಾಜಿಕ ಬದಲಾವಣೆಗಳಾಗಿವೆ.

**ಜಾಗತೀಕರಣದ ಪರಿಣಾಮಗಳು**

ಅಂತರಾಷ್ಟ್ರೀಯ ಸಂಸ್ಥೆಗಳಾದ ವಿಶ್ವಬ್ಯಾಂಕ್, ಅಂತಾರಾಷ್ಟ್ರೀಯ ಹಣಕಾಸು ನಿಧಿ ಮುಂತಾದವುಗಳು ಎಲ್ಲಾ ದೇಶಗಳ ಮೇಲೆ ನಿಯಂತ್ರಣ ಹೊಂದಿರುವ ಪರಿಸ್ಥಿತಿಯಾಗಿದೆ. ಸಮಾಜಶಾಸ್ತ್ರ ನಿಘಂಟಿನ ಪ್ರಕಾರ ಜಾಗತೀಕರಣ, ಎಂಬುದು ಒಂದು ಪ್ರಕ್ರಿಯೆಯಾಗಿದ್ದು. ಜಗತ್ತಿನ ಸಮಾಜಗಳಲ್ಲಿನ ಸಾಮಾಜಿಕ, ರಾಜಕೀಯ ಜೀವನವು ವ್ಯವಹಾರಿಕ ಸಂಬಂಧಗಳಿಂದ ಹಿಡಿದು ಸಂಗೀತ, ನೃತ್ಯ, ಉಡುಪಿನ ಶೈಲಿ ಹಾಗೂ ಸಮೂಹ ಮಾಧ್ಯಮಗಳ ವರೆಗೆ ಎಲ್ಲಾ ಕ್ಷೇತ್ರಗಳಲ್ಲೂ ಅಂತರಾಷ್ಟ್ರೀಯ ಪ್ರಭಾವಗಳಿಗೆ ಒಳಪಟ್ಟಿರುವುದು. ವಿಶ್ವದಲ್ಲಿನ ಸಮಾಜದ ಜನರನ್ನು ಪರಿಗಣನೆಗೆ ತೆಗೆದುಕೊಳ್ಳುವುದರೊಂದಿಗೆ ರಾಷ್ಟ್ರಗಳ ಮಧ್ಯೆ ವ್ಯಕ್ತಿ ಸೇವೆ ಮತ್ತು ಜ್ಞಾನವನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದೇ ಜಾಗತೀಕರಣವಾಗಿದೆ. ಸಂಸ್ಥೆಗಳು ಅಥವಾ ಕಂಪನಿಗಳು ವಿಭಿನ್ನ ದೇಶಗಳಲ್ಲಿ ಒಂದೇ ಕಾಲದಲ್ಲಿ ಅಲ್ಪ ವೆಚ್ಚದಲ್ಲಿ ವಸ್ತು ಮತ್ತು ಸೇವೆಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ತನ್ನ ವ್ಯಾಪಾರ ವ್ಯವಹಾರ ನಡೆಸುವುದು. ಜಾಗತೀಕರಣದ, ಮಹತ್ವದ ಲಕ್ಷಣಗಳೆಂದರೆ ಸರಕು ಮತ್ತು ಸೇವೆಗಳನ್ನು ಜಗತ್ತಿನ ಯಾವುದೇ ಮೂಲೆಯಲ್ಲಾದರೂ ಉತ್ಪಾದಿಸಿ, ಯಾವುದೇ ಮೂಲೆಯಲ್ಲಿ ಬೇಕಾದರೂ ಮಾರಾಟ ಮಾಡಬಹುದು. ಸರಕುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದನೆ ಮಾಡುವುದರಿಂದ ಉತ್ಪಾದನೆ ವೆಚ್ಚ ಕಡಿಮೆಯಾಗಿ, ಲಾಭ ಪಡೆಯಲು ಅನುಕೂಲವಾಗುತ್ತದೆ. ಒಂದು ದೇಶವು ತನಗೆ ಬೇಕಾದ ಸರಕುಗಳನ್ನು ಉತ್ತಮ ಗುಣಮಟ್ಟದಲ್ಲಿ ಉತ್ಪಾದಿಸುವುದರೊಂದಿಗೆ ಕಡಿಮೆ ಖರ್ಚಿನಿಂದ ಉತ್ಪಾದಿಸುವ ದೇಶದಿಂದ ತರಿಸಿಕೊಳ್ಳುವುದು, ಇದರಿಂದ ದೇಶದ ಸಂಪನ್ಮೂಲ ಉಳಿಯುವುದಲ್ಲದೆ ನಮ್ಮ ಅವಶ್ಯಕತೆ ಪೂರೈಸುತ್ತದೆ.ಇದು ಒಂದು ಮುಕ್ತ ಮಾರುಕಟ್ಟೆಯಾಗಿದೆ. ಹಣ ಒಂದಿದ್ದರೆ ಏನು ಬೇಕಾದರೂ ಪಡೆದುಕೊಳ್ಳಬಹುದು, ಇದು ಸ್ಪರ್ಧೆ ಮತ್ತು ಶ್ರಮವಿಭಜನೆ ಸಿದ್ಧಾಂತವನ್ನು ಅವಲಂಬಿಸಿದೆ. ಹೆಚ್ಚಿನ ಬಂಡವಾಳ, ಆಧುನಿಕ ತಂತ್ರಜ್ಞಾನ ಹಾಗೂ ರಫ್ತು ಮಾರುಕಟ್ಟೆಯಿಂದಾಗಿ ಸಾಮರಸ್ಯ ಹೆಚ್ಚುತ್ತದೆ. ಮುಂದುವರೆದ ದೇಶಗಳ ತಂತ್ರಜ್ಞಾನದ ಬಳಕೆ ಕಡಿಮೆ ವೆಚ್ಚ ಉತ್ತಮ ಗುಣಮಟ್ಟದಿಂದ ಗ್ರಾಹಕರ ಮೇಲೆ ಸಕಾರಾತ್ಮಕ ಪರಿಣಾಮ ಬೀರಿ, ಜಾಗತೀಕರಣಕ್ಕೆ ಪುಷ್ಟಿ ನೀಡಿದಂತಾಗಿದೆ. ಸಂವಹನ ತಂತ್ರಜ್ಞಾನದ ಮೂಲ ಸೌಕರ್ಯಗಳ ಬೆಳವಣಿಗೆ ಯಿಂದಾಗಿ ಅಂತರಾಷ್ಟ್ರೀಯ ಸಂವಹನ ಕ್ಷೇತ್ರಗಳಲ್ಲಿ ಗಣನೀಯವಾದ ಪ್ರಗತಿಯಾಗಿದೆ. ಪ್ರಸ್ತುತ ಪ್ರಪಂಚದ್ಯಂತ 200ಕ್ಕಿಂತ ಹೆಚ್ಚು ಉಪಗ್ರಹಗಳು ಬಾಹ್ಯಾಕಾಶದಿಂದ ಮಾಹಿತಿಗಳನ್ನು ರವಾನಿಸುತ್ತಿವೆ.

ಅಂತರ್ಜಾಲ, ದೂರವಾಣಿ, ಕಂಪ್ಯೂಟರ್, ಮೊಬೈಲ್, ಲ್ಯಾಪ್ಟಾಪ್, ದೂರದರ್ಶನ ಮುಂತಾದವುಗಳ ಬಳಕೆಯಿಂದ ಸೃಷ್ಟಿಯಾಗಿರುವ ಸಂಪರ್ಕವನ್ನು ಮಾಹಿತಿ ತಂತ್ರಜ್ಞಾನ ಎಂದು ಕರೆಯಲಾಗುತ್ತಿದೆ. ಸ್ಥಳೀಯವಾಗಿ ಇದ್ದುಕೊಂಡೆ ಕಾರ್ಯನಿರ್ವಹಿಸಲು ಮಾಹಿತಿ ತಂತ್ರಜ್ಞಾನದಿಂದ ಸಾಧ್ಯವಾಗಿದೆ. ವಿಶಾಲವಾದ ಜಗತ್ತು ಗಾತ್ರದಲ್ಲಿ ಕುಗ್ಗಿದಂತಾಗಿ ಜಗತ್ತಿನ ದೇಶಗಳು ತನ್ನ ರಾಷ್ಟ್ರೀಯ ಗಡಿಗಳ ಆಚೆಗೂ ಬಂದು ಜಾಗತಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಸಹಾಯಕವಾಗಿದೆ. ಮಾಧ್ಯಮಗಳ ಕ್ಷೇತ್ರದಲ್ಲಾದ ಅದ್ಭುತಗಳಿಂದಾಗಿ ಇಡೀ ವಿಶ್ವವೇ ಒಂದು ಗ್ರಾಮದಂತಾಗಿದೆ.

ಜಾಗತೀಕರಣದಿಂದ ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿನ ಸ್ತ್ರೀಯರು ಉನ್ನತ ಶಿಕ್ಷಣಕ್ಕೆ ಕಾಲಿಡಲು ಸಹಾಯಕವಾಗಿದೆ. ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಹಣ ಹೂಡಿ ಅಲ್ಲಿ ಉದ್ಯಮಗಳ ಬೆಳವಣಿಗೆಗೆ ಹಾಗೂ ಉದ್ಯೋಗಾವಕಾಶಗಳಿಗೆ ಕಾರಣವಾಗುತ್ತಿವೆ.

**ಜಾಗತೀಕರಣ ಹಾಗೂ ಭಾರತದಲ್ಲಿ ಸಾಮಾಜಿಕ ಪರಿವರ್ತನೆ**

ಜಗತ್ತಿನ ಯಾವುದೇ ದೇಶದಲ್ಲಿ ಯಾವುದೇ ಕ್ರಾಂತಿಕಾರಕ ಪರಿವರ್ತನೆಯಾದರೂ ಕೂಡ ಕೆಲವು ಸವಾಲುಗಳ ಜೊತೆಗೆ ಹಲವು ಅವಕಾಶಗಳ ಸೃಷ್ಟಿಗೂ ಕಾರಣವಾಗುವುದು. ಇದು ಇತಿಹಾಸ ಕಂಡ ಸತ್ಯ. ಜಾಗತೀಕರಣದ ಬಗ್ಗೆಯೂ ಈ ಮಾತು ನಿಜ. ಇಂತಹ ಸವಾಲುಗಳು ಅಭಿವೃದ್ಧಿಯ ಪಥದಲ್ಲಿರುವ ಭಾರತಕ್ಕೆ ಮಾತ್ರ ಎದುರಾಗಿದೆ ಎನ್ನುವಂತಿಲ್ಲ, ಇದು ಸ್ಥಳೀಯ ಸಂಸ್ಕೃತಿ ಮತ್ತು ಅನನ್ಯತೆಗಳ ಮೇಲೂ ಕಾಣಬರುವುದು. ಜಾಗತೀಕರಣದಿಂದ ಸಾಮಾಜಿಕ ಸಂರಕ್ಷಣೆ ಮತ್ತು ರಾಜಕೀಯ ಪರಿಣಾಮಗಳನ್ನು ಪರಿಶೀಲಿಸಿ ನೋಡುವುದಾದರೆ ಭಾರತವು ಎಂದಿಗೂ ಗ್ರಾಮೀಣ ಕೃಷಿ ಪ್ರಧಾನ ಸಮಾಜವಾಗಿಯೆ ಉಳಿದಿದೆ. ದೇಶದ ಸುಮಾರು 33ರಷ್ಟು ಜನರು ಮಾತ್ರ ನಗರ ಪ್ರದೇಶಗಳಲಿದ್ದರೆ. ನಗರಗಳಲ್ಲಿನ ಜನಸಂಖ್ಯೆಯ ಹೆಚ್ಚಳವೂ ಕೂಡ ಉದ್ಯೋಗಗಳನ್ನು ಹಾರಿಸುತ್ತಾ ಬಂದಂತಹ ಗ್ರಾಮೀಣ ಬಡ ಜನರ ಮೇಲೆ ಉಂಟಾಗಿದೆ ಎನ್ನಬಹುದು. ಇಂತಹ ಬಹಳಷ್ಟು ಮಂದಿ ನಗರದ ಅರ್ಥವ್ಯವಸ್ಥೆಯಲ್ಲಿ ಸೀಮಂತ ಗೊಳಿಸಲ್ಪಡುವರು ಮತ್ತು ನಗರ ಸಾಮಾಜಿಕ ಸಂರಕ್ಷಣೆಯ ಅತ್ಯಂತ ಕೆಳ ಸ್ಥರದಲ್ಲಿ ಉಳಿದುಕೊಳ್ಳುವರು. ಈ ರೀತಿಯ ಅಸಮಾನತೆಗಳನ್ನು ಗ್ರಾಮ ಮತ್ತು ಪಟ್ಟಣಗಳ ನಡುವೆ ಮಧ್ಯಮ ವರ್ಗಗಳು ಮತ್ತು ಕೆಳ ವರ್ಗಗಳ ನಡುವೆ ಪುರುಷ ಮತ್ತು ಸ್ತ್ರೀಯರ ನಡುವೆ ಸೀಮಂತಗೊಳಿಸಲ್ಪಟ್ಟ ಕುಲಸಂಬಂಧಿ ಸಮೂಹಗಳು ಮತ್ತು ಪ್ರಬಲ ಜಾತಿ ಸಮುದಾಯಗಳ ನಡುವೆ ನಗರದ ಚಲನಶೀಲ ಅನಿವಾಸಿಗಳ ಪ್ರಜೆಗಳ ಮತ್ತು ಗ್ರಾಮಾಂತರ ಪ್ರದೇಶಗಳಿಗೆ ಅಂಟಿಕೊಂಡಿರುವ ಜನ ಸಮುದಾಯಗಳೊಂದಿಗೆ ನಗರದ ಕೊಳಗೇರಿ ಪ್ರದೇಶಗಳು ಮತ್ತು ಆದಿವಾಸಿ ಪ್ರದೇಶಗಳ ನಡುವೆ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಜಾಗತೀಕರಣ ಈ ವಿಭಿನ್ನ ಜನವರ್ಗಗಳನ್ನು ಹೇಗೆ ತಟ್ಟುವುದು, ಜಾಗತೀಕರಣದಿಂದ ಗರಿಷ್ಠ ಮಟ್ಟದ ಲಾಭವನ್ನು ಒಂದು ವರ್ಗ ಮಾತ್ರ ಪಡೆಯುತ್ತಿದೆ. ಈ ಹಿಂದೆ ಅಭಿವೃದ್ಧಿಯ ಸಹಾಯದಿಂದ ಅಂತಹ ಏಣಿಯ ಮೇಲೆ ಏರಿ ಬಂದ ಈ ವರ್ಗವು ತನಗೀಗ ಅಗತ್ಯವಿಲ್ಲದ ಏಣಿಯನ್ನು ಬದಿಗೊತ್ತಿದೆ. ಇದೀಗ ಮಧ್ಯಮ ವರ್ಗವು ತಾನು ದೇಶದ ಜನಸಮುದಾಯವನ್ನು ಪ್ರತಿನಿಧಿಸುತ್ತಿರುವುದಾಗಿ ಹೇಳಿಕೊಳ್ಳುತ್ತಿಲ್ಲ, ಅದರ ಬದಲಾಗಿ ತಾನೇ ದೇಶವಾಗಿರುವೆನೆಂದು ಭಾವಿಸುತ್ತಿದೆ. ಶ್ರೀಮಂತರು ದೊಡ್ಡ ಗಾತ್ರದ ಜಮೀನು ಹೊಂದಿರುವ ರೈತರಿಗೆ ಜಾಗತೀಕರಣದಿಂದ ಬಹಳಷ್ಟು ಅನುಕೂಲತೆಗಳನ್ನು ಹಾಗೂ ಲಾಭವನ್ನು ಪಡೆಯಬಲ್ಲವರಾಗಿದ್ದಾರೆ. ಈ ವರ್ಗವು ಕೃಷಿಗೆ ನೀಡಲಾಗುತ್ತಿದ್ದ ಸಹಾಯಧನವನ್ನು ಕಡಿತಗೊಳಿಸಿರುವ ಬಗ್ಗೆ ಹಾಗೂ ಕೃಷಿ ಉದ್ದಿಮೆಗೆ ಸಂಬಂಧಿಸಿದಂತೆ ಬಹುರಾಷ್ಟ್ರೀಯ ಕಂಪನಿಗಳು ಕಾಲಿಡಿಲು ಸಿದ್ಧವಾಗುತ್ತಿರುವ ಬಗ್ಗೆ ತನ್ನ

ಆತಂಕವನ್ನು ವ್ಯಕ್ತಪಡಿಸಿವೆ. ಈ ವರ್ಗವು ಜಾಗತೀಕರಣವನ್ನು ವಿರೋಧಿಸುತ್ತಿರುವುದನ್ನು ಕರ್ನಾಟಕ, ಉತ್ತರಪ್ರದೇಶ, ಗುಜರಾತ್ ನಲ್ಲಿ ಕಾಣಬಹುದು. ಕೃಷಿಯ ಖರ್ಚಿನಲ್ಲಿ ಹೆಚ್ಚಳ ಮತ್ತು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪ್ರಾಥಮಿಕ ಕೃಷಿ ಸರಕುಗಳ ಬೆಲೆ ಕುಸಿತ, ಇಂತಹ ಸ್ಥಿತಿ ಮಿಗುತಾಯ ಉತ್ಪಾದನೆ ಮಾಡುವ ಕೃಷಿಕರನ್ನು ಕೂಡ ನೇತಾತ್ಮಕವಾಗಿ ಕಾಡುವುದು. ಇಂತಹ ಸನ್ನಿವೇಶದಲ್ಲಿ ಕೃಷಿಕರ ಒಂದು ಸಣ್ಣ ವರ್ಗ ಜಾಗತೀಕರಣವನ್ನು ಸಮರ್ಥಿಸಿದರೆ, ಇನ್ನೊಂದು ದೊಡ್ಡ ವರ್ಗ ವಿರೋಧಿಸುತ್ತಿರುವುದು.

ಜಾಗತೀಕರಣ ಕಳೆದ ಮೂರು ದಶಕಗಳಿಂದ ಕಾರ್ಯಾಚರಣೆಯಲ್ಲಿರುವ ಎಲ್ಲಾ ದೇಶಗಳಿಗೆ ಎಲ್ಲ ರೀತಿಗಳಿಂದ ಅನಕೂಲತೆಗಳನ್ನು ಒದಗಿಸಿದೆ ಎಂಬುದಕ್ಕೆ ಯಾವುದೇ ಆಧಾರಗಳಿಲ್ಲ. ಜಾಗತೀಕರಣವು ಜಗತ್ತಿನ ಹೆಚ್ಚಿನ ಬಡದೇಶಗಳಿಗೆ ಅಥವಾ ಅನಾಭಿವೃದ್ಧಿ ದೇಶಗಳಿಗೆ ಪೂರಕವಾಗಿರುವುದರ ಬದಲು ಮಾರಕವಾಗಿದೆಯೇ? ಅನಾರೋಗ್ಯ ದೇಶಗಳನ್ನು ಶೋಷಣೆ ಮಾಡಲು ಅಭಿವೃದ್ಧಿ ಹೊಂದಿದ ದೇಶಗಳಿಗೆ ಅದು ಇನ್ನಷ್ಟು ಅವಕಾಶಗಳನ್ನು ನೀಡುತ್ತಿದೆಯೇ? ಎಂಬ ಸಂಶಯವು ಮೂಡುತ್ತಿದೆ. ಆದ್ದರಿಂದ ಭಾರತ ಮಾತ್ರವಲ್ಲದೆ ಜಾಗತಿಕ ನೆಲೆಯಲ್ಲಿ ಮುಖ್ಯವಾಗಿ ಶೈಕ್ಷಣಿಕ ವಲಯದಲ್ಲಿ ಜಾಗತಿಕರಣದ ಪ್ರಕ್ರಿಯೆ, ಪ್ರಭಾವ, ಪರಿಣಾಮಗಳ ಕುರಿತಂತೆ ಅಂತರಾಷ್ಟ್ರೀಯ ಮಟ್ಟಗಳಲ್ಲಿ ಚರ್ಚಾ–ವಿಚಾರ, ಮಂಥನ, ಅಧ್ಯಯನ, ಸಂಶೋಧನೆ ಇತ್ಯಾದಿಗಳು ಬಿರುಸಿನಿಂದ ಚರ್ಚೆಗೆ ಒಳಗಾಗುತ್ತಿವೆ. 2003ರ ಕಾಲಘಟ್ಟದಲ್ಲಿ ನೋಡುವಾಗ ಶ್ರೀಲಂಕಾ ಮತ್ತು ಪಾಕಿಸ್ತಾನಗಳಂತಹ ದೇಶಗಳು ಆರ್ಥಿಕವಾಗಿ ದಿವಾಳಿಯ ಹಂಚನ್ನು ತಲುಪಿರುವುದು, ಇಂಡೋನೇಷಿಯಾ, ಸಿರಿಯ ಸಹಿತವಾಗಿ ಆಫ್ರಿಕಾದ ಕೆಲವು ದೇಶಗಳು ಆರ್ಥಿಕ ಸಂಕಟವನ್ನು ಅನುಭವಿಸುತ್ತಿರುವಾಗ ಈ ಚರ್ಚೆಗೆ ಇನ್ನಷ್ಟು ಪುಷ್ಟಿ ಸಿಕಂತಾಗಿದೆ. ಜಾಗತೀಕರಣವನ್ನು ಬಲವಾಗಿ ಒಪ್ಪಿಕೊಳ್ಳುವವರು ಈ ಪ್ರಕ್ರಿಯೆಯ ಪರಿಣಾಮವಾಗಿ ಅನೇಕ ಬಡ ದೇಶಗಳಲ್ಲಿನ ಹಂಚಿನ ಸಂವಹಗಳಿಗೆ ಸಾಮಾಜಿಕ ನ್ಯಾಯ ಲಭಿಸುತ್ತಿದೆಯೆ? ಅಂತಹ ನ್ಯಾಯವನ್ನು ಅದು ಕೊಡಿಸಬಲ್ಲದೆ? ಎಂಬ ಪ್ರಶ್ನೆಗೆ ಉತ್ತರಿಸಬೇಕಾಗಿದೆ.

ಭಾರತದ ವಿಚಾರದಲ್ಲಿ ಹೇಳುವುದಾದರೆ ಜಾಗತೀಕರಣದಿಂದ ಸಾಕಷ್ಟು ಅನುಕೂಲತೆಗಳನ್ನು ಪಡೆದಿದ್ದರೂ ಮಾಹಿತಿ ತಂತ್ರಜ್ಞಾನ ವಿಷಯದಲ್ಲಿ ಭಾರತದ ಉತ್ಕೃಷ್ಟ ಸಾಮರ್ಥ್ಯದಿಂದಾಗಿ ದೇಶಕ್ಕೆ ಹಣದ ಒಳಹರಿವಿನೊಂದಿಗೆ ಬಹಳಷ್ಟು ಲಾಭವಾಗಿದ್ದರೂ ಅಂತಹ ಲಾಭ ಅನುಕೂಲತೆಗಳು ದೇಶದ ಎಲ್ಲಾ ಜನ ವರ್ಗಗಳಿಗೆ ಲಭಿಸಿದೆ ಎಂಬ ಪ್ರಶ್ನೆ ಬರುವುದು. ದೇಶದಲ್ಲಿ ಬಹುದೊಡ್ಡ ಸಂಖ್ಯೆಯಲ್ಲಿರುವ ಅಂಚಿನ ಸಮೂಹಗಳಿಗೆ ಈ ಪ್ರಕ್ರಿಯೆ ಅನುಕೂಲವಾಗಿದೆಯೇ? ಅಥವಾ ಈ ಸಮೂಹಗಳಿಗೆ ಮಾರಕವಾಗಿದ್ದು ಅವರನ್ನು ಇನ್ನಷ್ಟು ಹಂಚಿನ ಕಡೆಗೆ ತಳ್ಳುವಂತೆ ಮಾಡುತ್ತಿದೆಯೇ ಎಂಬ ಪ್ರಶ್ನೆ ಕೂಡ ಇಲ್ಲಿ ಚರ್ಚಿಸಬೇಕಾಗಿದೆ. ಸಾಮಾಜಿಕ ನ್ಯಾಯಕ್ಕೆ ಪೂರಕವಾಗಿದೆಯೇ ಇಲ್ಲವೇ ಮಾರಕವಾಗಿದೆಯೆ ಅಥವಾ ಅದಕ್ಕೆ ಸಂಬಂಧವಿಲ್ಲದಂತೆ ಆ ವಿಷಯದಲ್ಲೊ ಅನಾಸಕ್ತವಾಗಿದೆಯೇ ಅಥವಾ ನಿರ್ಲಿಪ್ತವಾಗಿದೆಯೆ ಎಂಬ ಅಂಶವನ್ನು ಭಾರತದ ವಿಷಯದಲ್ಲಿ ಅರ್ಥೈಸಿಕೊಳ್ಳುವುದು ಸಾಧ್ಯ. ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಾದರೆ ಜಾಗತೀಕರಣದಿಂದ ಭಾರತೀಯ ಸಮಾಜದಲ್ಲಿ ಉಂಟಾಗುತ್ತಿರುವ ಸಾಮಾಜಿಕ ಪರಿವರ್ತನೆಗಳ ಸ್ವರೂಪವನ್ನು ತಿಳಿದುಕೊಳ್ಳುವುದು ಅಗತ್ಯವೆನಿಸುವುದು. ಸಮಾಜದ ದುರ್ಬಲ ಮತ್ತು ಸೀಮಂತ ಗೊಳಿಸಲ್ಪಟ್ಟ ವರ್ಗಗಳ ಮೇಲೆ ನೇತಾತ್ಮಕ ಪ್ರಭಾವ ಇರುವುದರಿಂದ ಜಾಗತೀಕರಣವು ಕೃಷಿ ಬಂಡವಾಳ ಪ್ರಧಾನವಾಗುವ ಸಾಧ್ಯತೆ ಇದೆ. ಕೃಷಿ ಕ್ಷೇತ್ರಕ್ಕೆ ಕಾರ್ಪೊರೇಟ್ ಪ್ರಪಂಚದ ಪ್ರವೇಶವಾಗುವ ಸೂಚನೆಗಳಿದ್ದು. ಇಲ್ಲಿ ಜಾಗತಿಕ ಕೃಷಿ, ಉದ್ದಿಮೆ

ಮತ್ತು ಜೈವಿಕ ತಂತ್ರಜ್ಞಾನ, ಕಾರ್ಪೊರೇಟ್‌ಗಳ ಬಲವಾದ ಹಿಡಿತದಿಂದ ಬಂಡವಾಳಶಾಹಿ ವರ್ಗ ಉಗಮಕ್ಕೆ ಕಾರಣವಾಗಿದೆ.

ಇದೇ ಕಾರಣಕ್ಕಾಗಿ ಸಣ್ಣ, ಮಾಧ್ಯಮ ಕೃಷಿಕರು ಆಂಧ್ರಪ್ರದೇಶ, ಪಂಜಾಬ್, ಹಾಗೂ ಕರ್ನಾಟಕದಲ್ಲಿ ಬಹು ದೊಡ್ಡ ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಜಾಗತೀಕರಣದಿಂದ ಪರಿಶಿಷ್ಟ ಜಾತಿ ಹಾಗೂ ಪಂಗಡಗಳ ಆಸಕ್ತಿಗಳಿಗೆ ಗಂಭೀರ ದಕ್ಕೆ ಆಗಿರುವುದು. ಭಾರತ ಸರ್ಕಾರವು 1990 ರ ದಶಕದಲ್ಲಿ ಜಾರಿಗೆ ತಂದ ಹೊಸ ಆರ್ಥಿಕ ಧೋರಣೆಯ ಸುಧಾರಣೆಗಳು ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಯಾವುದೇ ಅನುಕೂಲತೆಗಳನ್ನು ಒದಗಿಸಿಲ್ಲ. ಬದಲಾಗಿ ಈ ಸುಧಾರಣೆಗಳು ಅವರ ಸೀಮಂತ ಗೊಳಿಸುವಿಕೆ ಮತ್ತು ಸ್ಥಳಾಂತರಕ್ಕೆ ಕಾರಣವಾಗಿದೆ. ಅವರನ್ನು ಉದ್ಯೋಗ ವಂಚಿತರನ್ನಾಗಿ ಮಾಡುವುದು. ಹೆಚ್ಚುತ್ತಿರುವ ಖಾಸಗಿಕರಣ, ವಾಣಿಜ್ಯ ಕರಣ ಮತ್ತು ಉನ್ನತ ಶಿಕ್ಷಣಗಳು ಈ ವರ್ಗಗಳನ್ನು ಹೆಚ್ಚು ಕಡಿಮೆ ಜಡ ರಹಿತ ಸ್ಥಿತಿಯಲ್ಲಿ ಇರಿಸಿವೆ. ಈ ಕುಗ್ಗುತ್ತಿರುವ ಸಾಮಾಜಿಕ ಭದ್ರತೆ ಕೃಷಿಯಲ್ಲಿ ಪರಂಪರಾಗತ ಶ್ರಮದ ಸ್ಥಾನಂತರ ಉದ್ಯೋಗಗಳ ಖಾಸಗಿಕರಣ ಇಂತಹ ಬೆಳವಣಿಗೆಗಳು ದಲಿತರ ಅಸ್ತಿತ್ವಕ್ಕೆ ಸಂಚಕಾರ ತರುತ್ತಿದೆ. ಬೆಲೆ ಏರಿಕೆ, ನಿರುದ್ಯೋಗ ಮತ್ತು ಅರೆ ಉದ್ಯೋಗಗಳ ನಡುವೆ ಸಿಲುಕಿ ಅವರು ನಲಗಿ ಹೋಗುವ ಸಾಧ್ಯತೆ ಇದೆ. ಉದಾರೀಕರಣ, ಖಾಸಗೀಕರಣಗಳ ಫಲವಾಗಿ ಸಣ್ಣ ಕೃಷಿಕರು ತಮ್ಮ ಭೂಮಿಯನ್ನೆಲ್ಲ ರಾಷ್ಟ್ರಾತೀತ ಕಂಪನಿಗಳಿಗೆ ವಹಿಸಿಬಿಡುವ ಸ್ಥಿತಿಯಾಗಿದೆ. ಇಲ್ಲಿಯೂ ಭೂ ರಹಿತ ಆದಿವಾಸಿಗಳು ಇದರ ಜೊತೆಗೆ ಅವರ ಸಂಸ್ಕೃತಿಯ ಮೇಲೆ ದಾಳಿಯಾಗುವ ಆತಂಕವು ಇದೆ. ಸರ್ಕಾರದ ನಿಯಂತ್ರಣದ ಹೊರತಾಗಿಯೂ ಆದಿವಾಸಿಗಳು ತಮ್ಮ ಭೂಮಿಯನ್ನು ದೊಡ್ಡ ದೊಡ್ಡ ಬೇಸಾಯಗಾರರಿಗೆ ತೋಟದ ಬೆಳೆ ಬೆಳೆಯಲು, ಬೋಗ್ಯದ ನೆಲೆಯಲ್ಲಿ ಇತರರಿಗೆ ಹಸ್ತಾಂತರಿಸಿದ್ದಾರೆ. ಹಾಗೆ ಒಮ್ಮೆ ನೀಡಿದ ಭೂಮಿ ಮರಳಿ ಅವರ ಕೈವಶವಾಗುವ ಸಾಧ್ಯತೆಯೂ ಕಡಿಮೆ. ಅಲ್ಲದೆ ಕೂಲಿಗಾಗಿ ಉದ್ಯೋಗ ನಡೆಸುವುದೇ ಹೆಚ್ಚು ಲಾಭದಾಯಕ ಎಂದು ಅವರಿಗೆ ಅನ್ನಿಸುವುದರಿಂದ ಜಮೀನಿನ ಬೆಲೆ ಅವರಿಗಿನ್ನು ಅರ್ಥವಾಗಿಲ್ಲ. ಎಂದು ಅರ್ಥ. ಭಯವೇನೆಂದರೆ ಆದಿವಾಸಿಗಳ ಪ್ರಾಚೀನ ಮಾದರಿಯ ಕೃಷಿಯು ದೊಡ್ಡ ಭೂಮಿಯ ಭಾಗವಾಗಿ ವಾಣಿಜ್ಯ ಬೆಳೆಗಳ ತೀವ್ರತೆಗಾಗಿ ತೋಟಗಳಾಗಿ, ಹುಲ್ಲುಗಾವಲುಗಳಾಗಿ ಅಥವಾ ಧನಗಾವಲುಗಳಾಗಿ, ದನಗಾವಲಿನ ದೊಡ್ಡಿಗಳಾಗಿ ರೂಪಾಂತರಗೊಳ್ಳುವ ಎಲ್ಲಾ ಸಾಧ್ಯತೆಗಳು ಇವೆ. ತಮ್ಮದೇ ಭೂಮಿಯಲ್ಲಿ ಅವರು ಕೇವಲ ಕೃಷಿಕಾರ್ಮಿಕರಾಗಿ ದುಡಿವ ಸ್ಥಿತಿ ಉಂಟಾಗಿದೆ. ಇದರಿಂದ ನಿರುದ್ಯೋಗ ಹಾಗೂ ಬಡತನ ಇನ್ನಷ್ಟು ಹೆಚ್ಚಿ. ಶ್ರಮಿಕರ ಸಂಬಳದ ಮೇಲೂ ಅಕ್ರಮಗಳು ನಡೆದವು. ಸ್ವಇಚ್ಚೆಯ ನಿವೃತ್ತಿ ಯೋಜನೆಗಳನ್ನು ಸರ್ಕಾರಿ ಹಾಗೂ ಖಾಸಗಿ ವಲಯಗಳಲ್ಲಿ ತಂದು ಹಲವಾರು ಮಂದಿ ಉದ್ಯೋಗಸ್ಥರನ್ನು ಮನೆಗೆ ಕಳಿಸಲಾಯಿತು. ಈ ದಿನಗಳಲ್ಲಿ ಸರ್ಕಾರವನ್ನು ಒಳಗೊಂಡಂತೆ ಉದ್ಯೋಗಪತಿಗಳು ಬೋನಸ್ ಕೊಡುಗೆಗಳನ್ನು ನಿಲ್ಲಿಸಿದರು. ಹೆಚ್ಚುವರಿ ಕೆಲಸ ಭತ್ಯೆಯನ್ನು ಸ್ಥಗಿತಗೊಳಿಸುವುದು, ಕೂಲಿಯನ್ನು ವಾರಗಳವರೆಗೆ, ತಿಂಗಳವರೆಗೆ ಕೊಡದೆ ಮುಂದೆ ಹಾಕುವುದು. ಕೆಲಸವನ್ನು ಬಿಡುವಂತೆ ಉಪಟಳ ನೀಡಿ ಹಿಂಸಿಸುವುದು ಇಂತಹ ಕ್ರಮಗಳಲ್ಲಿ ಏಕಪಕ್ಷಿಯ ಎಂಬಂತೆ ಕೂಡ ಕಂಡುಬರುತ್ತದೆ. ಪರಂಪರಾಗತ ಕೈಗಾರಿಕಾ ಶ್ರಮಿಕ ವರ್ಗವು ಈಗ ಕಂಡುಬರುತ್ತಿರುವ ಶ್ರೀಮಂತ ಉದ್ಯೋಗಿಗಳ ಹೆಚ್ಚಳ ಉದ್ಯೋಗ ಭರವಸೆ ಇಲ್ಲದಿರುವಿಕೆ ಒಪ್ಪಂದದ ಉದ್ಯೋಗ ಹಂಗಾಮಿ ಹುದ್ದೆಯಾಗಿ ನೇಮಕ ಇಂತಹ ಬೆಳವಣಿಗೆಗಳಿಂದ ಬಹಳಷ್ಟು ಸಂಕಷ್ಟಕ್ಕೀಡಾಗಿದೆ. ಜಾಗತೀಕರಣದ ಸವಾಲುಗಳು ನಮ್ಮ ಸಮಾಜದಲ್ಲಿ ಸಾಮಾಜಿಕ ಸಂರಕ್ಷಣೆಯ ಸ್ವರೂಪದ ಬಿಕ್ಕಟ್ಟುಗಳನ್ನು ಹುಟ್ಟುಹಾಕಿವೆ. ಕೆಲವು

ಅಧ್ಯಯನಗಳ ಸೂಚಿಸಿರುವಂತೆ ಈಗಲೂ ಕೂಡ ಕಾರ್ಖಾನೆ ಉತ್ಪಾದಿತ ಬಳಕೆದಾರರ ವಸ್ತುಗಳಲ್ಲಿ ಶೇಕಡ 70 ರಿಂದ 80ಕ್ಕೆ ಕಡಿಮೆ ಇಲ್ಲದಷ್ಟು ಪ್ರಮಾಣದಲ್ಲಿ ವಸ್ತುಗಳು ಗ್ರಾಮಾಂತರ ಪ್ರದೇಶಗಳಲ್ಲಿಯೇ ಬಳಕೆಯಾಗುತ್ತಿವೆ. ಈ ಕೊಳ್ಳುವ ಸಾಮರ್ಥ್ಯ ಅವರಲ್ಲಿ ಇನ್ನೇಷ್ಟು ಸಮಯ ಮುಂದುವರಿಯಲಿದೆ? ಎಂಬುದು ಒಂದು ಪ್ರಶ್ನೆ. ಗ್ರಾಮಗಳಲ್ಲೂ ಒಂದು ಮಧ್ಯಮ ವರ್ಗ ಉಗಮವಾಗಿದೆ. ಅದು ದಿನೇದಿನೇ ಹೆಚ್ಚು ಬಲಗೊಳ್ಳುತ್ತಿದೆ, ಜಾಗತೀಕರಣದ ಪರಿಣಾಮಗಳನ್ನು ಉತ್ತರಿಸುತ್ತ ಹೋಗುವಲ್ಲಿ ಮಾಧ್ಯಮಗಳು ಕೂಡ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಿವೆ. ದೂರವಾಣಿ, ಮೊಬೈಲ್, ರೇಡಿಯೋ ಮತ್ತು ದೂರು ದರ್ಶನಗಳ ಬಳಕೆಯ ಸೌಲಭ್ಯಗಳ ಹೆಚ್ಚಳದ ಜೊತೆಗೆ ಕೆಲವು ಪ್ರದೇಶಗಳಲ್ಲಿ ಅಂತರ್ಜಾಲದ ಬಳಕೆಗೂ ಸೌಲಭ್ಯ ಕಲ್ಪಿಸಿರುವ ಹಿನ್ನೆಲೆಯಲ್ಲಿ ಗ್ರಾಮೀಣ ಸಾಮಾಜಿಕ ಸಂರಕ್ಷಣೆ ಮತ್ತು ಆರ್ಥಿಕತೆಯು ಬಾಹ್ಯ ಜಗತ್ತಿನೊಂದಿಗೆ ಸಂಪರ್ಕ ಕಲ್ಪಿಸಲು ಸಾಧ್ಯವಾಗುತ್ತಿದೆ. ಇದು ಪ್ರದೇಶಗಳ ನಡುವಿನ ಅಂತರ್ ರಾಜ್ಯಗಳ ನಡುವಿನ ಸಂಪರ್ಕ ಸಂಬಂಧಗಳನ್ನು ಸಾಧಿಸಿಕೊಟ್ಟಿದ್ದು, ಸಾಮಾಜಿಕ ಚಲನೆಯ ಸ್ವರೂಪವೇ ಬದಲಾಗುವಂತೆ ಮಾಡಿವೆ. ಕೌಶಲ್ಯ ಮತ್ತು ಕೌಶಲ್ಯಯುಕ್ತ ಹಾಗೂ ಕೌಶಲ್ಯ ರಹಿತ ಸಮೀಕರಣ ಸಾಮಾಜಿಕ ಚಲನೆಗೆ ಇದು ಸಹಾಯಕವಾಗಿದ್ದು, ಇದು ಪ್ರಾದೇಶಿಕ ಹಾಗೂ ಅಂತರ್ ರಾಜ್ಯ ಅಸಮಾನತೆಗಳನ್ನು ಹೆಚ್ಚಿಸಲು ಕೂಡ ಕಾರಣವಾಗಿರುವುದು.

**ಜಾಗತೀಕರಣದಿಂದ ಸಾಮಾಜಿಕ ನ್ಯಾಯದ ಮೇಲೆ ಸವಾಲು**

ಜಾಗತೀಕರಣವು ದುಷ್ಪರಿಣಾಮಗಳಿಗೆ ಕಾರಣ ವಾಗುವಂತಹ ಸಂಘರ್ಷಗಳಿಗೆ ಅವಕಾಶಮಾಡಿದೆ ಎಂಬ ವಾಸ್ತವಿಕತೆಯಾಧಾರಿತ ಆಪಾದನೆಯೂ ಇದೆ. ಈ ಆಪಾದನೆಗೆ ಜಾಗತೀಕರಣವನ್ನು ಸಮಾಜದ ಬಡತನ ಅಥವಾ ಬಡವರ್ಗಗಳ ವಂಚಿತತೆ ದುರ್ಬಲ ವರ್ಗಗಳ ಶೋಷಣೆಯಂತಹ ಪರಿಸ್ಥಿತಿಯೊಂದಿಗೆ ಸರಿಯಾಗಿ ಹೊಂದಿಕೆ ಮಾಡದೆ ಇದ್ದಿದ್ದೇ ಕಾರಣ ಎನ್ನಬಹುದು.

ಜಾಗತೀಕರಣ ಅದರ ಎಲ್ಲಾ ಆಕರ್ಷಣೆ ಹಾಗೂ ಆರ್ಥಿಕ ಲಾಭಗಳ ಹೊರತಾಗಿಯೂ ಸಾಮಾಜಿಕ ನ್ಯಾಯದ ಸ್ಥಾಪನೆಗೊಂದು ಸವಾಲಾಗುವುದು ನಿಶ್ಚಿತವೆಂದೆ ಕಾಣಬಹುದು. ಭಾರತವನ್ನು ಒಳಗೊಂಡಂತೆ ಜಗತ್ತಿನ ಎಲ್ಲಾ ಅಭಿವೃದ್ಧಿಶೀಲ ದೇಶಗಳಲ್ಲಿ ಸಾಮಾಜಿಕ ನ್ಯಾಯದ ಸ್ಥಾಪನೆಗೆ ಅಲ್ಲಿನ ಸರಕಾರಗಳು ವಿಶೇಷವಾದ ಹಾಗೂ ಉದ್ದೇಶಪೂರ್ವಕವಾದ ತುರ್ತು ಕ್ರಮಗಳನ್ನು ತೆಗೆದುಕೊಳ್ಳುವುದು ಅಗತ್ಯ ಹಾಗೂ ಅನಿವಾರ್ಯ ಎಂದು ತಿಳಿಸುವುದು. ಜಾಗತೀಕರಣದ ಸ್ವರೂಪವನ್ನು ಗಮನಿಸುವುದಾದರೆ ಅದು ಹೆಚ್ಚಾಗಿ ಉಳ್ಳವರ ಪರವಾಗಿಯೇ ಇರುವುದು ಗಮನಕ್ಕೆ ಬರುತ್ತದೆ. ದೊಡ್ಡ ಮೀನು ಸಣ್ಣ ಮೀನುಗಳನ್ನು ನುಂಗುವ ಮತ್ಸ್ಯ ನ್ಯಾಯದಂತೆ ಜಾಗತೀಕರಣದ ಹೆಸರಿನಲ್ಲಿ ಆರ್ಥಿಕವಾಗಿ ಮುಂದಿರುವ ದೇಶಗಳ ಪ್ರಾಬಲ್ಯ ಮೆರೆಯುವುದು ನಿಶ್ಚಿತ. ದಿನದಿಂದ ದಿನಕ್ಕೆ ಆರ್ಥಿಕವಾಗಿ ಕುಸಿಯುತಿರುವ ಈ ಸನ್ನಿವೇಶದಲ್ಲಿ ಈ ಸವಾಲುಗಳು ಮಿಕ್ಕುಳಿದ ಸಮೂಹಗಳಿಗೆ ಸಮಾನವಾಗಿ ಬದುಕುವಂತಾಗಬೇಕಾದರೆ ಅವುಗಳಿಗೆ ಸಾಮಾಜಿಕ ನ್ಯಾಯದ ಭರವಸೆ ಬೇಕು. ಇದರ ಕುರಿತಂತೆ ಇನ್ನೂ ಒಂದು ಮಾತನ್ನು ಇಲ್ಲಿ ಒತ್ತಿ ಹೇಳಬಹುದು, ಏನಂದರೆ ಈ ಸಂದರ್ಭದಲ್ಲಿ ಸಾಮಾಜಿಕ ನ್ಯಾಯದ ವಿಷಯದಲ್ಲಿಯೂ ಸಂಪೂರ್ಣ ಸಾಮಾಜಿಕ ನ್ಯಾಯ ಎಂಬ ವ್ಯತ್ಯಾಸವನ್ನು ಕಲ್ಪಿಸಬಹುದಾಗಿದೆ. ಯಾವುದೇ ಸಮಾಜದಲ್ಲಿಯಾದರೂ ಕೂಡ ಎಷ್ಟೇ ಪ್ರಯತ್ನಿಸಿದರೂ ಹಾಗೂ ಯಾವುದೇ ಕಾನೂನು ಶಾಸನಗಳನ್ನು ತಂದರೂ ಸಂಪೂರ್ಣ ಸಾಮಾಜಿಕ ನ್ಯಾಯ ಸ್ಥಾಪನೆ ಅಸಾಧ್ಯ ಏಕೆಂದರೆ ಹುಟ್ಟುವಾಗಲೇ ಜೊತೆಗೆ ಬಂದಿರುವ ಅಸಮಾನತೆಗಳನ್ನು ಎಲ್ಲಿಯವರೆಗೆ ನಮಗೆ ತೊಡೆದು ಹಾಕಲು

ಸಾಧ್ಯವಿಲ್ಲವೂ ಅಲ್ಲಿಯವರೆಗೆ ಸಂಪೂರ್ಣ ಸಾಮಾಜಿಕ ನ್ಯಾಯ ಸ್ಥಾಪನೆಯ ಕುರಿತು ನಮ್ಮ ಪ್ರಯತ್ನ ಕೇವಲ ಕಾನೂನಿನ ಮಾತಾಗಿಯೇ ಉಳಿದುಬಿಡುತ್ತದೆ. ಏಕೆಂದರೆ ಅವಕಾಶಗಳ ಸಮಾನತೆಯನ್ನು ಒಂದಾಗಿಸಿ ಸಾಪೇಕ್ಷ ಸಾಮಾಜಿಕ ನ್ಯಾಯದ ಭರವಸೆಯನ್ನು ನೀಡಲು ಮಾತ್ರ ನಮಗೆ ಸಾಧ್ಯವಾಗುವುದು. ಆದರೆ ಸಾಪೇಕ್ಷ ಸಾಮಾಜಿಕ ನ್ಯಾಯದ ಸ್ಥಾಪನೆಗಾಗಿ ಪೂರಕ ಪ್ರಯತ್ನಗಳಂತೂ ತೀರ ಅವಶ್ಯಕವಾಗಿದ್ದು, ಅವುಗಳನ್ನು ನಾವು ಕೈಗೊಳ್ಳಬೇಕಾಗಿದೆ.

**ಸಾಮಾಜಿಕ ನ್ಯಾಯಕ್ಕೆ ಪೂರಕವಾಗಿರುವ ಅಂಶಗಳು**

- ಮೀಸಲಾತಿಯ ಲಾಭ ಪಡೆದು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅತ್ಯಂತ ಎತ್ತರಕ್ಕೆ ಏರಿದವರು ಸಂತೋಷದಿಂದಲೇ ಅದನ್ನು ಬಿಟ್ಟುಕೊಟ್ಟು ತನ್ನ ಮಕ್ಕಳು ಮೊಮ್ಮಕ್ಕಳು ಮುಕ್ತ ಸ್ಪರ್ಧೆಯನ್ನು ಎದುರಿಸಲು ಸಜ್ಜುಗೊಳಿಸಬೇಕು.
- ಮೀಸಲಾತಿ ನಿಯಮದಲ್ಲಿ ತೊಂದರೆಗಳನ್ನು ನಿವಾರಿಸಿ ಅದು ಯೋಗ್ಯ ಅರ್ಹ ವ್ಯಕ್ತಿಗಳಿಗೆ ದೊರಕಬೇಕು. ಆರ್ಥಿಕವಾಗಿ ಮುಂದುವರಿದವರಿಂದ ಅದರ ದುರ್ಬಳಕೆಯಾಗುವುದು ನಿಲ್ಲಿಸಬೇಕು.
- ಮೀಸಲಾತಿ ಲಾಭ ಪಡೆದು ಮೇಲೆ ಬಂದವರು ಒಂದು ಸಂಘಟಿತ ಸಮೂಹವಾಗಿದ್ದುಕೊಂಡು ತಾವು ಸದಸ್ಯರಾಗಿರುವ ಸಮೂಹದ ಹಿಂದುಳಿದ ಮಂದಿಯನ್ನು ಮೇಲೆತ್ತಲು, ಜಾಗೃತಿ ಮೂಡಿಸಬೇಕು.
- ಖಾಸಗಿ ಕ್ಷೇತ್ರದಲ್ಲಿ ಮೀಸಲಾತಿಯನ್ನು ವಿಸ್ತರಿಬೇಕು. ಸಮಾನವಾಗಿ ಬಡವರಲ್ಲ ಅಥವಾ ನಿರ್ಗತಿಕರಲ್ಲದ ಮಂದಿ ಈ ಸಮೂಹಗಳಿಗೆ ಸೇರಿದವರಲ್ಲಿ ಬಡವರಲ್ಲಿ ಬಡವರು ಹಾಗೂ ಗತಿಯಿಲ್ಲದ ನಿರ್ಗತಿಕರು ತಾವಾಗಿಯೇ ಏನೂ ಮಾಡಲಾರದ ಸ್ಥಿತಿಯಲ್ಲಿರುವವರು ಇಂತಹವರುಗಳನ್ನು ಸರಿಯಾಗಿ ಗುರುತಿಸಿ ಅವರಿಗೆ ಸರ್ಕಾರದ ನೆರವು ಪ್ರಥಮ ಆದ್ಯತೆಯ ನೆಲೆಯಲ್ಲಿ ಸಿಗುವಂತೆ ಮಾಡಬೇಕು.
- ಸರ್ಕಾರದ ಯಾವುದೇ ಹೊಸ ನೀತಿ ಧೋರಣೆ ಅಥವಾ ಅಭಿವೃದ್ಧಿಯಾತ್ಮಕ ಕಾರ್ಯಕ್ರಮವನ್ನು ಘೋಷಿಸುವಾಗ ಹಾಗೂ ಜಾರಿಗೊಳಿಸುವಾಗ ಅವು ಅಂಚಿನ ಸಮೂಹಗಳ ಅಗತ್ಯತೆಯ ದೃಷ್ಟಿಯಿಂದ ಹಾಗೂ ಸಾಮಾಜಿಕ ನ್ಯಾಯದ ದೃಷ್ಟಿಯನ್ನು ಹೊಂದಿರುವಂತೆ ನೋಡಿಕೊಳ್ಳುವುದು.
- ಸಮಾಜದ ಸಂಪನ್ಮೂಲಗಳನ್ನು ಅನುಭವಿಸುವ ಅವಕಾಶ ಸಮಾಜದ ಎಲ್ಲಾ ಜನ ವರ್ಗಗಳಿಗೂ ಲಭಿಸುವಂತಾಗಬೇಕು ಎಂಬ ಜನಜಾಗೃತಿ ನಿರ್ಮಾಣದ ಪ್ರಯತ್ನ ನಡೆಯಬೇಕು. ಈ ದಿಕ್ಕಿನಲ್ಲಿ ಶ್ರೀಮಂತರು ಹಾಗೂ ಖಾಸಗಿ ಉದ್ಯಮಿಗಳು ಶ್ರೀಮಂತ ಸಂಘ–ಸಂಸ್ಥೆಗಳು ಕ್ರಿಯಾಶೀಲ ಪಾತ್ರ ವಹಿಸಬೇಕು.
- ಸಾರ್ವಜನಿಕ ಹಾಗೂ ಖಾಸಗಿ ಕ್ಷೇತ್ರದ ಉದ್ಯಮಿಗಳು ತಮ್ಮ ಲಾಭದ ಒಂದು ಭಾಗವನ್ನು ಕಾರ್ಪೊರೇಟ್ ಸಾಮಾಜಿಕ ಹೊಣೆಗಾರಿಕೆಯ ಹೆಸರಿನಲ್ಲಿ ಅಂಚಿನ ಸಮೂಹಗಳ ಉದ್ದಾರಕ್ಕಾಗಿ ಪ್ರಾಮಾಣಿಕವಾಗಿ ಬಳಸುವುದು ಸೂಕ್ತ.
- ಸಾಮಾಜಿಕ ನ್ಯಾಯ ನೀಡಿಕೆಯ ಜೊತೆಗೆ ಅದರ ಗಳಿಕೆಗೆ ಪ್ರಾಮುಖ್ಯತೆ ಬರಬೇಕು. ಅಂದರೆ ಅದನ್ನು ಪಡೆದು ಅದರಲ್ಲಿ ಫಲಾನುಭವಿಗಳಾಗಲು ಇಚ್ಚಿಸುವವರು ಅದರ ಗಳಿಕೆಗಾಗಿ ವ್ಯಕ್ತಿ ಮಟ್ಟದ ಸಂಪೂರ್ಣ ಪರಿಶ್ರಮ ಹಾಕಬೇಕು.

**ಉಪಸಂಹಾರ**

ಜಾಗತೀಕರಣದಿಂದ ಅನುಕೂಲವಾಗಿರುವಂತೆ ಅನಾನುಕೂಲಗಳು ಇವೆ. ಸ್ವಾತಂತ್ರ್ಯ ನಂತರದಲ್ಲಿ ಭಾರತವು ಅತ್ಯಂತ ಜಾಗರೂಕತೆಯಿಂದ ಹಾಗೂ ಜವಾಬ್ದಾರಿಯಿಂದ ತನ್ನದೇ ಆದ ಪ್ರಜಾಸತ್ತಾತ್ಮಕ ವಿಧಿ ವಿಧಾನಗಳ ಹಾಗೂ ಸಾಂಸ್ಥಿಕ ವ್ಯವಸ್ಥೆಗಳ ಮೂಲಕ ಜನ ಸಮುದಾಯಗಳ ನಡುವಣ ಅಸಮಾನತೆಗಳನ್ನು ಕಡಿಮೆಗೊಳಿಸುವ ಪ್ರಯತ್ನ ನಡೆಸುತ್ತಾ ಬಂದಿದೆ. ಜಾಗತೀಕರಣ ಅದು ಎಷ್ಟರಮಟ್ಟಿಗೆ ಹೊಸ ಅಸಮಾನತೆಗಳನ್ನು ರೂಪಿಸುವುದು, ಅಥವಾ ಅಸಮಾನತೆಗಳ ಬಗೆಗಿನ ಪ್ರಜ್ಞೆಯನ್ನು ಇನ್ನಷ್ಟು ತೀಕ್ಷ್ಣ ಗೊಳಿಸುವುದು, ಅಷ್ಟರಮಟ್ಟಿಗೆ ಅದರೊಳಗಡೆ ಸಾಮಾಜಿಕ, ಸಾಂಸ್ಕೃತಿಕ ಸಂಘರ್ಷಗಳನ್ನು ಸೃಷ್ಟಿಸುವ ಬೀಜಗಳು ಹುದಗಿಕೊಂಡಿರುತ್ತವೆ ಎನ್ನಬಹುದು.

**ಪರಾಮರ್ಶನ ಗ್ರಂಥಗಳು**


- ಗುರುಲಿಂಗಯ್ಯ ಎಂ. (2016). *ಅಂಚಿನ ಗುಂಪುಗಳ ಸಮಾಜಶಾಸ್ತ್ರ.* ದೀವಿತ್ ಪ್ರಕಾಶನ.
- ಕೃಷ್ಣಮೂರ್ತಿ ಹೆಚ್.ಆರ್. (2012). ಭಾರತದ ಆರ್ಥಿಕ ವ್ಯವಸ್ಥೆ. ಸ್ವಪ್ನ ಪಬ್ಲಿಕೇಶನ್.
- ಶಂಕರ್ ರಾವ್ ಚ.ನ. (2022). *ಸಮಾಜ ಶಾಸ್ತ್ರ ದರ್ಶನ.* ಭಾಗ 1, 2 ಹಾಗೂ 3, ಜೈ ಭಾರತ್ ಪ್ರಕಾಶನ
- ಶಂಕರ್ ರಾವ್ ಚ.ನ. (2022). ಭಾರತೀಯ ಸಮಾಜದ ನಿರಂತರತೆ ಮತ್ತು ಪರಿವರ್ತನೆ. ಜೈ ಭಾರತ್ ಪ್ರಕಾಶನ.
- ಸುಧಾ ಗೋಪಿನಾಥ್. (2006). *ಪಾಶ್ಚಾತ್ಯ ತಾತ್ವಿಕ ಚಿಂತನೆ ಭಾಗ–1.* ಪ್ರಸಾರಾಂಗ, ಬೆಂಗಳರು ವಿಶ್ವವಿದ್ಯಾಲಯ.
- Ambros, M. (2012). *The Sociology of Globalization: History, Causes and Consequences*. GRIN Verlag.
- Ferguson, I., Lavalette, M., & Whitmore, E. (2004). *Globalisation, global justice and social work*. http://ci.nii.ac.jp/ncid/BA71084649
- Karner, C., & Hofäcker, D. (2023). *Research Handbook on the Sociology of Globalization: 0*. Edward Elgar Publishing.

ಸೃಜನಿ

**SRUJANI: Indian Journal of Innovative Research and Development (SIJIRD)**
Volume-3 Issue 2, May-June 2024, Pp. 91-98
Bi-Monthly, Peer-Reviewed, Open Access, Indexed Journal

**I S S N: 2583-3510**
**SIRDF JOURNALS**
editor@srujani.in
www.srujani.in

# ಬೌದ್ಧ ಧರ್ಮಕ್ಕೆ ಮತಾಂತರಗೊಂಡವರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ (ವಿಶೇಷವಾಗಿ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ)

**ಡಾ.ಸುರೇಶ.ಸಿ**
ಸಹ ಪ್ರಾಧ್ಯಾಪಕರು, ಸ್ನಾತಕೋತ್ತರ ಸಮಾಜಶಾಸ್ತ್ರ ಅಧ್ಯಯನ ವಿಭಾಗ, ಸರ್ಕಾರಿ ಕಲಾ, ವಾಣಿಜ್ಯ ಮತ್ತು ಸ್ನಾತಕೋತ್ತರ ಕಾಲೇಜು – ಸ್ವಾಯತ್ತ, ಹಾಸನ.

**Abstract:**
*ನವ ಬೌದ್ಧ ಚಳುವಳಿಯನ್ನು 'ದಲಿತರಿಗಾಗಿ ಅಂಬೇಡ್ಕರ್ ಬೌದ್ಧ ಚಳುವಳಿ' ಅಥವಾ 'ಆಧುನಿಕ ಬೌದ್ಧ ಚಳುವಳಿ' ಎಂದು ಸಹ ಕರೆಯಲಾಗುತ್ತದೆ. ಅಂಬೇಡ್ಕರ್‌ರವರು ಭಾರತದಲ್ಲಿ ಪ್ರಾರಂಭಿಸಿದ ದಲಿತರ ಧಾರ್ಮಿಕ, ಸಾಮಾಜಿಕ, ರಾಜಕೀಯ ಚಳುವಳಿಯಾಗಿದೆ. ಇದು ಬೌದ್ಧ ಧರ್ಮವನ್ನು ಆಮೂಲಾಗ್ರವಾಗಿ ಮರು ವ್ಯಾಖ್ಯಾನಿಸಿತು ಮತ್ತು 'ನವಯಾನ' ಎಂಬ ಬೌದ್ಧ ಧರ್ಮದ ಹೊಸ ಶಾಖೆಯನ್ನು ರಚಿಸಿತು. ಬೌದ್ಧ ಧರ್ಮವು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತೊಡಗಿಸಿಕೊಂಡಿರುವ ರೂಪವಾಗಲು ಪ್ರಯತ್ನಿಸಿದೆ. 1956ರಲ್ಲಿ ನಾಗಪುರದ ದೀಕ್ಷಾಭೂಮಿಯಲ್ಲಿ ಅಂಬೇಡ್ಕರ್ ತಮ್ಮ ಲಕ್ಷಾಂತರ ಅನುಯಾಹಿಗಳೊಂದಿಗೆ ಮತಾಂತರಗೊಂಡಾಗ ದಲಿತರಿಗಾಗಿ ಬೌದ್ಧ ಚಳುವಳಿಯನ್ನು ಪ್ರಾರಂಭಿಸಿದರು. ಇದು ಹಿಂದೂ ಧರ್ಮವನ್ನು ತಿರಸ್ಕರಿಸಿತು, ಭಾರತದಲ್ಲಿನ ಜಾತಿ ವ್ಯವಸ್ಥೆಗೆ ಸವಾಲು ಮಾಡಿತು ಮತ್ತು ದಲಿತ ಸಮುದಾಯದ ಹಕ್ಕುಗಳನ್ನು ಉತ್ತೇಜಿಸಿತು. ಈ ಆಂದೋಲನವು ಬೌದ್ಧ ಧರ್ಮದ ಮಹಾಯಾನ ಮತ್ತು ವಜ್ರಯಾನ ಸಂಪ್ರದಾಯಗಳ ಬೋಧನೆಗಳನ್ನು ತಿರಸ್ಕರಿಸಿತು, ಆದಾಗ್ಯೂ ಸಾಂಪ್ರದಾಯಿಕೇತರವಾದ ಮೌಲ್ಯಗಳನ್ನು ಉತ್ತೇಜಿಸಿತು ಮತ್ತು ಅಂಬೇಡ್ಕರ್ ಕಲಿಸಿದಂತೆ ತೊಡಗಿಸಿಕೊಂಡಿರುವ ಬೌದ್ಧ ಧರ್ಮದ ಹೊಸ ರೂಪವನ್ನು ಅನುಸರಿಸಲು ಪ್ರತಿಜ್ಞೆ ಮಾಡಿತು.*

**Keywords:** *ಹಿಂದೂ ಧರ್ಮ, ಅಸ್ಪೃಶ್ಯತೆ, ನವಯಾನ, ಬೌದ್ಧ ಧಮ್ಮ, ಡಾ.ಬಿ.ಆರ್.ಅಂಬೇಡ್ಕರ್.*

## ಪೀಠಿಕೆ

ಬೌದ್ಧ ದರ್ಮವು ಪ್ರಾಚೀನ ಭಾರತದಲ್ಲಿ ಹುಟ್ಟಿಕೊಂಡ ಪ್ರಮುಖವ ಧರ್ಮವಾಗಿದೆ. ಅಶೋಕನು ಬೌದ್ಧ ಧರ್ಮವನ್ನು ಅಳವಡಿಸಿಕೊಂಡ ನಂತರ ವ್ಯಾಪಕವಾಗಿ ಬೆಳೆಯಿತು. 2ನೇ ಶತಮಾನದ ಹೊತ್ತಿಗೆ ಬೌದ್ಧ ಧರ್ಮವು ಭಾರತವಲ್ಲದೆ ಮಧ್ಯ ಏಷ್ಯಾ, ಪೂರ್ವ ಏಷ್ಯಾ ಮತ್ತು ಆಗ್ನೇಯ ಏಷ್ಯಾದ ಭಾಗಗಳಿಗೆ ವಿಸ್ತರಿಸಿತು. ಮಧ್ಯಯುಗದಲ್ಲಿ ಬೌದ್ಧ ಧರ್ಮವು ಭಾರತದಲ್ಲಿ ನಿಧಾನವಾಗಿ ಅವನತಿ ಹೊಂದಿತು, ಇಸ್ಲಾಂ ಧರ್ಮವು ರಾಜ್ಯ ಧರ್ಮವಾಗಿ ಮಾರ್ಪಟ್ಟಾಗ ಅದು ಪರ್ಷಿಯಾ ಮತ್ತು ಮಧ್ಯ ಏಷ್ಯಾದಿಂದ ಕಣ್ಮರೆಯಾಯಿತು. ರಾಂಡಾಲ್ ಕಾಲಿನ್ಸ್ ಪ್ರಕಾರ ಬೌದ್ಧ ಧರ್ಮವು 12ನೇ ಶತಮಾನದ ವೇಳೆಗೆ ಭಾರತದಲ್ಲಿ ಅವನತಿ ಹೊಂದಿತ್ತು, ಆದರೆ ಮುಸ್ಲಿಂ ಆಕ್ರಮಣಕಾರರ ಲೂಟಿಯಿಂದ ಅದು ಭಾರತದಲ್ಲಿ ಬಹುತೇಕ ಅಳಿವಿನಂಚಿನಲ್ಲಿತ್ತು. 13ನೇ ಶತಮಾನದಲ್ಲಿ ಕ್ರೇಗ್ ಲೊಕರ್ಡ್‌ರವರು ಭಾರತದಲ್ಲಿ

**Please cite this article as:** ಸುರೇಶ, ಸಿ. (2024). ಬೌದ್ಧ ಧರ್ಮಕ್ಕೆ ಮತಾಂತರಗೊಂಡವರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ (ವಿಶೇಷವಾಗಿ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ). *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 91–98

ಬೌದ್ಧ ಸನ್ಯಾಸಿಗಳು ಇಸ್ಲಾಮಿಕ್ ಕಿರುಕುಳದಿಂದ ತಪ್ಪಿಸಿಕೊಳ್ಳಲು ಟಿಬೆಟ್‌ಗೆ ಓಡಿಹೋದರು ಎಂದು ಹೇಳಿದರೆ, ಪೀಟರ್ ಹಾರ್ವೆ ಅವರು ಪಶ್ಚಿಮ ಭಾರತದಲ್ಲಿನ ಸನ್ಯಾಸಿಗಳು ದಕ್ಷಿಣ ಭಾರತದ ಹಿಂದೂ ರಾಜ್ಯಗಳಿಗೆ ತೆರಳುವ ಮೂಲಕ ಕಿರುಕುಳದಿಂದ ಪಾರಾಗಿದ್ದಾರೆ ಎಂದು ಹೇಳುತ್ತಾರೆ.

ಭಾರತದಲ್ಲಿ ಬೌದ್ಧ ಧರ್ಮವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನಗಳು 19ನೇ ಶತಮಾನದಲ್ಲಿ ಪ್ರಾರಂಭವಾಯಿತು. ಶ್ರೀಲಂಕಾದ ಬೌದ್ಧ ನಾಯಕ ಅನಾಗರಿಕ ಧರ್ಮಪಾಲ ಅವರು ಮಹಾಬೋಧಿ ಸೊಸೈಟಿಯನ್ನು ಸ್ಥಾಪಿಸಿದರು. ಭಗವಾನ್ ದಾಸ್ ಪ್ರಕಾರ ಮಹಾಬೋಧಿ ಸೊಸೈಟಿಯು ದಲಿತ ಚಳುವಳಿಯಾಗಿರಲಿಲ್ಲ, ಏಕೆಂದರೆ ಅದು ಮುಖ್ಯವಾಗಿ ಮೇಲ್ಜಾತಿ ಹಿಂದೂಗಳನ್ನು ಬೌದ್ಧ ಧರ್ಮಕ್ಕೆ ಆಕರ್ಷಿಸಿತು. ಎರಡು ಆದಿ ಧರ್ಮ ಚಳುವಳಿಗಳು ಬೌದ್ಧ ಧರ್ಮದ ಪರವಾಗಿ ಹಿಂದೂ ಧರ್ಮವನ್ನು ತಿರಸ್ಕರಿಸಿದವು ಉತ್ತರ ಪ್ರದೇಶದಲ್ಲಿ ಸ್ವಾಮಿ ಅಚ್ಯುತಾನಂದ ಹರಿಹರ್ ಮತ್ತು ಪಂಜಾಬ್‌ನಲ್ಲಿ ಬಾಬು ಮಂಗು ರಾಮ್ ಅವರು ಪ್ರಾರಂಭಿಸಿದರು.

ಅಸ್ಪೃಶ್ಯ ಕುಟುಂಬದಲ್ಲಿ ಜನಿಸಿದ ಅಚ್ಯುತಾನಂದರು ಆರ್ಯ ಸಮಾಜ ಸುಧಾರಣಾ ಚಳುವಳಿಗೆ ಸೇರಿದರು ಮತ್ತು ಸುಮಾರು ಎಂಟು ವರ್ಷಗಳ ಕಾಲ (1905–1912) ಅಲ್ಲಿ ಕೆಲಸ ಮಾಡಿದರು. ಆರ್ಯ ಸಮಾಜವು ಅಸ್ಪೃಶ್ಯತೆಯನ್ನು ಸೂಕ್ಷ್ಮವಾದ ರೀತಿಯಲ್ಲಿ ಆಚರಿಸುತ್ತದೆ ಎಂದು ಅವರು ಭಾವಿಸಿ ಭಾರತೀಯ ಮಹಾಸಭಾ ಚಳುವಳಿಯನ್ನು ಪ್ರಾರಂಭಿಸಲು ಆರ್ಯ ಸಮಾಜವನ್ನು ತೊರೆದರು. ಅಚ್ಯುತಾನಂದರು ಆದಿ ಹಿಂದೂ ನಿಯತಕಾಲಿಕವನ್ನು ಪ್ರಕಟಿಸಿದರು, ಅದರಲ್ಲಿ ಅವರು ದಲಿತರನ್ನು ಭಾರತೀಯ ಮೂಲ ಧರ್ಮವಾದ ಬೌದ್ಧ ಧರ್ಮಕ್ಕೆ ಮರಳಲು ಕರೆ ನೀಡಿದರು. 1914 ರಲ್ಲಿ ಪ್ರಕಾಶ್‌ರವರು ಕಲ್ಕತ್ತಾದಲ್ಲಿ ಬೋಧಾನಂದ ಮಹಾಸ್ತವೀರ್ ಆಗಿ ದೀಕ್ಷೆ ಪಡೆದು ಲಕ್ನೋದಲ್ಲಿ ಬೌದ್ಧ ಧರ್ಮವನ್ನು ಬೋಧಿಸಿದರು. ಅವರು 1916 ರಲ್ಲಿ ಭಾರತೀಯ ಬುದ್ಧ ಸಮಿತಿ, 1928 ರಲ್ಲಿ ವಿಹಾರವನ್ನು ಸ್ಥಾಪಿಸಿದರು. ಇದೇ ಅವಧಿಯಲ್ಲಿ 1898 ರಲ್ಲಿ ಪಂಡಿತ್ ಅಯೋಥಿ ಥಾಸ್ ತಮಿಳುನಾಡಿನಲ್ಲಿ ಶಾಕ್ಯ ಬೌದ್ಧ ಸಮಾಜವನ್ನು ಸ್ಥಾಪಿಸಿದರು ಇದನ್ನು ಇಂಡಿಯನ್ ಬೌದ್ಧ ಅಸೋಸಿಯೇಷನ್ ಎಂದೂ ಕರೆಯುತ್ತಾರೆ. ಥಾಸ್ ಅವರ ಪ್ರಯತ್ನಗಳು 1950ರ ದಶಕವರೆಗೆ ದಕ್ಷಿಣ ಭಾರತದಲ್ಲಿ ತಮಿಳು ದಲಿತರ ನಡುವೆ ವಿಶಾಲವಾದ ಚಳುವಳಿಯ ಸೃಷ್ಟಿಗೆ ಕಾರಣವಾಯಿತು. ಭಾರತೀಯ ಬೌದ್ಧ ಸಂಘದ ಮೊದಲ ಅಧ್ಯಕ್ಷ ಪಾಲ್ ಕ್ಯಾರಸ್. ಅಂಬೇಡ್ಕರ್ ಚಳುವಳಿಯಂತಲ್ಲದೆ ಭಾರತೀಯ ಬೌದ್ಧ ಸಂಘವು ಶ್ರೀಲಂಕಾದಲ್ಲಿ ಸ್ಥಾಪಿಸಲಾದ ಥೇರವಾಡ ಬೌದ್ಧ ಧರ್ಮದ ಸಂಪ್ರದಾಯವನ್ನು ಅಳವಡಿಸಿಕೊಂಡಿತು.

ಅಂಬೇಡ್ಕರ್‌ರವರು ದಲಿತರು ಹಿಂದೂ ಧರ್ಮವನ್ನು ತೊರೆದು ಬೇರೆ ಧರ್ಮಕ್ಕೆ ಮತಾಂತರಗೊಳ್ಳಬೇಕು ಎಂದು ತೀರ್ಮಾನಿಸಿ 1935 ರಲ್ಲಿ ಹಿಂದೂ ಧರ್ಮವನ್ನು ತೊರೆಯುವ ಉದ್ದೇಶವನ್ನು ಘೋಷಿಸಿದರು. ನಂತರ ವಿವಿಧ ಧರ್ಮಗಳ ನಾಯಕರು ಅಂಬೇಡ್ಕರ್‌ರವರನ್ನು ಭೇಟಿ ಮಾಡಿದರು. ಅಂಬೇಡ್ಕರ್ ವಿವಿಧ ಧರ್ಮಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಕೊನೆಗೆ ಬೌದ್ಧ ಧರ್ಮವನ್ನು ಅಪ್ಪಿಕೊಳ್ಳಲು ಬಯಸಿದರು. ಆದಾಗ್ಯೂ ಅಂಬೇಡ್ಕರ್ ಮುಂದಿನ 20 ವರ್ಷಗಳ ಕಾಲ ಹಿಂದೂವಾಗಿ ಉಳಿದರು, ನಂತರ ಬೌದ್ಧ ಧರ್ಮವನ್ನು ಮರು ವ್ಯಾಖ್ಯಾನಿಸಿದರು ಮತ್ತು ಅವರ ಮರಣದ ಕೆಲವು ವಾರಗಳ ಮೊದಲು ನವ ಬೌದ್ಧ ಧರ್ಮ ಅಥವಾ ನವಯಾನವನ್ನು ಅಳವಡಿಸಿಕೊಂಡರು.

ಅಂಬೇಡ್ಕರ್ ರೂಪಿಸಿದ ನವಯಾನ ಬೌದ್ಧ ಧರ್ಮವು ಸಾಂಪ್ರದಾಯಿಕ ಬೌದ್ಧ ಆಚರಣೆಗಳು, ಕರ್ಮ, ಪುನರ್ಜನ್ಮ, ಧ್ಯಾನ, ನಿರ್ವಾಣಗಳಂತಹ ವಿಚಾರಗಳನ್ನು ತ್ಯಜಿಸುತ್ತದೆ. ಅಂಬೇಡ್ಕರ್ ಅವರ

ನವಯಾನ ಬೌದ್ಧ ಧರ್ಮವು ಬುದ್ಧನ ಧರ್ಮವನ್ನು ಹೋರಾಟ ಮತ್ತು ಸಾಮಾಜಿಕ ಸಮಾನತೆಯ ವಿಷಯದಲ್ಲಿ ಮರು ವ್ಯಾಖ್ಯಾನಿಸಿತು. ಅಂಬೇಡ್ಕರ್ ಅವರ ಪುಸ್ತಕ 'ಬುದ್ಧ ಮತ್ತು ಅವರ ಧಮ್ಮ'ವು ನವಯಾನ ಅಥವಾ ದಲಿತ ಬೌದ್ಧರ ಪವಿತ್ರ ಪುಸ್ತಕವಾಗಿದೆ. ಅಸ್ಪೃಶ್ಯರು ಸಮಾನತೆಯನ್ನು ಪಡೆಯಲು ಬೌದ್ಧ ಧರ್ಮವು ಏಕೈಕ ಮಾರ್ಗವೆಂದು ಪ್ರತಿಪಾದಿಸಿ ಅಕ್ಟೋಬರ್ 14, 1956 ರಂದು ನಾಗ್ಪುರದ ದೀಕ್ಷಾ ಭೂಮಿಯಲ್ಲಿ ಸಾರ್ವಜನಿಕವಾಗಿ ಮತಾಂತರಗೊಂಡರು. ಅದೇ ಸಮಾರಂಭದಲ್ಲಿ ಅವರ ಸುಮಾರು 3,65,000 ಅನುಯಾಯಿಗಳು ಬೌದ್ಧ ಧರ್ಮಕ್ಕೆ ಮತಾಂರಗೊಂಡರು. ಈ ಸಂದರ್ಭದಲ್ಲಿ ಅನೇಕ ಮೇಲ್ಜಾತಿ ಹಿಂದೂಗಳು ಕೂಡ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ನಾಗ್ಪುರದ ನಂತರ, 16 ಅಕ್ಟೋಬರ್ 1956 ರಂದು ಅಂಬೇಡ್ಕರ್ ಅವರು ಚಂದ್ರಾಪುರದಲ್ಲಿ 3,00,000 ಕ್ಕೂ ಹೆಚ್ಚು ಅನುಯಾಯಿಗಳಿಗೆ ಬೌದ್ಧ ಧರ್ಮವನ್ನು ಸೇರಿದರು. ಅಂಬೇಡ್ಕರ್ ಅವರ ಮತಾಂತರದಿಂದ ಪ್ರೇರಿತರಾಗಿ, ಮ್ಯಾನ್ಮಾರ್‌ನ 5000 ತಮಿಳರು ರಂಗೂನ್‌ನಲ್ಲಿ ಬೌದ್ಧ ಧರ್ಮವನ್ನು ಸ್ವೀಕರಿಸಿದರು. 28 ಅಕ್ಟೋಬರ್ 1956 ರಂದು ಬರ್ಮಾ ಒಕ್ಕೂಟದ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಚಾನ್ ಹ್ಟೂನ್ ಅವರ ನೇತೃತ್ವದಲ್ಲಿ ಮತಾಂತರ ಸಮಾರಂಭದಲ್ಲಿ ಮೇಧರಥಿ ಅವರ ಮುಖ್ಯ ಶಿಷ್ಯ ಭೋಜ್‌ದೇವ್ ಮುದಿತ್ ಮತ್ತು ಮಹಾಸ್ಥಿರ್ ಬೋಧಾನಂದರ ಶ್ರೀಲಂಕಾದ ಉತ್ತರಾಧಿಕಾರಿ ಭಂತೆ ಪ್ರಜ್ಞಾನಂದ್ ಉಪಸ್ಥಿತರಿದ್ದರು. ಅಂಬೇಡ್ಕರ್ ಅಸ್ತಿತ್ವದಲ್ಲಿರುವ ಬೌದ್ಧ ಧರ್ಮದ ಶಾಖೆಗಳಲ್ಲಿ (ಥೇರವಾದ, ಮಹಾಯಾನ ಮತ್ತು ವಜ್ರಯಾನ) ಸಿಕ್ಕಿಹಾಕಿಕೊಳ್ಳದಂತೆ ದಲಿತರನ್ನು ಕೇಳಿಕೊಂಡರು ಮತ್ತು ಅವರ ಆವೃತ್ತಿಯನ್ನು ನವಯಾನ ಅಥವಾ ನವ ಬೌದ್ಧ ಧರ್ಮ ಎಂದು ಕರೆದರು. ಭಾರತದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನಕಾರರಾದ ಅಂಬೇಡ್ಕರ್‌ಅವರು ತಮ್ಮ ಅನುಯಾಯಿಗಳಿಗೆ 22 ಬೌದ್ಧ ಪ್ರತಿಜ್ಞೆಗಳನ್ನು ಬೋಧಿಸಿದರು. ಈ ಪ್ರತಿಜ್ಞಾ ವಿಧಿಗಳು ಮಾನವ ಸಹಜ ಪ್ರವೃತ್ತಿಯನ್ನು ಪ್ರೇರೇಪಿಸುವ ಸಾಮಾಜಿಕ ಕ್ರಾಂತಿಯ ಮಾರ್ಗಸೂಚಿಗಳಾಗಿವೆ ಎಂದು ಅಂಬೇಡ್ಕರ್‌ವಾದಿ ಬೌದ್ಧರು ನಂಬುತ್ತಾರೆ. ಪ್ರಸ್ತುತ ಭಾರತದಲ್ಲಿ 2011ರ ಜನಗಣತಿಯ ಪ್ರಕಾರ 8.44 ಮಿಲಿಯನ್ ಬೌದ್ಧರಿದ್ದಾರೆ, ಅವರಲ್ಲಿ ಕನಿಷ್ಟ 6.5 ಮಿಲಿಯನ್ ಮರಾಠಿ ಬೌದ್ಧರು ಮಹಾರಾಷ್ಟ್ರದಲ್ಲಿ ಇದ್ದಾರೆ.

**ಅಧ್ಯಯನದ ಉದ್ದೇಶಗಳು**

- ಹಾಸನ ಜಿಲ್ಲೆಯಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಕುರಿತು ಅಧ್ಯಯನ ಮಾಡುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**ಅಧ್ಯಯನದ ಪ್ರಾಮುಖ್ಯತೆ**

- ಪ್ರಸ್ತುತ ಅಧ್ಯಯನವು ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ತಿಳಿಸುವುದರ ಜೊತೆಗೆ ಪ್ರಸ್ತುತ ಕೌಟುಂಬಿಕ ಬದಲಾವಣೆಯನ್ನು ಪರಿಶೀಲಿಸುತ್ತದೆ.

**ಅಧ್ಯಯನ ಕ್ಷೇತ್ರ**

ಪ್ರಸ್ತುತ ಅಧ್ಯಯನಕ್ಕೆ ಹಾಸನ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಸನ ಜಿಲ್ಲೆಯು ಕರ್ನಾಟಕದ 30 ಜಿಲ್ಲೆಗಳಲ್ಲಿ ಪ್ರಮುಖವಾದ ಜಿಲ್ಲೆಯಾಗಿದೆ. ಇಲ್ಲಿನ ಹವಾಗುಣ ಅರೆಮಲೆನಾಡಿನದ್ದಾಗಿದೆ ಹಾಗೂ ಹಾಸನವನ್ನು ಬಡವರ ಊಟಿ ಎಂದು ಸಹ ಕರೆಯುತ್ತಾರೆ. ಈ ಜಿಲ್ಲೆಯು ಹೇರಳವಾದ ಪ್ರಾಕೃತಿಕ ಸಂಪತ್ತನ್ನು ಹೊಂದಿದೆ. ಜಾಗತೀಕ ಮಟ್ಟದ ಪ್ರವಾಸಿ ತಾಣಗಳಾದ ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ದೊಡ್ಡಗದ್ದವಳ್ಳಿ, ಗೋರೂರು ಅಣೆಕಟ್ಟು, ಹಾಸನಾಂಬ ದೇವಸ್ಥಾನ ಇದೇ ಜಿಲ್ಲೆಯ ವ್ಯಾಪ್ತಿಯಲ್ಲಿವೆ. 2011 ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಒಟ್ಟು 1,776,421 ಜನರು ನೆಲೆಸಿದ್ದಾರೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ಮೂಲ ಧರ್ಮ**

ಜಗತ್ತಿನ ಪ್ರತಿಯೊಂದು ಪ್ರದೇಶಗಳಲ್ಲಿಯೂ ಧರ್ಮಗಳ ಆಧಾರದ ಮೇಲೆ ಮಾನವನ ಸಾಮಾಜಿಕ ಸ್ಥಿತಿ ನೆಲೆಗೊಂಡಿರುವುದನ್ನು ಕಾಣಬಹುದು. ಭಾರತದಲ್ಲಿಯೂ ಧರ್ಮ ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ಸೃಷ್ಟಿಮಾಡಿದೆ. ಭಾರತದಲ್ಲಿ ಹಿಂದೂ ಧರ್ಮವು ಪ್ರಮುಖವಾಗಿದ್ದರೂ ಇತರೆ ಧರ್ಮಗಳಾದ ಕ್ರೈಸ್ತ, ಜೈನ, ಬೌದ್ಧ, ಇಸ್ಲಾಂ, ಸಿಖ್, ಝೋರಾತೋಷ್ತ್ರ ಧರ್ಮಗಳು ಆಚರಣೆಯಲ್ಲಿರುವುದು ಆಯಾ ಕಾಲಘಟ್ಟಗಳಲ್ಲಿ ಕಂಡುಬಂದಿದೆ. ಒಂದು ಧರ್ಮದಲ್ಲಿ ಜನಿಸಿದವರು ಯಾವುದಾದರು ಒಂದು ಕಾರಣಕ್ಕೋಸ್ಕರ ಇನ್ನೊಂದು ಧರ್ಮದ ಪ್ರಭಾವಕ್ಕೆ ಮನಸೋತಿರುವುದು ಇದೆ. ಇಂತಹ ಸಂದರ್ಭಗಳನ್ನು ನೋಡಿದಾಗ ಭಾರತೀಯ ಸಮಾಜದ ತಳ ಹಂತದ ಸಮುದಾಯದಲ್ಲಿರುವ ಅನೇಕ ಜಾತಿಗಳ ಸದಸ್ಯರು ಅಧಿಕವಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿರುವುದು ಸ್ವಾತಂತ್ರ್ಯ ಪೂರ್ವದಿಂದಲೂ ಸಾಮಾನ್ಯವಾಗಿ ಕಂಡುಬಂದಿದೆ. ಹಾಗೆಯೇ ಬೌದ್ಧ ಧರ್ಮಕ್ಕೂ ಮತಾಂತರ ಹೊಂದಿದ್ದಾರೆ. ಅದರಲ್ಲಿಯೂ ಡಾ.ಬಿ.ಆರ್.ಅಂಬೇಡ್ಕರ್ ರವರು ಬೌದ್ಧ ಧರ್ಮವನ್ನು ಸ್ವೀಕಾರ ಮಾಡಿದ ನಂತರ ಸಹಸ್ರಾರು ಸಂಖ್ಯೆಯಲ್ಲಿ ಅಂಬೇಡ್ಕರ್ ಅಭಿಮಾನಿಗಳು ಮತಾಂತರಗೊಂಡಿದ್ದಾರೆ.

**ಕೊಷ್ಟಕ 01: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಧಾರ್ಮಿಕ ಹಿನ್ನೆಲೆ ವಿವರ**

| ಧರ್ಮ | ಆವೃತ್ತಿ | ಶೇಕಡವಾರು |
|---|---|---|
| ಹಿಂದೂ | 50 | 100% |
| ಕ್ರೈಸ್ತ | 00 | 00% |
| ಇಸ್ಲಾಂ | 00 | 00% |
| ಇತರೆ | 00 | 00% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ಧರ್ಮವನ್ನು ನೋಡಿದಾಗ ಪ್ರತಿವರ್ತಿಗಳೆಲ್ಲರು ಹಿಂದೂ ಧರ್ಮದ ಹಿನ್ನೆಲೆಯನ್ನು ಹೊಂದಿರುವವರಾಗಿದ್ದಾರೆ. ಇದನ್ನು ನೋಡಿದಾಗ ಭಾರತೀಯ ಸಮಾಜದಲ್ಲಿ ಹಿಂದೂ ಧರ್ಮದವರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿರುವುದು ತಿಳಿದುಬರುತ್ತದೆ.

ಭಾರತೀಯ ಸಮಾಜದಲ್ಲಿ ಹುಟ್ಟಿ ಬಂದಿರುವ ಪ್ರತಿಯೊಬ್ಬ ಮನುಷ್ಯರು ಸಾಮಾಜಿಕವಾಗಿ ಪ್ರತ್ಯೇಕ ವರ್ಗ, ಧರ್ಮ, ಪ್ರಾದೇಶಿಕತೆ, ಬುಡಕಟ್ಟು, ಲಿಂಗ, ಭಾಷೆ, ಜಾತಿ ಈ ರೀತಿಯಲ್ಲಿ ವ್ಯತ್ಯಾಸಕ್ಕೆ ಒಳಗಾಗಿ ವಿಶಿಷ್ಟತೆಯನ್ನು ಹೊಂದಿರುವವರಾಗಿದ್ದಾರೆ.

**ಕೊಷ್ಟಕ 02: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಜಾತಿಯ ವಿವರ**

| ಜಾತಿ | ಆವೃತ್ತಿ | ಶೇಕಡವಾರು |
|---|---|---|
| ಆದಿಕರ್ನಾಟಕ | 50 | 100% |
| ಆದಿ ದ್ರಾವಿಡ | 00 | 00% |
| ಭೋವಿ | 00 | 00% |
| ಲಂಬಾಣಿ | 00 | 00% |
| ಇತರೆ | 00 | 00% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ಜಾತಿಯನ್ನು ನೋಡಿದಾಗ ಪ್ರತಿವರ್ತಿಗಳೆಲ್ಲರು ಆದಿಕರ್ನಾಟಕ ಜಾತಿಯ ಹಿನ್ನೆಲೆಯನ್ನು ಹೊಂದಿರುವವರಾಗಿದ್ದಾರೆ. ಇತರೆ ಭಾಗಗಳಲ್ಲಿ ಬೇರೆ ಜಾತಿಯ ಜನರು ಇರಬಹುದು ಆದರೆ ನಾನು ಆಯ್ಕೆ ಮಾಡಿಕೊಂಡ ಪ್ರದೇಶದಲ್ಲಿ ನನಗೆ ಸಿಕ್ಕಿರುವ ಪ್ರತಿವರ್ತಿಗಳು ಆದಿಕರ್ನಾಟಕ ಜಾತಿಯವರು ಎನ್ನುವುದು ಅಧ್ಯಯನದಿಂದ ಕಂಡುಬಂದಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ವಯಸ್ಸು**

ವಯಸ್ಸು ವ್ಯಕ್ತಿಯ ನಿರ್ದಿಷ್ಟ ಕಾಲವನ್ನು ಸೂಚಿಸುವ ಅಂಶ. ವ್ಯಕ್ತಿಯು ಹುಟ್ಟಿದಾಗಿನಿಂದ

ಬೆಳೆದುಬಂದ ಕಾಲವನ್ನು ಸೂಚಿಸುವುದು ವಯಸ್ಸು. ಸಮಾಜದಲ್ಲಿ ವ್ಯಕ್ತಿಯ ಪ್ರತಿಯೊಂದು ಕಾಲಘಟ್ಟವನ್ನು ವಯಸ್ಸಿನ ಆಧಾರದ ಮೇಲೆ ನಿರ್ದರಿಸಲಾಗುತ್ತದೆ. ಆಗಾಗಿ ವ್ಯಕ್ತಿಯ ಜೀವನದಲ್ಲಿ ವಯಸ್ಸಿನ ಪ್ರಾಮುಖ್ಯತೆ ಹೆಚ್ಚಾಗಿದೆ ಮತ್ತು ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರು ಯಾವ ಯಾವ ವಯಸ್ಸಿನವರು ಇದ್ದಾರೆ ಎನ್ನುವುದನ್ನು ತಿಳಿಸಲಾಗಿದೆ.

**ಕೊಷ್ಟಕ 03: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ವಯಸ್ಸಿನ ವಿವರ**

| ವಯಸ್ಸು | ಆವೃತ್ತಿ | ಶೇಕಡವಾರು |
|---|---|---|
| 20–30 | 15 | 30% |
| 31–40 | 15 | 30% |
| 41–50 | 11 | 22% |
| 51–60 | 09 | 18% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ವಯಸ್ಸನ್ನು ನೋಡಿದಾಗ 20–30 ವರ್ಷ ವಯಸ್ಸಿನವರು (15) 30% ಇದ್ದಾರೆ, 31–40 ವರ್ಷ ವಯಸ್ಸಿನವರು (15) 30% ಇದ್ದಾರೆ, 41–50 ವರ್ಷ ವಯಸ್ಸಿನವರು (11) 22% ಇದ್ದಾರೆ, 51–60 ವರ್ಷ ವಯಸ್ಸಿನವರು (09) 18% ಇರುವುದು ಅಧ್ಯಯನದಿಂದ ಕಂಡುಬಂದಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಲಿಂಗ**

ಮತಾಂತರ ಮನಸ್ಸಿನ, ಶೈಕ್ಷಣಿಕ, ಉದ್ಯೋಗ, ಸಾಮಾಜಿಕ ಸ್ಥಾನಮಾನ ಹಾಗೆಯೇ ಲಿಂಗವನ್ನು ಆದರಿಸಿದೆ. ಒಬ್ಬರ ಮನೋಭಾವಕ್ಕೂ ಮತ್ತೊಬ್ಬರ ಮನೋಭಾವನೆಗೂ ವ್ಯತ್ಯಾಸಗಳಿವೆ ಕೆಲವರಿಗೆ ಕೆಲವೊಂದು ಮಾಹಿತಿ ವ್ಯಕ್ತಿ ಭಕ್ತಿ ಧ್ಯಾನ ಹೀಗೆ ಹಲವು ಅಂಶಗಳು ಪ್ರಭಾವ ಬೀರುವುದರಿಂದ ಇಲ್ಲಿ ಪುರುಷರು ಮತ್ತು ಮಹಿಳೆಯರು ಇಬ್ಬರು ಸಹ ಮತಾಂತಗೊಳ್ಳುವಲ್ಲಿ ಪ್ರಭಾವಕ್ಕೆ ಒಳಗಾಗಿರುವುದು ಪ್ರಸ್ತುತ ಸಮಾಜದಲ್ಲಿ ಕಾಣಬಹುದಾಗಿದೆ.

**ಕೊಷ್ಟಕ 04: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಲಿಂಗದ ವಿವರ**

| ಲಿಂಗ | ಆವೃತ್ತಿ | ಶೇಕಡವಾರು |
|---|---|---|
| ಪುರುಷರು | 31 | 62% |
| ಮಹಿಳೆಯರು | 19 | 38% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ಲಿಂಗದ ವಿವರವನ್ನು ನೋಡಿದಾಗ ಪುರುಷರು ಶೇ(31)62% ರಷ್ಟು ಮತ್ತು ಮಹಿಳೆಯರು ಶೇ(19)38% ರಷ್ಟು ಇರುವುದು ಅಧ್ಯಯನದಿಂದ ಕಂಡುಬಂದಿದೆ ಇಲ್ಲಿ ಮತಾಂತರಗೊಂಡವರು ಪುರುಷರು ಮತ್ತು ಮಹಿಳೆಯರು ಇಬ್ಬರು ಇದ್ದಾರೆ ಇದರಲ್ಲಿ ಅವರ ಕುಟುಂಬ ವರ್ಗದವರು ಅಥವಾ ಸಂಬಂಧಿಕರು ಮತ್ತು ಡಾ.ಬಿ.ಆರ್.ಅಂಬೇಡ್ಕರ್‌ರವರ ತತ್ವ ಸಿದ್ಧಾಂತಗಳನ್ನು ಅನುಸರಿಸುತ್ತಿರುವವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವುದ ಕಾಣಬಹುದಾಗಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಶಿಕ್ಷಣ**

ಶಿಕ್ಷಣ ವ್ಯಕ್ತಿಯನ್ನು ಕತ್ತಲೆಯಿಂದ ಬೆಳಕಿನಡೆಗೆ ಕೊಂಡೊಯ್ಯುವ ಸಾಧನ. ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಶಿಕ್ಷಣವೂ ಒಂದಾಗಿದೆ. ವ್ಯಕ್ತಿಯ ವ್ಯಕ್ತಿತ್ವ ವಿಕಸನಕ್ಕೆ ಶಿಕ್ಷಣವು ಮುಖ್ಯವಾದುದು.

**ಕೊಷ್ಟಕ 05: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಶಿಕ್ಷಣದ ವಿವರ**

| ಶಿಕ್ಷಣ | ಆವೃತ್ತಿ | ಶೇಕಡವಾರು |
|---|---|---|
| ಪ್ರಾಥಮಿಕ | 02 | 04% |
| ಪ್ರೌಢ ಶಾಲೆ | 08 | 16% |
| ಪದವಿ ಪೂರ್ವ | 09 | 18% |
| ಡಿಪ್ಲೋಮ | 04 | 08% |
| ಪದವಿ | 11 | 22% |
| ಇಂಜಿನಿಯರಿಂಗ್ | 05 | 10% |
| ಸ್ನಾತಕೋತ್ತರ ಪದವಿ | 11 | 22% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಶಿಕ್ಷಣವನ್ನು ನೋಡಿದಾಗ ಪ್ರಾಥಮಿಕ ಶಿಕ್ಷಣ ಪಡೆದಿರುವವರು ಶೇ(02)04% ರಷ್ಟು, ಪ್ರೌಢ ಶಿಕ್ಷಣ ಪಡೆದಿರುವವರು ಶೇ(08)16% ರಷ್ಟು, ಪದವಿ ಪೂರ್ವ ಶಿಕ್ಷಣ ಪಡೆದಿರುವವರು ಶೇ(09)18% ರಷ್ಟು, ಡಿಪ್ಲೋಮ ಶಿಕ್ಷಣ ಪಡೆದಿರುವವರು ಶೇ(04)08% ರಷ್ಟು, ಪದವಿ ಶಿಕ್ಷಣ ಪಡೆದಿರುವವರು ಶೇ(11)22% ರಷ್ಟು, ಇಂಜಿನಿಯರಿಂಗ್ ಶಿಕ್ಷಣ ಪಡೆದಿರುವವರು ಶೇ(05)10% ರಷ್ಟು ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದಿರುವವರು ಶೇ(11)22% ರಷ್ಟು ಇರುವುದು ಅಧ್ಯಯನದಿಂದ ಕಂಡುಬಂದಿದೆ. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಶಿಕ್ಷಣದ ಸ್ಥಿತಿಯನ್ನು ನೋಡಿದಾಗ ಉನ್ನತ ಶಿಕ್ಷಣ ಪಡೆದವರು ಹೆಚ್ಚಿನ ಪ್ರಮಾಣದಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವುದನ್ನು ಕಾಣಬಹುದಾಗಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಜೊತೆ ನೆರೆಹೊರೆಯವರ ಮನೋಭಾವ**

ನೋಡುವವರ ನೋಟ ಕಣ್ಣಲ್ಲಿರುತ್ತದೆ. ನಾವು ಯೋಚಿಸಿದಾಗೆ ನಮ್ಮ ಮನಸ್ಸು ಓಡುತ್ತದೆ. ನಾವು ಇತರರನ್ನು ನೋಡುವ ದೃಷ್ಟಿಕೋನದಂತೆ ಇತರೆಯವರು ನಮ್ಮ ಕಣ್ಣಿಗೆ ಕಾಣುತ್ತಾರೆ.

**ಕೊಷ್ಟಕ 06: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ನೆರೆಹೊರೆಯವರ ಮನೋಭಾವದ ವಿವರ**

| ನೆರೆಹೊರೆಯವರ ಮನೊಭಾವ | ಆವೃತ್ತಿ | ಶೇಕಡವಾರು |
|---|---|---|
| ಉತ್ತಮವಾಗಿದೆ | 34 | 68% |
| ಸಾಧಾರಣವಾಗಿದೆ | 11 | 22% |
| ಉತ್ತಮವಾಗಿಲ್ಲ | 05 | 10% |
| **ಒಟ್ಟು** | **50** | **100%** |

ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ನೆರೆಹೊರೆಯವರು ಬೇರೆಬೇರೆ ವರ್ಗ, ಸಮುದಾಯ, ಸಮಾಜ, ಜಾತಿ, ಧರ್ಮದವರಾಗಿರುವವರು ಇದ್ದಾರೆ. ಇವರು ಮತಾಂತರಗೊಂಡಿರುವುದರಿಂದ ಕೆಲವರು ಒಪ್ಪಿಕೊಳ್ಳುವ ಮತ್ತು ಒಪ್ಪಿಕೊಳ್ಳದಿರುವ ಮನಸ್ಥಿತಿಗಳು ನಮ್ಮ ಸಮಾಜದಲ್ಲಿ ಇವೆ.

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ನೆರೆಹೊರೆಯವರ ಮನೋಭಾವದ ಬಗ್ಗೆ ಮಾಹಿತಿ ಸಂಗ್ರಹಿಸಿದಾಗ ಉತ್ತಮವಾಗಿದೆ ಎಂದು ಶೇ(34)68% ರಷ್ಟು, ಸಾಧಾರಣವಾಗಿದೆ ಎಂದು ಶೇ(11)22% ರಷ್ಟು ಹಾಗೂ ಉತ್ತಮವಾಗಿಲ್ಲ ಎಂದು ಶೇ(05)10% ರಷ್ಟು ತಿಳಿಸಿದ್ದಾರೆ. ಸೂಕ್ಷ್ಮವಾಗಿ ಅವಲೋಕಿಸಿದಾಗ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿರುವವರನ್ನುಸಮಾಜದಲ್ಲಿ ಉತ್ತಮವಾಗಿಯೇ ಕಾಣುತ್ತಿದ್ದಾರೆ ಎನ್ನುವುದು ತಿಳಿದುಬಂದಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಸ್ಥಾನಮಾನ**

ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರು ಅಧಿಕವಾಗಿ ಸಮಾಜದ ತಳ ಸಮುದಾಯದವರಾಗಿದ್ದಾರೆ. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವ ಮೇಲ್ವರ್ಗದವರನ್ನು ಹಾಗೂ ತಳಸಮುದಾಯದವರನ್ನು ಕಾಣುವ ಸ್ಥಾನಮಾನಕ್ಕೂ ವ್ಯತ್ಯಾಸ ಇರುವುದನ್ನು ಆರಂಭದಿಂದಲೂ ಕಾಣಬಹುದಾಗಿದೆ.

**ಕೊಷ್ಟಕ 06: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಸ್ಥಾನಮಾನದ ವಿವರ**

| ಸಾಮಾಜಿಕ ಸ್ಥಾನಮಾನ | ಆವೃತ್ತಿ | ಶೇಕಡವಾರು |
|---|---|---|
| ಉತ್ತಮವಾಗಿದೆ | 40 | 80% |
| ಸಾಧಾರಣವಾಗಿದೆ | 08 | 16% |
| ಉತ್ತಮವಾಗಿಲ್ಲ | 02 | 04% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಸ್ಥಾಮಮಾನವನ್ನು ನೋಡಿದಾಗ

ಉತ್ತಮವಾಗಿದೆ ಎಂದು ಶೇ(40)80% ರಷ್ಟು, ಸಾಧಾರಣವಾಗಿದೆ ಎಂದು ಶೇ(08)16% ರಷ್ಟು, ಉತ್ತಮವಾಗಿಲ್ಲ ಎಂದು ಶೇ(02)04% ರಷ್ಟು ಇರುವುದು ತಿಳಿದುಬಂದಿದೆ. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಸ್ಥಾನಮಾನ ಸಮಾಜದಲ್ಲಿ ಉತ್ತಮವಾಗಿದೆ ಎನ್ನುವವರು ಹೆಚ್ಚಾಗಿರುವುದು ಅಧ್ಯಯನದಿಂದ ಕಂಡುಬಂದಿದೆ.

**ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಮೀಸಲಾತಿ ಮತ್ತು ಕಾನೂನಿನ ಅರಿವು**

ಸಮಾಜದ ತಳಸಮುದಾಯದವರಿಗೆ ನಮ್ಮ ಸಂವಿಧಾನದ ಅಡಿಯಲ್ಲಿ ಸರ್ಕಾರ ಮೀಸಲಾತಿಯನ್ನು ನೀಡುತ್ತಿದ್ದು ಈ ಮೀಸಲಾತಿ ಮತಾಂತರ ಹೊಂದಿದವರಿಗೂ ಸಂವಿಧಾನ ನಿಯಮಾನುಸಾರ ನೀಡುತ್ತಿದೆ.

**ಕೊಷ್ಟಕ 07: ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಮೀಸಲಾತಿ ಮತ್ತು ಕಾನೂನಿನ ಅರಿವಿನ ವಿವರ**

| **ಮೀಸಲಾತಿ ಮತ್ತು ಕಾನೂನಿನ ಅರಿವಿನ ವಿವರ** | **ಆವೃತ್ತಿ** | **ಶೇಕಡವಾರು** |
|---|---|---|
| ಅರಿವು ಇದೆ | 45 | 90% |
| ಅರಿವು ಇಲ್ಲ | 05 | 10% |
| **ಒಟ್ಟು** | **50** | **100%** |

ಮೇಲಿನ ಕೋಷ್ಟಕದಿಂದ ಕಂಡುಬರುವುದೆನೆಂದರೆ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಮೀಸಲಾತಿ ಮತ್ತು ಕಾನೂನಿನ ಅರಿವಿನ ಬಗ್ಗೆ ಮಾಹಿತಿ ಸಂಗ್ರಹಿಸಿದಾಗ ಅರಿವು ಇದೆ ಎಂದು ಶೇ.90% ರಷ್ಟು, ಅರಿವು ಇಲ್ಲ ಎಂದು ಶೇ 10% ಮತಾಂತರಗೊಂಡಿರುವವರು ತಿಳಿಸಿರುವುದು ಅಧ್ಯಯನದಿಂದ ಕಂಡುಬಂದಿದೆ. ಈ ಅಂಕಿ ಅಂಶಗಳಿಂದ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರಿಗೆ ಮೀಸಲಾತಿ ಮತ್ತು ಕಾನೂನಿನ ಅರಿವು ಇದೆ ಎನ್ನುವುದು ಅಧ್ಯಯನದಿಂದ ಹೆಚ್ಚಾಗಿ ಕಂಡುಬಂದಿದೆ. ಹಾಗೆ ಮೀಸಲಾತಿಯು ಆರ್ಟಿಕಲ್ 15(4) ಮತ್ತು 16(4) ರ ಅನ್ವಯ ಮೀಸಲಾತಿಯನ್ನು ನೀಡಲಾಗುತ್ತದೆ.

**ಅಧ್ಯಯನದಿಂದ ಕಂಡುಬಂದ ಅಂಶಗಳು**

1. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರಲ್ಲಿ ಬಹಳಷ್ಟು ಜನ ಆದಿ ಕರ್ನಾಟಕ ಸಮುದಾಯಕ್ಕೆ ಸೇರಿರುವವರಾಗಿದ್ದಾರೆ.
2. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರ ಸಾಮಾಜಿಕ ಸ್ಥಿತಿ ಉತ್ತಮವಾಗುತ್ತಿರುವುದು ಕಂಡುಬಂದಿದೆ.
3. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರನ್ನು ನೆರೆಹೊರೆಯವರು ಉತ್ತಮ ಸ್ಥಾನದಲ್ಲಿ ನಡೆಸಿಕೊಳ್ಳುತ್ತಿದ್ದಾರೆ.
4. ಬೌದ್ಧ ಧರ್ಮಕ್ಕೆ ಮತಾಂತರಗೊಂಡಿರುವವರಲ್ಲಿ ಸಾಕ್ಷರತೆಯನ್ನು ಹೊಂದಿರುವವರು ಇರುವುದು ಕಂಡುಬಂದಿದೆ.

**ಸಲಹೆಗಳು**

1. ಪ್ರಜ್ಞಾಪೂರ್ವಕವಾಗಿ ಸದೃಢ ಮನಸ್ಸಿನಿಂದ ಬೌದ್ಧ ಧರ್ಮದ ಸಾರವನ್ನು ಸಾರಬೇಕು.
2. ದುಡಿಮೆಯನ್ನು ಹಾಗೂ ಆರ್ಥಿಕ ಬಲವನ್ನು ಹೆಚ್ಚಿಸಿಕೊಳ್ಳಬೇಕು.
3. ಭಾರತದಲ್ಲಿ ಉದಯಿಸಿದ ಬೌದ್ಧ ಧರ್ಮ ಭಾರತದಲ್ಲಿ ಹೆಚ್ಚು ವ್ಯಾಪಕವಾಗಬೇಕು.

**ಉಪಸಂಹಾರ**

ಭಾರತ ದೇಶ ಜಗತ್ತಿನಾದ್ಯಂತ ಹಲವು ಧರ್ಮ ಮತ್ತು ಜಾತಿಗಳ ಐಕ್ಯತೆಯ ನೆಲೆವೀಡು. ಸಾಮಾಜಿಕವಾಗಿ ಮೇಲು ಮತ್ತು ಕೀಳು ಇದು ರಾಷ್ಟ್ರದಾದ್ಯಂತ ಈ ಮೊದಲಿಗೆ ಜೀವಂತವಾಗಿರುವ ಸತ್ಯ ಸಂಗತಿ. ಸಮುದಾಯದಲ್ಲಿ ದಲಿತರು ಸಮಾಜದ ತಳ ಹಂತದಲ್ಲಿ ಬರುವವರಾಗಿದ್ದಾರೆ. ಸ್ವಾತಂತ್ರ್ಯ ಬಂದು ಎಪ್ಪತ್ತೇಳು ಸಂವತ್ಸರಗಳು

ಪೂರೈಸಿದ್ದರು ಬಹುತೇಕ ಪ್ರದೇಶಗಳಲ್ಲಿ ಇಂದಿಗೂ ಜಾತಿಯ ಸಾಮಾಜಿಕ ಮನೋಭಾವ ಬದಲಾಗುವುದರಲ್ಲಿಯೇ ಸಾಗುತ್ತಿದೆ. ಒಂದಷ್ಟು ಕಡೆ ಇನ್ನೂ ಕರಾಳ ಸ್ಥಿತಿಯಲ್ಲಿಯೇ ಇರುವುದನ್ನು ಕಾಣಬಹುದು, ಇಂತಹ ಹಿನ್ನೆಲೆಯಲ್ಲಿ ಹಲವು ಮನಸ್ಸುಗಳು, ವ್ಯಕ್ತಿಗಳು ಮತಾಂತರದ ಕಡೆಗೆ ಮುಖ ಮಾಡಿರುವುದು, ಭಾರತದಲ್ಲಿ ಅಸ್ಪೃಶ್ಯತೆ ಆಚರಣೆ ಯಾವ ರೀತಿಯಲ್ಲಿ ಹರಡಿಕೊಂಡಿದೆ ಮತ್ತು ಅದರ ವ್ಯಾಪಕತೆ ಇನ್ನೂ ಮುಂದುವರಿಯುತ್ತಿರುವುದು ಅಧ್ಯಯನದಿಂದ ವ್ಯಕ್ತವಾಗಿದೆ.

**ಪರಾಮರ್ಶನ ಗ್ರಂಥಗಳು**


- ಅಂಬೇಡ್ಕರ್, ಬಿ. ಆರ್. (1957). *ಬುದ್ಧ ಮತ್ತು ಆತನ ಧಮ್ಮ.* ಸಿದ್ಧಾರ್ಥ ಕಾಲೇಜು ಪಬ್ಲಿಕೇಷನ್.
- ಅಂಬೇಡ್ಕರ್, ಬಿ. ಆರ್. (1995) *ವೀಸಾಗಾಗಿ ಕಾಯುತ್ತಿರುವವರು.* ಬಹುಜನ ಸಮಾಜ ಪಬ್ಲಿಕೇಷನ್ಸ್.
- ಬಂಗಾರಪ್ಪ, ಜಿ. (2014). *ಧಮ್ಮದ ಆಶಯಗಳು.* ಚಿಂತನ ಪ್ರಕಾಶನ.
- ನರಸಿಂಹಯ್ಯ, ಎಸ್. (2000). *ಬೋಧಿ ಪೂರ್ಣಿಮಾ.* ಮಹಾಬೋಧಿ ಸೊಸೈಟಿ.
- ಶಿವಕುಮಾರ. (2016) ಅಸ್ಪೃಶ್ಯರೇ...ನಿಮ್ಮ ಇತಿಹಾಸವನ್ನು ಬಲ್ಲಿರಾ?, ಪ್ರಬುದ್ಧ ಪ್ರಕಾಶನ.
- ವಿಜಯಾ ಮಹೇಶ್. (2012). *ಬಾಬಾ ಸಾಹೇಬರು ಬೌದ್ಧ ಧಮ್ಮ ಸ್ವೀಕರಿಸಿದ್ದು ಯಾಕೆ?,* ಪ್ರಬುದ್ಧ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 99-103
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಬದಲಾವಣೆ : ಒಂದು ಸಮಾಜಶಾಸ್ತ್ರೀಯ ಅಧ್ಯಯನ

**ಸಂದೀಪ ಆರ್[1] ಮತ್ತು ಡಾ. ಎಂ. ಪೂರ್ವಾಚಾರ್[2]**

[1]ಸಂಶೋಧನಾ ವಿದ್ಯಾರ್ಥಿ, ಸಮಾಜಶಾಸ್ತ್ರ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಜ್ಞಾನ ಸಹ್ಯಾದ್ರಿ ಶಂಕರಘಟ್ಟ, ಶಿವಮೊಗ್ಗ.

[2]ಪ್ರಾಧ್ಯಾಪಕರು, ಸಮಾಜಶಾಸ್ತ್ರ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಸಹ್ಯಾದ್ರಿ ಕಲಾ ಕಾಲೇಜು, ಶಿವಮೊಗ್ಗ.

***Abstract:***

*ಸಾಮಾಜಿಕ ಸಂರಚನೆಯಲ್ಲಿ ಜಾತಿ ಪದ್ಧತಿಯು ಒಂದು ಅಂಶವಾಗಿದ್ದು, ಸಂರಚನಾತ್ಮಕ ಅಂಶಗಳ ಮೇಲೆ ಗಮನಹರಿಸುತ್ತದೆ. ಸಾಮಾಜಿಕ ಅನನ್ಯತೆಯನ್ನು ಜಾತಿ ವ್ಯವಸ್ಥೆ ಪ್ರತಿನಿಧಿಸುತ್ತದೆ. ಭಾರತೀಯ ಸಮಾಜವು ಜಾತಿ ಆಧಾರಿತ ಸಮಾಜವಾಗಿರುವುದರಿಂದ ಭಾರತೀಯ ಸಮಾಜದಲ್ಲಿ ಜಾತಿಯು ಹುಟ್ಟಿನಿಂದ ಬರುವ ಅಥವಾ ಕರೆಯಲ್ಪಡುವ ಅಂಶವಾಗಿ ಪರಿಣಮಿಸಿದೆ. ಸಮಾಜಶಾಸ್ತ್ರಜ್ಞರ ವ್ಯಾಖ್ಯಾನಗಳಿಂದ ಜಾತಿ ಪದ್ಧತಿಯ ಸ್ವರೂಪ ಮತ್ತು ವಿವಿಧ ಆಯಾಮಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಭಾರತೀಯ ಗ್ರಾಮಗಳಲ್ಲಿನ ಜಾತಿಯ ಚದುರುವಿಕೆಯು ಇತ್ತೀಚಿನ ಬದಲಾವಣೆಯ ಅಂಶಗಳನ್ನು ಕೇಂದ್ರೀಕರಿಸಿದೆ. ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ಲಿಂಗಾಯತ ಜಾತಿಯ ಉಪಜಾತಿಯಾದ ಪಂಚಮಸಾಲಿ ಸಮುದಾಯವು ತನ್ನ ಸಾಂಸ್ಕೃತಿಕ ಅನನ್ಯತೆಯ ಅಂಶಗಳಲ್ಲಿ ಬದಲಾವಣೆಗಳು ಕಂಡುಬರುತ್ತಿರುವುದರ ಹಿನ್ನೆಲೆಯ ಮೇರೆಗೆ ಪ್ರಸ್ತುತ ಸಂಶೋಧನೆಯು ಕೇಂದ್ರೀಕೃತವಾಗಿದೆ. ಪ್ರತಿಯೊಂದು ಸಮಾಜವು ನಿರಂತರವಾಗಿ ಬದಲಾವಣೆಯಾಗುವ ರೀತಿಯಲ್ಲಿ ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಬದಲಾವಣೆಯಾಗುತ್ತಿರುವುದು ಸಾಮಾನ್ಯ ಅಂಶವಾಗಿದೆ. ಅವರ ಆಚರಣೆಗಳ ವಿಧಿ-ವಿಧಾನಗಳು ಪ್ರಸ್ತುತ ಸಮಾಜಕ್ಕೆ ಹೊಂದಿಕೊಳ್ಳುವಂತಿದ್ದರೂ ಬದಲಾವಣೆಯ ಅಂಶಗಳು ಎದ್ದು ಕಾಣುತ್ತಿವೆ. ಸಾಂಸ್ಕೃತಿಕವಾಗಿ ತನ್ನದೇ ಆದ ಹಿನ್ನೆಲೆಯನ್ನು ಹೊಂದಿರುವ ಪಂಚಮಸಾಲಿಗರು ಇತ್ತೀಚಿನ ಆಧುನೀಕರಣ, ಜಾಗತೀಕರಣ, ಪಾಶ್ಚಾತ್ಯೀಕರಣ ಮೊದಲಾದ ಅಂಶಗಳ ಪ್ರಭಾವದಿಂದ ಹಲವಾರು ರೀತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯಾಗುತ್ತಿರುವುದನ್ನು ಪ್ರಸ್ತುತ ಸಂಶೋಧನೆಯ ಮೂಲಕ ತಿಳಿಯಬಹುದಾಗಿದೆ.*

***Keywords:*** *ಲಿಂಗಾಯತ, ಪಂಚಮಸಾಲಿ, ಸಮಾಜ ಮತ್ತು ಸಂಸ್ಕೃತಿ, ಆಚರಣೆ, ಸಾಂಸ್ಕೃತಿಕ ಬದಲಾವಣೆ.*

**ಪೀಠಿಕೆ**

'ದಯವೇ ಧರ್ಮದ ಮೂಲವಯ್ಯ' ಎಂದು 12ನೇ ಶತಮಾನದಲ್ಲಿ ಹೇಳಿರುವ ಬಸವಣ್ಣನವರ ಈ ಪರಿಕಲ್ಪನೆಯು ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳಿಗೆ ಪ್ರೇರಿತವಾದ ಅಂಶವಾಗಿದೆ. ಧರ್ಮದ ಮೂಲ ದಯೆ ಎಂಬುದು ಇದರ ಸಾರವಾಗಿದೆ. ಸಂಸ್ಕೃತಿಯಲ್ಲಿ ಧಾರ್ಮಿಕ ಅಂಶಗಳು

***Please cite this article as:*** ಸಂದೀಪ ಆರ್ ಮತ್ತು ಎಂ. ಪೂರ್ವಾಚಾರ್. (2024). ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಬದಲಾವಣೆ :ಒಂದು ಸಮಾಜಶಾಸ್ತ್ರೀಯ ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(2), 99–103

ಕಂಡುಬರುತ್ತವೆ. ಧಾರ್ಮಿಕ ಆಚರಣೆಗಳಲ್ಲಿ ಒಂದಾದ ಸಂಸ್ಕೃತಿಯು ಕಾಲಾಂತರದಲ್ಲಿ ಬದಾವಣೆ ಹೊಂದುತ್ತಾ ಬರುತ್ತಿದೆ. ಅದೇ ರೀತಿಯಾಗಿ ಪಂಚಮಸಾಲಿ ಸಮುದಾಯದಲ್ಲಿಯೂ ಅನೇಕ ರೀತಿಯ ಸಾಂಸ್ಕೃತಿಕ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ.

**ಪಂಚಮಸಾಲಿ ಸಮುದಾಯದ ಸಂಸ್ಕೃತಿಯ ಪರಿಕಲ್ಪನೆ**

ರುತ್ ಬೆನ್‌ಡಿಕ್ಟ್‌ರವರ 'Patterns of Culture' ಎಂಬ ಕೃತಿಯಲ್ಲಿ 'ಸಂಸ್ಕೃತಿ ಮತ್ತು ವ್ಯಕ್ತಿತ್ವ' ಮಾನವ ಸಮುದಾಯದ ಒಂದು ಪ್ರಮುಖವಾದ ಅಂಶ. ಉತ್ತಮ ಸಂಸ್ಕೃತಿಯಿಂದ ಉತ್ತಮ ವ್ಯಕ್ತಿತ್ವ, ಉತ್ತಮ ಸಮಾಜದ ಬೆಳವಣಿಗೆಯಾಗುತ್ತದೆ. ಸಮಾಜದಲ್ಲಿನ ಪ್ರತಿಯೊಂದು ಸಂಸ್ಕೃತಿಯು ತನ್ನದೇ ಆದ ವೈವಿಧ್ಯತೆಯನ್ನು ಹೊಂದಿದೆ ಎಂಬುದಾಗಿ ಹೇಳಿದ್ದಾರೆ. (ರುತ್ ಬೆನ್‌ಡಿಕ್ಟ್, 1959). ಅವರು ತಿಳಿಸಿರುವ ಸಂಸ್ಕೃತಿಯ ಪರಿಕಲ್ಪನೆಯು ಪಂಚಮಸಾಲಿಗರ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೋಡಿದಾಗ ಪಂಚಮಸಾಲಿಗರು ತಮ್ಮ ಸಂಸ್ಕೃತಿಯನ್ನು ತಮ್ಮದೇ ಆದ ಮೂಲ ಆಚಾರ–ವಿಚಾರಗಳಿಂದ ಪ್ರಸ್ತುತ ದಿನಗಳಲ್ಲಿ ವಿಭಿನ್ನ ನೆಲೆಗಟ್ಟಿನಲ್ಲಿ ಆಚರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ. ಎಲ್ಲಾ ಸಾಂಸ್ಕೃತಿಕ ಆಚರಣೆಗಳು ಮೂಲವಾಗಿ ಲಿಂಗಾಯತರ ಒಟ್ಟು ಆಚರಣೆಗಳ ಹಿನ್ನೆಲೆಯಿಂದ ಹುಟ್ಟಿಕೊಂಡಿರುವ ಆಚರಣೆಗಳಾಗಿದ್ದೂ, ಅವುಗಳ ನಡುವೆ ಬದಲಾವಣೆಯನ್ನು ಕಾಣಬಹುದಾಗಿದೆಯೇ ಹೊರತು ಬೇರೆ ಸಂಸ್ಕೃತಿಯ ಪ್ರಭಾವವಿಲ್ಲ ಎಂಬ ಅಂಶವನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

ಪಂಚಮಸಾಲಿ ಸಮುದಾಯದವರಲ್ಲಿ ಲಿಂಗಾಯತ ಅಥವಾ ಬಸವಣ್ಣನವರು ಹಾಕಿಕೊಟ್ಟ ಚೌಕಟ್ಟಿನಲ್ಲಿಯೇ ತಮ್ಮ ಸಂಸ್ಕೃತಿ ಬೆಳೆದುಕೊಂಡು ಬಂದಿದೆ. ಪಂಚಮಸಾಲಿಗರು ತಮ್ಮ ತಲೆತಲಾಂತರಗಳಿಂದ ಪಾಲಿಸಿಕೊಂಡು ಬಂದ ಸಂಸ್ಕೃತಿಯನ್ನು ಮುಂದುವರಿಸುತ್ತಿದ್ದಾರೆ. ಆದರೆ ಪೀಳಿಗೆಯಿಂದ ಪೀಳಿಗೆಗೆ ಸಂಸ್ಕೃತಿ ಮತ್ತು ಸಮಾಜಗಳೆರಡೂ ಬದಲಾವಣೆ ಆಗುತ್ತಿರುವುದರಿಂದ ಸಾಂಸ್ಕೃತಿಕ ಬದಲಾವಣೆಯ ಅಂಶಗಳು ಬದಲಾವಣೆಯಾಗಿವೆ. ಪ್ರಕೃತಿ ಮತ್ತು ಸಂಸ್ಕೃತಿಯ ನಡುವೆ ಸಹ ಸಂಬಂಧವಿದ್ದು, ಉತ್ತಮ ಸಂಸ್ಕೃತಿಯು ಉತ್ತಮ ಪರಿಸರವನ್ನು ನಿರ್ಮಾಣ ಮಾಡುತ್ತದೆ ಎಂಬ ಅವರ ಅಂಶವು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ನೋಡಿದಾಗ ಪರಿಸರ ಮತ್ತು ಸಂಸ್ಕೃತಿಯ ಅಂಶಗಳು ಪಂಚಮಸಾಲಿಗರ ಸಂಸ್ಕೃತಿಯ ಬದಲಾವಣೆಯ ಮೇಲೆ ಪ್ರಭಾವ ಬೀರುತ್ತದೆ.

**ಸಾಹಿತ್ಯಾವಲೋಕನ**

ಕಲಬುರ್ಗಿ (2018) ಅವರು ರಚಿಸಿದ 'ಮಾರ್ಗ' ಎಂಬ ಕೃತಿಯು ಸಂಶೋಧನಾಧಾರಿತ ಕೃತಿಯಾಗಿದ್ದು, ಈ ಕೃತಿಯಲ್ಲಿ ಪಂಚಮಸಾಲಿಗಳ ಸಂಸ್ಕೃತಿಯ ಬಗ್ಗೆ ವಿವರಿಸಿದ್ದಾರೆ. ಪಂಚಮಸಾಲಿಗರು ಲಿಂಗಾಯತರಆಚರಣೆಗಳನ್ನು ಆಚರಿಸುವವರಾಗಿದ್ದು, ತಮ್ಮ ಸಂಸ್ಕೃತಿ ಮತ್ತು ಇತಿಹಾಸವನ್ನು ಪ್ರಾಚೀನ ಕಾಲದಿಂದಲೂ ಬೆಳೆಸಿಕೊಂಡು ಬಂದಿದ್ದಾರೆ ಎಂಬುದಾಗಿ ಹೇಳಿದ್ದಾರೆ. ಉಪಾಧ್ಯಾಯ (2019) ಅವರು ಪಂಚಮಸಾಲಿ ಮತ ಕುರಿತು ಅಧ್ಯಯನ ನಡೆಸಿದ್ದಾರೆ. ಇವರ ಅಧ್ಯಯನದಲ್ಲಿ ಪಂಚಮಸಾಲಿ ಸಮುದಾಯದ ಹಿನ್ನೆಲೆ ಮತ್ತು ಸಂಸ್ಕೃತಿಯನ್ನು ಕುರಿತು ವಿವರಿಸಿದ್ದಾರೆ. ಪಂಚಮಸಾಲಿ ಸಂಸ್ಕೃತಿಯ ಪ್ರಮುಖ ಅಂಶಗಳನ್ನು ಈ ಗ್ರಂಥದಲ್ಲಿ ಅವಲೋಕಿಸಬಹುದಾಗಿದೆ. ಇವರೂ ಕೂಡ ಪಂಚಮಸಾಲಿಗರು ತಮ್ಮದೇ ಆದ ಸಾಂಸ್ಕೃತಿಕ ಇತಿಹಾಸವನ್ನು ಹೊಂದಿರುವುದನ್ನು ತಿಳಿಸಿದ್ದಾರೆ.

**ಸಂಶೋಧನಾ ಸಮಸ್ಯೆಯ ಹೇಳಿಕೆ**

ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದಂತೆ ಬದಲಾವಣೆ

ಆಗುತ್ತಿರುವುದು ಕಂಡುಬಂದಿದೆ. ಸಾಂಸ್ಕೃತಿಕ ಬದಲಾವಣೆಗೆ ಕಾರಣವಾದ ಅಂಶಗಳನ್ನು ಈ ಸಂಶೋಧನೆಯ ಮೂಲಕ ತಿಳಿಯಬಹುದಾಗಿದೆ.

**ಅಧ್ಯಯನದ ಉದ್ದೇಶಗಳು**

- ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಬದಲಾವಣೆಯ ಅಂಶಗಳನ್ನು ಅಧ್ಯಯನಿಸುವುದು.
- ಪಂಚಮಸಾಲಿ ಸಮುದಾಯದ ಸಾಂಸ್ಕೃತಿಕ ಅಂಶಗಳ ಬದಲಾವಣೆಯ ಮೇಲೆ ಪರಿಣಾಮ ಬೀರುವ ಅಂಶಗಳನ್ನು ಕುರಿತು ತಿಳಿಸುವುದು.

**ಅಧ್ಯಯನ ಕ್ಷೇತ್ರ ಮತ್ತು ಮಾದರಿ**

ಪ್ರಸ್ತುತ ಅಧ್ಯಯನಕ್ಕಾಗಿ ದಾವಣಗೆರೆ ಜಿಲ್ಲೆಯ 40 ಜನರನ್ನು ಸರಳ ಯಾದೃಚ್ಛಿಕ ಮಾದರಿ ವಿಧಾನದ ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ.

**ಸಂಶೋಧನಾ ವಿಧಾನ ಮತ್ತು ತಂತ್ರಗಳು**

ಪ್ರಸ್ತುತ ಸಂಶೋಧನೆಗೆ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಲು ಸಂದರ್ಶನ, ಅವಲೋಕನ, ಕ್ಷೇತ್ರಕಾರ್ಯ, ಗುಂಪು ಚರ್ಚೆ ಮುಂತಾದ ವಿಧಾನಗಳನ್ನು ಬಳಸಿಕೊಳ್ಳಲಾತದೆ.

***ಮಾಹಿತಿ ಸಂಗ್ರಹಣೆ***

ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಪ್ರಾಥಮಿಕ ಮತ್ತು ಆನುಷಂಗಿಕ ಮೂಲಳಿಂದ ಮಾಹಿತಿ ಸಂಗ್ರಹಿಸಿಲಾತದೆ. ಪ್ರಾಥಮಿಕ ಮಾಹಿತಿಯನ್ನು ಕ್ಷೇತ್ರಕಾರ್ಯ ಕೈಗೊಂಡು ವಿವಿಧ ಸಂಶೋಧನಾ ವಿಧಾನಗಳ ಮೂಲಕ ಸಂಗ್ರಹಿಸಲಾತದೆ. ಆನುಷಾಂಗಿಕ ಮಾಹಿತಿಯನ್ನು ಸರ್ಕಾರಿ ಇಲಾಖಾ ದಾಖಲಾತಿಗಳು, ಜನಗಣತಿ ದಾಖಲಾತಿಗಳು, ಗ್ರಂಥಗಳು, ಪುಸ್ತಕಗಳು, ಸಮೀಕ್ಷಾ ವರದಿಗಳು, ಪತ್ರಿಕೆಗಳು, ಅಂತರ್ಜಾಲ, ಮಹಾಪ್ರಬಂಧಗಳು, ವಿಶ್ವಕೋಶ ಮುಂತಾದ ಮೂಲಗಳಿಂದ ಸಂಗ್ರಹಿಸಲಾಗಿದೆ.

**ಮಾಹಿತಿ ವಿಶ್ಲೇಷಣೆ**

ವಿವಿಧ ವಿಧಾನಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಕ್ರೋಢೀಕರಿಸಿ, ಪರಿಷ್ಕರಿಸಿ, ಸಾಂಕೇತೀಕರಣ, ವರ್ಗೀಕರಣ ಮಾಡಿ ಸಮಾಜಶಾಸ್ತ್ರೀಯ ಚೌಕಟ್ಟಿನಲ್ಲಿ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

**ಕೋಷ್ಟಕ 1 : ಪಂಚಮಸಾಲಿ ಸಮುದಾಯದಲ್ಲಿ ಸಾಂಸ್ಕೃತಿಕ ಬದಲಾವಣೆಯಾಗಿರುವುದರ ವಿವರ**

| ಅಭಿಪ್ರಾಯ | ಆವೃತ್ತಿ | ಶೇಕಡವಾರು |
|---|---|---|
| ಬದಲಾವಣೆಯಾಗಿದೆ | 34 | 85.00 |
| ಬದಲಾವಣೆಯಾಗಿಲ್ಲ | 06 | 15.00 |
| **ಒಟ್ಟು** | **40** | **100.00** |
| **ಬದಲಾವಣೆಯಾಗಿರುವುದಾದರೆ (N=34)** | | |
| ಆಚಾರ–ವಿಚಾರಗಳಲ್ಲಿ | 28 | 82.35 |
| ರೂಢಿ–ಸಂಪ್ರದಾಯಗಳಲ್ಲಿ | 19 | 55.88 |
| ಊಟೋಪಚಾರಗಳಲ್ಲಿ | 30 | 88.23 |
| **ಒಟ್ಟು** | **34** | **100.00** |

ಕೋಷ್ಟಕ 1 ರಲ್ಲಿ ಸಾಂಸ್ಕೃತಿಕ ಬದಲಾವಣೆಯ ವಿವರವನ್ನು ನೀಡಲಾಗಿದೆ. ಕೋಷ್ಟಕದ ಪ್ರಕಾರ ಶೇಕಡ 85ರಷ್ಟು ಸೂಚನದಾರರು ಪಂಚಮಸಾಲಿ ಸಮುದಾಯದಲ್ಲಿ ಬದಲಾವಣೆಯಾಗಿದೆ ಎಂದು ತಿಳಿಸಿದರೆ, ಯಾವುದೇ ಬದಲಾವಣೆಯಾಗಿಲ್ಲ ಎಂದು ಶೇಕಡ 15ರಷ್ಟು ಮಂದಿ ತಿಳಿಸಿದ್ದಾರೆ. ಬದಲಾವಣೆಯಾಗಿರುವುದಾದರೆ, ಶೇಕಡ 82.35ರಷ್ಟು ಆಚಾರ ವಿಚಾರಗಳಲ್ಲಿ ಬದಲಾವಣೆಯಾಗಿದೆ ಎಂದು, ಶೇಕಡ 55.88ರಷ್ಟು ರೂಢಿ–ಸಂಪ್ರದಾಯಗಳಲ್ಲಿ ಬದಲಾವಣೆಯಾಗಿರುವುದಾಗಿ ಹಾಗೂ ಶೇಕಡ 88.23ರಷ್ಟು ಊಟೋಪಚಾರಗಳಲ್ಲಿ ಬದಲಾವಣೆಗಳಾಗಿವೆ ಎಂಬುದಾಗಿ ತಿಳಿಸಿದ್ದಾರೆ. ಆಧುನೀಕರಣದ ಅಂಶಗಳು ಇವರ ಮೇಲೆ ಪ್ರಭಾವ ಬೀರಿ ಬದಲಾವಣೆ ಕಂಡುಬಂದಿದೆ.

**ಕೋಷ್ಟಕ 2: ಸಾಂಸ್ಕೃತಿಕ ಆಚರಣೆ ಮಾಡುವುದರ ವಿವರ**

| ಸಾಂಸ್ಕೃತಿಕ ಆಚರಣೆ | ಆವೃತ್ತಿ | ಶೇಕಡವಾರು |
|---|---|---|
| ಮಾಡುತ್ತೇವೆ | 36 | 90.00 |
| ಮಾಡುವುದಿಲ್ಲ | 4 | 10.00 |
| **ಒಟ್ಟು** | **40** | **100.00** |
| **ಸಾಂಸ್ಕೃತಿಕ ಆಚರಣೆ ಮಾಡುವುದಾದರೆ (N=36)** | | |
| ಹಬ್ಬ–ಹರಿದಿನಗಳಲ್ಲಿ | 30 | 83.33 |
| ಹಿರಿಯರ ಪೂಜಾ ಸಂದರ್ಭಲ್ಲಿ | 34 | 94.44 |
| ಜಾತ್ರಾ ಉತ್ಸವಗಳಲ್ಲಿ | 32 | 88.88 |
| ಒಟ್ಟು | 36 | 100.0 |

ಮೇಲಿನ ಕೋಷ್ಟಕದಲ್ಲಿ ಸಾಂಸ್ಕೃತಿಕ ಆಚರಣೆ ಮಾಡುವುದರ ವಿವರವನ್ನು ನೀಡಲಾಗಿದೆ. ಒಟ್ಟು ಸಂದರ್ಶಿತರಲ್ಲಿ ಶೇಕಡ 90 ಸಾಂಸ್ಕೃತಿಕ ಆಚರಣೆಗಳನ್ನು ಮಾಡುತ್ತೇವೆ ಎಂದು ತಿಳಿಸಿದರೆ, ಶೇಕಡ 10 ಸಾಂಸ್ಕೃತಿಕ ಆಚರಣೆಗಳನ್ನು ಮಾಡುವುದಿಲ್ಲ ಎಂದು ತಿಳಿಸಿದ್ದಾರೆ. ಸಾಂಸ್ಕೃತಿಕ ಆಚರಣೆಗಳನ್ನು ಮಾಡುವವರಲ್ಲಿ ಶೇಕಡ 83.33 ಹಬ್ಬ–ಹರಿದಿನಗಳಲ್ಲಿ, ಶೇಕಡ 94.44 ಹಿರಿಯರ ಪೂಜಾ ಸಂದರ್ಭಲ್ಲಿ, ಮತ್ತು ಶೇಕಡ 88.88 ಜಾತ್ರಾ ಉತ್ಸವಗಳಲ್ಲಿ ಸಾಂಸ್ಕೃತಿಕ ಆಚರಣೆಗಳನ್ನು ಮಾಡುವುದಾಗಿ ತಿಳಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ನಗರೀಕರಣ ಹಾಗೂ ಆಧುನಿಕ ಜೀವನ ಶೈಲಿಯ ಪರಿಣಾಮದಿಂದಾಗಿ ಸಾಂಸ್ಕೃತಿಕ ಆಚರಣೆಗಳನ್ನು ಆಚರಿಸುವುದರ ಕಡೆಗೆ ಹೆಚ್ಚು ಒಲವನ್ನು ತೋರಿಸಿರುವುದು ಕಂಡುಬಂದಿದೆ ಹಾಗೂ ಹಿರಿಯರ ಸಂಪ್ರದಾಯ ಮುಂದುವರೆಸುವ ಸಲುವಾಗಿ ಹಾಗೂ ದೈವಿಕ ಭಾವನೆಯ ಅಂಶಗಳಿಂದ ಪ್ರೇರಿತರಾಗಿ ಆಚರಣೆಗಳನ್ನು ಅಚರಿಸುತ್ತಿದ್ದಾರೆ ಎಂಬುದು ಸಂಶೋಧನೆಯಿಂದ ತಿಳಿಯುತ್ತದೆ.

**ಅಧ್ಯಯದಿಂದ ವ್ಯಕ್ತವಾದ ಅಂಶಗಳು**

- ಪಂಚಮಸಾಲಿ ಸಮುದಾಯದಲ್ಲಿ ಸಾಂಸ್ಕೃತಿಕ ಬದಲಾವಣೆಯಾಗಿರುವುದರ ವಿವರಕ್ಕೆ ಸಂಬಂಧಿಸಿದಂತೆ ಹೆಚ್ಚಿನವರು ಆಚಾರ ವಿಚಾರಗಳಲ್ಲಿ ಬದಲಾವಣೆಯಾಗಿದೆ ಎಂದು ತಿಳಿಸಿದ್ದಾರೆ.
- ಆಧುನಿಕತೆ ಮತ್ತು ಜಾಗತೀಕರಣ ಅಂಶಗಳು ಇವರ ಸಾಂಸ್ಕೃತಿಕ ಬದಲಾವಣೆಯ ಮೇಲೆ ಪ್ರಭಾವ ಬೀರಿವೆ.
- ಪಂಚಮಸಾಲಿ ಸಮುದಾಯದ ಅತಿ ಹೆಚ್ಚಿನ ಮಾಹಿತಿದಾರರು ಇಂದಿಗೂ ಸಾಂಸ್ಕೃತಿಕ ಆಚರಣೆಗಳನ್ನು ಮಾಡುತ್ತಿರುವ್ಯದಾಗಿ ತಿಳಿಸಿದ್ದಾರೆ.

**ಸಲಹೆ**

- ಸಮುದಾಯದ ಯುವಪೀಳಿಗೆಗೆ ಪಂಚಮಸಾಲಿ ಸಮುದಾಯದ ಸಂಸ್ಕೃತಿಯ ಕುರಿತು ಅರಿವು ಮೂಡಿಸುವ್ಯದು ಅಗತ್ಯವಾಗಿದೆ.

**ಉಪಸಂಹಾರ**

ಒಟ್ಟಾರೆಯಾಗಿ ಹೇಳುವುದಾದರೆ ಇತರೆ ಸಮುದಾಯಗಳಂತೆ ಪಂಚಮಸಾಲಿ ಸಮುದಾಯದ ಸಂಸ್ಕೃತಿಯಲ್ಲಿಯೂ ಕೂಡ ಬದಲಾವಣೆ ಕಾಣಬರುತ್ತಿದೆ. ಸಾಂಸ್ಕೃತಿಕ ಪರಂಪರೆ ಐತಿಹಾಸಿಕ ಅಂಶಗಳಾಗಿದ್ದರೂ ಸಮಾಜದ ಪರಿವರ್ತನೆ ಹಾಗೂ ಬೆಳವಣಿಗೆಯ ಹಿನ್ನೆಲೆಯಲ್ಲಿ ಬದಲಾವಣೆ ಹೊಂದುವುದು ಸಾಮಾನ್ಯವಾಗಿರುತ್ತದೆ.

**ಪರಾಮರ್ಶನ ಗ್ರಂಥಗಳು**

- ಕಲಬುರ್ಗಿ, ಎಂ.ಎಂ. (2018). *ಮಾರ್ಗ*. ಸಂಪುಟ–4, ಸಪ್ನ ಬುಕ್ ಹೌಸ್.
- ನಾಗಭೂಷಣ, ಸಿ. (2000). *ಶರಣ ಸಾಹಿತ್ಯ ಸಂಸ್ಕೃತಿ : ಕೆಲವು ಅಧ್ಯಯನಗಳು*. ಕನ್ನಡ ಸಾಹಿತ್ಯ ಪರಿಷತ್ತು.
- ಪ್ರಕಾಶ್, ಎಚ್.ಎಸ್.ಎಂ. ಮತ್ತು ಸದಾನಂದ ಕನವಳ್ಳಿ (2019). *ಲಿಂಗಾಯತ ಧರ್ಮದ*

*ಇತಿಹಾಸ ಮತ್ತು ದರ್ಶನ.* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು.

- ಉಪಾಧ್ಯಾಯ, ಡಿ.ಎ. (2019). *ಪಂಚಮಸಾಲಿ ಮತ.* ಕಲಾ ಕಾಶಿ ಪ್ರಕಾಶನ.
- Desai, P.B. (1962). *Basaveshwara and its Contemporaries*. Kannada Study Center.
- Ghurye, G.S. (1950). *Caste and Class in India*. Popular Book Depot.
- Malavad, S.S. (1980). *Veerashaivism and Vachanakaras*. Basava Samiti.
- Ruth Benedict (1959). *Patterns of Culture*. Houghton Mifflin Company.
- Sadashivaiah, H.M. (1936). *Discourse on Veerashaivism.* Bharathi Vidyabhavan.
- Shashikanth Sanganal Matt (1992). *Veerashaivism*. S.M. Aralimatti Udaya Publications.
- Srinivas, M.N. (1987). *The Dominant Caste and Other Essays*. Oxford University Press.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 104-111
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# Rural Development and Panchayath Raj System in Karnataka State

**Pradeep Kumar M**
Guest Faculty, Department of Rural development, Post Graduate Centre Ramanagar,
Banglore Universit, Ramanagara.

***Abstract:***

*This research article explores the role of the Panchayath Raj system in advancing rural development in Karnataka. It examines into the historical evolution and legislative framework of Panchayath Raj Institutions (PRIs) in the state, focusing on the Karnataka Panchayat Raj Act, 1993. The study examines the three-tier structure of PRIs—Gram Panchayat, Taluk Panchayat, and Zilla Panchayat—and their involvement in implementing rural development programs, building infrastructure, and promoting social welfare. The article highlights the potential of PRIs to drive rural progress. The conclusion offers policy recommendations for strengthening PRIs, enhancing community involvement, and fostering innovative practices to ensure sustainable and inclusive rural development in Karnataka.*

***Keywords:*** *Panchayath Raj System, Rural Development, Karnataka, Decentralized Governance, Social Welfare.*

## Introduction

Rural development in India has been a central focus of government policy since independence, aimed at improving the quality of life and economic well-being of people living in rural areas. Initially, efforts were concentrated on land reforms, agricultural productivity, and the Green Revolution, which significantly increased food production. Over time, the scope of rural development expanded to include infrastructure development, education, healthcare, and poverty alleviation programs. The introduction of the Panchayath Raj system through the 73rd Constitutional Amendment in 1992 marked a significant shift, empowering local governance to play a more active role in rural development. This decentralized approach has been crucial in addressing the diverse needs of rural communities across India.

The Panchayath Raj system in India is a decentralized form of governance established to empower local self-

***Please cite this article as:*** Pradeep Kumar, M. (2024). Rural Development and Panchayath Raj System in Karnataka State. *SRUJANI: Indian Journal of Innovative Research and Development*, 3(2), 104-111

government in rural areas. Envisioned as a three-tier structure—comprising Gram Panchayats at the village level, Taluk Panchayats at the intermediate level, and Zilla Panchayats at the district level—this system was institutionalized through the 73rd Constitutional Amendment Act in 1992. The amendment granted constitutional status to Panchayath Raj Institutions (PRIs), ensuring their establishment and regular elections.

PRIs are responsible for planning and executing various development programs, managing local resources, and addressing the socio-economic needs of rural communities. They play a key role in implementing government schemes related to agriculture, health, education, sanitation, and infrastructure. The Panchayath Raj system aims to foster democratic participation, enhance accountability, and bring governance closer to the grassroots level, making it a vital tool for rural development and social equity in India.

## Historical Background of the Panchayath Raj System in Karnataka

The Panchayath Raj system in Karnataka has a rich and evolving history, reflecting the state's journey from traditional village governance to a formalized decentralized system. Traditionally, Karnataka's villages were managed by local assemblies known as "Panchayats," where elders and respected community members addressed local issues based on customary laws. Post-independence, efforts began to formalize rural governance, with the introduction of the Community Development Programme in the 1950s setting the stage for structured rural development. Significant reform came in 1959 following the recommendations of the Balwant Rai Mehta Committee, which advocated for a three-tier Panchayati Raj system, partially implemented in Karnataka at that time. The 73rd Constitutional Amendment Act of 1992 was a landmark, granting constitutional status to Panchayath Raj Institutions (PRIs) and mandating regular elections, which was followed by the Karnataka Panchayat Raj Act of 1993. This legislation established a comprehensive three-tier system in Karnataka, consisting of Gram Panchayats (village councils), Taluk Panchayats (intermediate councils), and Zilla Panchayats (district councils), each with defined roles and responsibilities to enhance local governance. The post-1993 period saw a focus on decentralization, with efforts to increase the financial autonomy of PRIs and improve infrastructure and rural development programs. Capacity-building initiatives and administrative reforms were introduced to strengthen PRI functions, though challenges such as political interference, resource constraints, and administrative delays persisted. Karnataka's approach has included innovative practices and technology use to improve governance and community involvement. Despite significant progress, addressing ongoing challenges remains

crucial for the continued effectiveness and sustainability of the Panchayath Raj system in fostering rural development and empowering local self-governance.

## Structure and Functioning of the Panchayath Raj Institutions (PRIs) in Karnataka

Panchayath Raj Institutions (PRIs) play a pivotal role in the rural development of Karnataka by acting as the primary vehicle for decentralized governance. Established to empower local communities, PRIs operate through a three-tier system. Gram Panchayat at the village level, Taluk Panchayat at the sub-district level, and Zilla Panchayat at the district level—each with distinct responsibilities and powers tailored to address local needs and aspirations.

### 1. Gram Panchayat -GP

The Gram Panchayat system in Karnataka is a crucial component of the Panchayath Raj framework, operating at the village level to manage local governance and development. It represents the foundational tier of the three-tier Panchayath Raj system established by the Karnataka Panchayat Raj Act of 1993, which aligns with the 73rd Constitutional Amendment Act of 1992. At the grassroots level, Gram Panchayats are directly involved in planning and executing development projects that address the specific needs of their communities. They manage a wide range of activities, including the construction and maintenance of local infrastructure such as roads, water supply systems, and sanitation facilities. They also play a crucial role in implementing government schemes aimed at improving rural livelihoods, such as the Mahatma Gandhi National Rural Employment Guarantee Act (MGNREGA), which provides employment opportunities and strengthens the rural economy.

**Structure**

The President is the elected head of the Gram Panchayat. President Responsible for the overall administration and representation of the village, the President plays a key role in presiding over meetings and ensuring the effective execution of decisions. Members of the Gram Panchayat are elected from different wards or constituencies within the village. The number of members is determined by the village population, with each ward electing a representative. The Secretary, appointed by the state government, is a key official responsible for the day-to-day administration of the Gram Panchayat. This role involves executing decisions, managing records, and ensuring compliance with regulations.

**Revenue Management**

GP collects local taxes and fees, including property taxes, user charges for services, and fines. These funds are used to finance village-level projects and services. Along with, Prepares and manages the village budget, allocating funds for various development activities and administrative needs.

**Community Engagement**

Conducts regular public meetings to engage with villagers, gather feedback, and address local concerns. This participatory approach ensures that the Gram Panchayat's activities align with community needs. Also Provides a platform for villagers to raise grievances and seek redressed on issues related to local governance and development.

The Gram Panchayat system in Karnataka plays a critical role in local governance and rural development by addressing the specific needs of villages, implementing government schemes, and fostering community involvement. However, overcoming challenges and leveraging best practices are essential for enhancing its effectiveness and impact.

## 2. Taluk Panchayat -TP

In Karnataka, the Taluk Panchayat serves as the intermediate level of the Panchayath Raj system, situated between the Gram Panchayat and the Zilla Panchayat. Taluk Panchayats serve as an intermediary body, coordinating the efforts of multiple Gram Panchayats within a Taluk. They ensure that development plans are aligned with regional needs and provide oversight to the projects implemented at the village level. They also play a key role in resource allocation, distributing funds and resources to Gram Panchayats based on their specific requirements. This level of governance is crucial for managing larger-scale projects that span across multiple villages, such as rural health centers and educational institutions.

**Structure**

The Taluk Panchayat is led by an elected President; The President is responsible for overseeing the functions of the Taluk Panchayat and representing the Taluk in interactions with higher administrative levels. The Taluk Panchayat consists of elected members from various constituencies within the Taluk. The number of members is determined by the population of the Taluk and the number of Gram Panchayats it covers. Vice President Assists the President in managing the Taluk Panchayat and may act as the President in their absence. Moreover, Executive officer appointed official responsible for day-to-day administrative tasks, including record-keeping, implementation of decisions, and coordination with Gram Panchayats.

**Functions of TP**

***Support to Gram Panchayats:*** The Taluk Panchayat provides support and coordination to the Gram Panchayats within its jurisdiction. This includes facilitating communication, sharing resources, and ensuring that local development plans align with district and state objectives. Also Coordinates the implementation of government schemes and programs that require integration across multiple villages, such as rural infrastructure projects, health services, and educational initiatives.

***Project Management:*** Oversees and manages development projects at the Taluk level, including infrastructure projects like roads, irrigation systems, and public facilities. The Taluk Panchayat ensures that these projects meet the needs of the local population and are executed efficiently and, Allocates funds and resources to Gram Panchayats based on their needs and priorities. It ensures that financial resources are used effectively to address regional development needs.

***Financial Management:*** Handles the collection of taxes and fees from various sources within the Taluk. This includes local taxes and contributions for services provided by the Taluk Panchayat, As well as Prepares and manages the Taluk Panchayat budget, allocating funds for various development activities and administrative functions.

***Monitoring and Evaluation:*** Monitors the progress of development projects and programs implemented by Gram Panchayats. Ensures compliance with regulatory requirements and assesses the impact of these initiatives. And Provides a platform for receiving feedback from the community and addressing any issues or concerns related to project implementation and service delivery.

The Taluk Panchayat in Karnataka plays a crucial role in bridging the gap between village-level governance and district-level administration. By coordinating development efforts across multiple villages and managing intermediate-level projects, the Taluk Panchayat contributes significantly to the effective implementation of rural development programs and local governance. Addressing existing challenges and leveraging best practices are essential for enhancing the impact and efficiency of the Taluk Panchayat system.

### 3. Zilla Panchayat -ZP

ZP Composed of elected representatives from each Taluk within the district, with a President and Vice President at the helm. The Zilla Panchayat is the highest tier of the Panchayath Raj system at the district level. The President of the Zilla Panchayat is the chief executive of the district’s local self-governance, responsible for overseeing the overall administration and development activities within the district.

**Functions**

Zilla panchayat Formulates and implements district-level development plans and programs, addressing large-scale infrastructure needs, educational initiatives, and health services. Also Allocates resources and funds to Taluk Panchayats, ensuring that district-wide projects and priorities are adequately funded and executed, together with Works closely with state government departments to align district-level initiatives with broader state policies and objectives. Also, Oversees the performance and effectiveness of Taluk Panchayats, ensures compliance with

regulatory frameworks, and assesses the impact of development programs.

### General Functions of PRIs across Tiers

Panchayath Raj Institutions (PRIs) in Karnataka play a vital role in planning and implementing development programs that are specifically tailored to meet the local needs of rural communities. These programs include essential infrastructure projects, rural employment schemes, and various social welfare initiatives aimed at improving the quality of life for the rural population. Financial management is a key function of PRIs, with each tier responsible for managing its financial resources, which include funds from higher levels of government and revenue generated locally. Effective financial management is crucial for maintaining transparency and accountability, ensuring that funds are used efficiently for development purposes. PRIs also emphasize community participation, encouraging local populations to engage in governance processes. This involvement is achieved through public meetings, consultations, and participatory planning, which help ensure that the decisions made reflect the true needs and priorities of the community. Additionally, PRIs are responsible for coordinating with higher administrative levels and various governmental departments to facilitate the effective delivery of services and the execution of projects. They play a critical role in monitoring the progress of these development initiatives, addressing any issues that arise during implementation, and ensuring that the intended outcomes are achieved.

### Role of PRIs in Rural Development

PRIs also play a critical role in ensuring community participation in governance. They provide a platform for villagers to voice their concerns, contribute to decision-making processes, and hold local authorities accountable. This participatory approach is essential for ensuring that development initiatives are responsive to the needs of the people they are meant to serve.

Moreover, PRIs are responsible for financial management at the local level, handling budgets, collecting local taxes, and ensuring that funds are utilized effectively and transparently. They are instrumental in monitoring and evaluating the progress of development projects, addressing any issues that arise, and ensuring that the intended benefits reach the target population.

However, the effectiveness of PRIs in rural development is contingent on overcoming challenges such as resource constraints, capacity building, political interference, and administrative delays. By addressing these challenges and fostering a culture of accountability, transparency, and community participation, PRIs can significantly contribute to sustainable rural development and the overall improvement of living standards in Karnataka’s rural areas.

## Challenges

Panchayath Raj Institutions (PRIs) in Karnataka face several challenges that impact their effectiveness in rural governance and development. Resource constraints are a significant issue, as limited financial resources and inadequate infrastructure can hinder the successful implementation of development programs. Ensuring adequate funding and effective resource management is crucial for PRIs to meet the needs of their communities. Capacity building is another ongoing challenge, as there is a continuous need to train and develop the administrative and managerial skills of PRI members and staff. Without proper training, these individuals may struggle to perform their duties effectively, leading to inefficiencies in governance. Political interference is also a common problem, where external influences can disrupt the functioning of PRIs, causing delays and conflicts in decision-making. Maintaining political neutrality and ensuring accountability are essential to overcoming this challenge and achieving effective governance. Furthermore, administrative delays and procedural hurdles often impede the timely execution of development projects. These bureaucratic obstacles can slow down progress and prevent communities from receiving the benefits of planned initiatives. To address this, streamlining administrative processes and reducing red tape are necessary steps to improve efficiency and ensure that development projects are completed on time and meet the needs of the rural population.

## Policy Recommendations

Here are some important policy recommendations to enhance the effectiveness of Panchayath Raj Institutions (PRIs) in Karnataka's rural development:

- Increase the financial autonomy of PRIs by providing them with a greater share of state and central government funds and allowing them to generate more local revenue through taxes and fees.
- Implement continuous training and capacity-building programs for PRI members and staff to improve their administrative, financial, and managerial skills.
- Introduce robust mechanisms for transparency and accountability, such as regular audits, public disclosure of financial statements, and citizen participation in monitoring and evaluation processes.
- Establish legal frameworks to minimize political interference in the functioning of PRIs, ensuring that decisions are made based on community needs rather than political considerations.
- Simplify and digitize administrative procedures within PRIs to reduce bureaucratic delays and improve the efficiency of project implementation.

## Conclusion

Overall, the Panchayath Raj system in Karnataka is designed to empower local governance and facilitate rural development through a structured and decentralized approach. Addressing existing challenges and leveraging innovations are crucial for maximizing the effectiveness of PRIs and ensuring sustainable development in rural areas.

## References


- Bhargava, B. S. (2011). Decentralised Governance and Panchayati Raj in Karnataka: A Historical Perspective. *Indian Journal of Political Science*, 72(3), 603-615.
- Bhargava, B. S., & Rama Rao, C. (1985). *Panchayati Raj Institutions: An Analytical Study of Karnataka*. Ashish Publishing House.
- Government of India. (1957). *Report of the Team for the Study of Community Projects and National Extension Service (Balwant Rai Mehta Committee Report).* Ministry of Community Development and Cooperation.
- Government of India. (1992). *The Constitution (73rd Amendment) Act, 1992*. Ministry of Law and Justice.
- Government of India. (2001). *Report of the Task Force on Panchayati Raj Institutions.* Ministry of Rural Development.
- Government of Karnataka. (1993). *The Karnataka Panchayat Raj Act, 1993*. Government of Karnataka.
- Government of Karnataka. (2011). *Karnataka Panchayat Raj (Amendment) Act, 2011*. Government of Karnataka.
- Mathew, G. (1994). *Panchayati Raj: From Legislation to Movement.* Concept Publishing Company.
- Ramachandran, V. K. (2013). The Panchayati Raj System in Karnataka: An Overview of Institutional Reforms and Performance. *Social Science Journal*, 38(1), 75-89.
- Rao, M. S. (2009). Financial Management in Gram Panchayats: A Study of Karnataka. *Journal of Rural Economics and Development*, 24(4), 331-347.
- Singh, S. (2004). *Decentralization: Institutions and Politics in Rural India*. Oxford University Press.
- Sivanna, N., & Devendra, B. (2008). Panchayati Raj Institutions and Rural Development: A Case Study of Karnataka. *Journal of Rural Development*, 27(2), 207-223.
- Vijayalakshmi, V. (2002). *Decentralised Governance and Planning: A Comparative Study of West Bengal and Karnataka*. Rawat Publications.
- Vijayalakshmi, V. (2006). Role of Panchayats in Rural Development: A Study of Karnataka. *Economic and Political Weekly*, 41(12), 1207-1212.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 112-115
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕರ್ನಾಟಕದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪಾತ್ರ: ಒಂದು ಅಧ್ಯಯನ

**ಡಾ. ಚೇತನ್ ಕುಮಾರ್ ಸಿ**
ಉಪನ್ಯಾಸಕರು, ರಾಜ್ಯಶಾಸ್ತ್ರ ವಿಭಾಗ, ರಾಮನಗರ ಸ್ನಾತಕೋತ್ತರ ಕೇಂದ್ರ, ರಾಮನಗರ

***Abstract:***
*ವಿಶ್ವದಲ್ಲಿ ಉದಾರವಾದಿ ಪ್ರಜಾಪ್ರಭುತ್ವವನ್ನು ಹೊಂದಿರುವ ಭಾರತ ದೇಶವು 2011ರ ಜನಗಣತಿಯ ಪ್ರಕಾರ 121 ಕೋಟಿ ಜನಸಂಖ್ಯೆಯನ್ನು ಹೊಂದಿದ್ದು, ಅನೇಕ ಕುಲ ಜನಾಂಗಗಳನ್ನು ಒಳಗೊಂಡಿದೆ. 8ಕ್ಕೂ ಹೆಚ್ಚು ಧರ್ಮಗಳು ಮತ್ತು 6000ಕ್ಕೂ ಹೆಚ್ಚು ಜಾತಿ ಉಪಜಾತಿಗಳನ್ನು ಹೊಂದಿರುವ ಭಾರತದಲ್ಲಿ ಆದಿವಾಸಿಗಳು ಪ್ರಮುಖವಾಗಿವೆ. ಪ್ರಾಚೀನ ಕಾಲದಿಂದಲೂ ನಾಗರಿಕ ಸಮಾಜದಿಂದ ದೂರಸರಿದು ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಲು ಪ್ರಯತ್ನಿಸುತ್ತಿವೆ. 21 ನೇ ಶತಮಾನದ ವಿಜ್ಞಾನ, ತಂತ್ರಜ್ಞಾನ ಯುಗದಲ್ಲಿ ಈ ಸಮುದಾಯಗಳನ್ನು ಅಭಿವೃದ್ಧಿ ಪಡಿಸಲು ಭಾರತದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸೇರಿದಂತೆ ಅನೇಕ ಸರ್ಕಾರೇತರ ಸಂಸ್ಥೆಗಳು ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿವೆ. ಇಂತಹ ಸಮುದಾಯಗಳ ಸಾಮಾಜಿಕ-ಆರ್ಥಿಕ-ರಾಜಕೀಯ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಕಾಲಾನುಕಾಲಕ್ಕೆ ಅನುಷ್ಠಾನಗೊಳಿಸುವ ಮೂಲಕ ಸಮಾಜದಲ್ಲಿ ಮುಖ್ಯವಾಹಿನಿಗೆ ತರಲು ಭಾರತ ಸರ್ಕಾರವು ಶ್ರಮಿಸುತ್ತಿದೆ. ಪ್ರಸ್ತುತ ಲೇಖನದಲ್ಲಿ ಕರ್ನಾಟಕದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಯೋಜನೆಗಳ ಬಗ್ಗೆ ಚರ್ಚಿಸಲಾಗಿದೆ.*

***Keywords:*** *ಕರ್ನಾಟಕದ ಬುಡಕಟ್ಟುಗಳು, ಅಭಿವೃದ್ಧಿ ಯೋಜನೆಗಳು, ಸರ್ಕಾರೇತರ ಸಂಸ್ಥೆಗಳು.*

**ಪೀಠಿಕೆ**

ಕರ್ನಾಟಕವು ದಕ್ಷಿಣ ಭಾರತದ ರಾಜ್ಯಗಳಲ್ಲಿ ಒಂದಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ.6.8ರಷ್ಟಿರುವ ಬುಡಕಟ್ಟು ಜನರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ರಾಜ್ಯದಲ್ಲಿ ಒಟ್ಟು 50 ಬುಡಕಟ್ಟು ಸಮುದಾಯಗಳನ್ನು ಪರಿಶಿಷ್ಟ ಪಂಗಡಗಳ ಗುಂಪಿಗೆ ಸೇರಿಸಲಾಗಿದ್ದು, ಇನ್ನೂ ಅನೇಕ ಸಮುದಾಯಗಳು ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಿಸುವಂತೆ ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸುತ್ತಿವೆ. ಈ ಸಮುದಾಯಗಳ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ವಾಲ್ಮೀಕಿ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯ ಜೊತೆಗೆ ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

**ಬುಡಕಟ್ಟು ಸಮುದಾಯದ ಪರಿಕಲ್ಪನೆ**

ಬುಡಕಟ್ಟು ಸಮುದಾಯಗಳನ್ನು ವಿಭಿನ್ನ ಶಬ್ದಗಳಿಂದ ವ್ಯಾಖ್ಯಾನಿಸಲಾಗಿದೆ. ಅವುಗಳಲ್ಲಿ

***Please cite this article as:*** ಚೇತನ್ ಕುಮಾರ್ ಸಿ. (2024). ಕರ್ನಾಟಕದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪಾತ್ರ: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 112–115

ಪ್ರಮುಖವಾಗಿ 'ಆದಿವಾಸಿಗಳು', 'ಗಿರಿಜನರು', ಮತ್ತು 'ಅರಣ್ಯ ವಾಸಿಗಳು' ಎಂಬ ಪದಗಳನ್ನು ಸಮಾನಾರ್ಥಕ ಪದಗಳಲ್ಲಿ ರಾಜ್ಯದಲ್ಲಿ ಬಳಸಲಾಗಿದೆ. ಇಂಪೀರಿಯಲ್ ಗೆಜೆಟಿಯರ್ ಪ್ರಕಾರ ಆದಿವಾಸಿಗಳೆಂದರೆ ಅನೇಕ ಕುಟುಂಬಗಳ ಒಕ್ಕೂಟವಾಗಿದ್ದು, ಒಂದೇ ಹೆಸರನ್ನು ಹೊಂದಿದ್ದು, ಒಂದೇ ಭಾಷೆಯನ್ನಾಡುತ್ತಾ ನಿರ್ದಿಷ್ಟ ಭೂ ಪ್ರದೇಶದಲ್ಲಿ ವಾಸಿಸುತ್ತಾ ಮತ್ತು ಮೂಲತಃ ಒಳ ಬಾಂಧವ್ಯ ವಿವಾಹವನ್ನು ಹೊಂದಿರುವವರು ಎಂದು ಅರ್ಥೈಸಲಾಗಿದೆ. ಭಾರತ ಸಂವಿಧಾನದ 342ನೇ ವಿಧಿಯನ್ವಯ ರಾಷ್ಟ್ರಾಧ್ಯಕ್ಷರಿಂದ ನಿರ್ಧರಿಸಲ್ಪಟ್ಟ ಜಾತಿಗಳ ಸಮುದಾಯವನ್ನೇ 'ಬುಡಕಟ್ಟು ಸಮುದಾಯ' ಎಂದು ವ್ಯಾಖ್ಯಾನಿಸಾಗಿದೆ. ಒಟ್ಟಾರೆ ಹೇಳುವುದಾದರೆ, ನಾಗರಿಕತೆಯಿಂದ ದೂರ ಉಳಿದ ನಿಸರ್ಗದ ಮಡಿಲಲ್ಲಿರುವ ಆದಿವಾಸಿ ಸಮುದಾಯಗಳನ್ನು ಸಮಾಜದ ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟುಗಳೆಂದು ಶಾಸ್ತ್ರೀಯವಾಗಿ ವ್ಯಾಖ್ಯಾನಿಸಬಹುದು.

**ಉದ್ದೇಶಗಳು**

1. ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಿರುವ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಯೋಜನೆಗಳನ್ನು ತಿಳಿಯುವುದು.

**ಸಂಶೋಧನಾ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಮಾಧ್ಯಮಿಕ ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಮಾಹಿತಿಯನ್ನು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಮಹರ್ಷಿ ವಾಲ್ಮಿಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆ ಮುಂತಾದ ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಳಿಂದ ಸಂಗ್ರಹಿಸಿಕೊಳ್ಳಲಾಗಿದೆ.

**ವಿಷಯ ಮಂಡನೆ**

ಕರ್ನಾಟಕದಲ್ಲಿ ಸುಮಾರು 50 ಬುಡಕಟ್ಟುಗಳನ್ನು ಅನುಸೂಚಿತ ಬುಡಕಟ್ಟುಗಳ ಪಟ್ಟಿಗೆ ಸೇರಿಸಲಾಗಿದೆ. ಈ ಬುಡಕಟ್ಟು ಸಮುದಾಯಗಳಲ್ಲಿ ಪ್ರಮುಖವಾಗಿ ಸೋಲಿಗರು, ಜೇನುಕುರುಬರು, ಕಾಡುಕುರುಬರು, ಯರವ, ಮೇದ, ವಾಲ್ಮೀಕಿ, ಬೇಡ, ನಾಯಕ, ಹಸಲರು, ಹಕ್ಕಿಪಿಕ್ಕಿಗಳು ಮುಂತಾದವರನ್ನು ಕಾಣಬಹುದು. 2001ರ ಜನಗಣತಿ ಪ್ರಕಾರ ಕರ್ನಾಟಕದ ಸಾಕ್ಷರತೆ ಶೇಕಡಾ 66.64ರಷ್ಟಿದ್ದರೆ ಇದರಲ್ಲಿ ಬುಡಕಟ್ಟು ಸಮುದಾಯದ ಸಾಕ್ಷರತೆಯು ಶೇಕಡ 48.3ರಷ್ಟಿದೆ. ಹಾಗೆಯೇ 2011ರ ಜನಗಣತಿ ಪ್ರಕಾರ ಕರ್ನಾಟಕದ ಸಾಮಾನ್ಯ ಜನಸಂಖ್ಯೆಯ ಸಾಕ್ಷರತೆಯು 75.30ರಷ್ಟಿದ್ದರೆ ಬುಡಕಟ್ಟು ಸಾಕ್ಷರತೆಯು ಶೇಕಡ 62.1ರಷ್ಟು ಇದ್ದು ಸಾಮಾನ್ಯ ಜನಸಂಖ್ಯೆಗೆ ಹೋಲಿಸಿದಾಗ ಬುಡಕಟ್ಟು ಸಾಕ್ಷರತೆಯು ಕಡಿಮೆ ಇದೆ.

ಈ ಸಮುದಾಯಗಳ ಅಭಿವೃದ್ಧಿಗಾಗಿ ಭಾರತ ಸಂವಿಧಾನದ ಆಶಯದಂತೆ ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಸರ್ವತೋಮುಖ ಅಭಿವೃದ್ಧಿಗಾಗಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯು ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದೆ. ಪರಿಶಿಷ್ಟ ವರ್ಗಗಳ ಆರ್ಥಿಕ ಸಬಲೀಕರಣಕ್ಕಾಗಿ ಪರಿಶಿಷ್ಟ ವರ್ಗಗಳ ಮಹರ್ಷಿ ವಾಲ್ಮೀಕಿ ಅಭಿವೃದ್ಧಿ ನಿಗಮವು ಅನೇಕ ಯೋಜನೆಗಳನ್ನು ಜಾರಿಗೊಳಿಸುತ್ತಿದೆ. ಅವುಗಳಲ್ಲಿ ಪ್ರಮುಖವಾಗಿ ಸ್ವಯಂ ಉದ್ಯೋಗ ಯೋಜನೆ, ಉದ್ಯಮಶೀಲತೆ ಯೋಜನೆ, ಕಿರುಸಾಲ, ಭೂ ಒಡೆತನ, ನೀರಾವರಿ ಯೋಜನೆ ಮುಂತಾದವುಗಳನ್ನು ಕಾಲಕಾಲಕ್ಕೆ ಜಾರಿಗೊಳಿಸುತ್ತಿದೆ. ಕರ್ನಾಟಕದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಬುಡಕಟ್ಟು ಸಂಶೋಧನಾ ಸಂಸ್ಥೆ ಮೈಸೂರು ಕುಲಶಾಸ್ತ್ರೀಯ ಅಧ್ಯಯನ, ಸಂಶೋಧನೆ, ತರಬೇತಿ, ವಿಚಾರ ಸಂಕಿರಣ, ಬುಡಕಟ್ಟು ಸಾಕ್ಷ್ಯಚಿತ್ರ, ಉತ್ಸವಗಳು, ಆರೋಗ್ಯ ಶಿಬಿರಗಳು, ಬುಡಕಟ್ಟು ಸಂಗ್ರಹಾಲಯ, ಪುಸ್ತಕ ಪ್ರಕಟಣೆಗಳ ಮೂಲಕ ಈ ಸಮುದಾಯಗಳ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿವೆ. ಸರ್ಕಾರದ ಅಧೀನ ಸಂಸ್ಥೆಗಳಾದ ಲ್ಯಾಂಪ್ಸ್ ಭಾರತದ

ಗಿರಿಜನ ಸಹಕಾರ ಮರುಕಟ್ಟೆ ಅಭಿವೃದ್ಧಿ ಒಕ್ಕೂಟ, ಬುಡಕಟ್ಟು ಹಣಕಾಸು ಅಭಿವೃದ್ಧಿ ಸಂಸ್ಥೆ, ಕರ್ನಾಟಕದ ಪ್ರಮುಖ ಆಯ್ದ ಸರ್ಕಾರೇತರ ಸಂಘ ಸಂಸ್ಥೆಗಳಾದ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಡೀಡ್ ಇತರೆ ಸಂಘ ಸಂಸ್ಥೆಗಳು ಸಹ ಇವರ ಅಭಿವೃದ್ಧಿಗೆ ಸಹಕರಿಸುತ್ತಿವೆ.

## ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರಮುಖ ಯೋಜನೆಗಳು

### ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ

1994–95ರಲ್ಲಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀಯುತ. ಹೆಚ್.ಡಿ.ದೇವೇಗೌಡರವರು ಪರಿಶಿಷ್ಟ ವರ್ಗಗಳ ಅಭಿವೃದ್ದಿಗಾಗಿ ಸಮಾಜ ಕಲ್ಯಾಣ ಇಲಾಖೆಯಿಂದ , ಪ್ರತ್ಯೇಕಿಸಿ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯವನ್ನು ಸ್ಥಾಪಿಸಲು ಆದೇಶ ನೀಡಿದ್ದರು. ಈ ನಿರ್ದೇಶನಾಲಯದ ಸಂಘಟನೆಯ ಸ್ವರೂಪ ಮತ್ತು ಸಿಬ್ಬಂದಿ ವರ್ಗವನ್ನು ನೋಡುವುದಾದರೆ, ಬುಟಕಟ್ಟು ಕಲ್ಯಾಣ ನಿರ್ದೇಶನಾಲಯಕ್ಕೆ ಒಬ್ಬ ನಿರ್ದೇಶಕರು, ಜಂಟಿ ನಿರ್ದೇಶಕರು, ಉಪನಿರ್ದೇಶಕರು, ಸಹಾಯಕ ನಿರ್ದೇಶಕರು, ಸಂಶೋಧನಾಧಿಕಾರಿ, ಒಬ್ಬ ಲೆಕ್ಕಾಧಿಕಾರಿ ಕಾರ್ಯ ನಿರ್ವಹಿಸುತ್ತಾರೆ. ಸಂಶೋಧನಾ ಅಧಿಕಾರಿಯ ಕೆಳ ಹಂತದಲ್ಲಿ 'ಸಿ' ಮತ್ತು 'ಡಿ' ವೃಂದದ ಕೆಲಸಗಾರರು, ವಿಷಯ ನಿರ್ವಾಹಕರು, ಬೆರಳಚ್ಚುಗಾರರು, ಚಾಲಕರು ಕಾರ್ಯನಿರ್ವಹಿಸುತ್ತಿದ್ದಾರೆ.

ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಮೂಲಕ ಜನರಿಗೆ ಶೀಘ್ರವಾಗಿ ಯೋಜನೆಗಳನ್ನು ತಲುಪಿಸುವುದಕ್ಕಾಗಿ ಆಡಳಿತ ವ್ಯವಸ್ಥೆಯನ್ನು ರಾಜ್ಯ ಮಟ್ಟದ ಇಲಾಖೆ, ಜಿಲ್ಲಾ ಮಟ್ಟದ ಇಲಾಖೆ ಮತ್ತು ತಾಲೂಕು ಮಟ್ಟ ಇಲಾಖೆ ಎಂದು ಮೂರು ಹಂತಗಳಲ್ಲಿ ವರ್ಗೀಕರಿಸಲಾಯಿತು.

ಕೇಂದ್ರ ಸರ್ಕಾರವು ಬುಡಕಟ್ಟು ಸಮುದಾಯದ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ರೂಪಿಸುತ್ತಿದೆ. ಅವುಗಳಲ್ಲಿ ವಿದ್ಯಾರ್ಥಿ ನಿಲಯ ಹಾಗೂ ಆಶ್ರಮ ಶಾಲೆಗಳ ಕಟ್ಟಡಗಳ ನಿರ್ಮಾಣ, ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ, ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು, ಸಂಶೋಧನೆ ಮತ್ತು ತರಬೇತಿ, ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಪ್ರಮುಖವಾದವುಗಳಾಗಿವೆ.

ಕೇಂದ್ರ ಸರ್ಕಾರದಂತೆ ರಾಜ್ಯ ಸರ್ಕಾರವು ಕೂಡ ಹಲವಾರು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದೆ. ಅವುಗಳೆಂದರೆ ಮೊರಾರ್ಜಿ ದೇಸಾಯಿ/ ಕಿತ್ತೂರು ರಾಣಿ ಚೆನ್ನಮ್ಮ / ಏಕಲವ್ಯ ಮಾದರಿ ವಸತಿ ಶಾಲೆ, ಹೊಸ ವಿದ್ಯಾರ್ಥಿನಿಲಯಗಳ ಪ್ರಾರಂಭ, ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಗುಣಮಟ್ಟದ ಉನ್ನತೀಕರಣ ವಿದ್ಯಾರ್ಥಿ ನಿಲಯ, ವಿದ್ಯಾರ್ಥಿ ವೇತನ ಮುಂತಾದ ಶೈಕ್ಷಣಿಕ ಸೌಲಭ್ಯಗಳ ಜೊತೆಗೆ ಆರ್ಥಿಕಾಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

### ಕರ್ನಾಟಕದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಆಯ್ದ ಸರ್ಕಾರೇತರ ಸಂಘ ಸಂಸ್ಥೆಗಳ ಕೊಡುಗೆಗಳು

ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಅವರ ಮೂಲಭೂತ ಸೌಕರ್ಯಗಳು ಹಾಗೂ ಸಮಸ್ಯೆಗಳನ್ನು ಗುರುತಿಸುವಲ್ಲಿ ಸರ್ಕಾರದ ಜೊತೆ ಸಂಘ–ಸಂಸ್ಥೆಗಳ ಪಾತ್ರವು ಅನನ್ಯವಾಗಿದೆ. ಸರ್ಕಾರ ಮತ್ತು ಸಂಘ ಸಂಸ್ಥೆಗಳು ಶಿಕ್ಷಣ, ಆರೋಗ್ಯ, ಬುಡಕಟ್ಟು ಜೀವನೋಪಾಯಕ್ಕಾಗಿ ಅವಶ್ಯಕತೆ ಪೂರೈಸುವುದರ ಜೊತೆಗೆ ಸಮಗ್ರ ಕಲ್ಯಾಣ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಅರಿವು ಮೂಡಿಸಿ, ಸಾಮಾಜಿಕ ಮತ್ತು ಅಭಿವೃದ್ಧಿ ಬೆಳವಣಿಗೆಗೆ ಶ್ರಮಿಸುವುದರ ಮೂಲಕ ಸರ್ಕಾರದ ಸವಲತ್ತುಗಳ ಬಗ್ಗೆ ಜಾಗೃತಿ ಮೂಡಿಸಿ ಬುಡಕಟ್ಟು ಸಮುದಾಯಗಳನ್ನು ಸರ್ವತೋಮುಖ ಅಭಿವೃದ್ಧಿಯ ಗುರಿ ಸಾಧಿಸುವಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ ಪ್ರಮುಖವಾಗಿದೆ.

ಬುಡಕಟ್ಟು ಸಮುದಾಯಗಳಿಗೆ ಪೌಷ್ಟಿಕ ಆಹಾರ ಪೂರೈಕೆ, ವಸತಿ, ಕುಡಿಯುವ ನೀರು, ರಸ್ತೆ ನಿರ್ಮಾಣ, ವಿದ್ಯುತ್ ಸಂಪರ್ಕ ಸೌಲಭ್ಯಗಳನ್ನು ಪೂರೈಸಿ, ಸರ್ಕಾರದಿಂದ ಅನುಷ್ಠಾನಗೊಳ್ಳುವ ಯೋಜನೆಗಳು, ಕಲ್ಯಾಣ ಕಾರ್ಯಕ್ರಮಗಳನ್ನು ಬುಡಕಟ್ಟು ಸಮುದಾಯಗಳಿಗೆ ತಲುಪಿಸುವ ಮೂಲಕ ಈ ಸಮುದಾಯಗಳು ಸ್ವಾಭಿಮಾನದಿಂದ ಜೀವನ ನಡೆಸಲು ಹಾಗೂ ಕೃಷಿ, ಕೃಷಿಯೇತರ ಚಟುವಟಿಕೆಗಳಾದ ಕಾಡಿನಲ್ಲಿ ಸಿಗುವ ಉತ್ಪಾದನೆಗಳಾದ ಜೇನು ಸಾಗಾಣಿಕೆ ಹಾಗೂ ಅರಣ್ಯ ಉತ್ಪನ್ನಗಳನ್ನು ವೈಜ್ಞಾನಿಕವಾಗಿ ಸಂಗ್ರಹಿಸಿ, ಈ ಉತ್ಪನ್ನಗಳಿಗೆ ಮಾರುಕಟ್ಟೆ ಸಂಪರ್ಕ ಕಲ್ಪಿಸಿಕೊಡುವುದರಲ್ಲಿ ಸ್ವಯಂ ಸಂಸ್ಥೆಗಳು ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿವೆ. ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಡೀಡ್, ಐಐಎಂಆರ್‌ಡಿ–ಮೈಸೂರು, ಸ್ವಾಮಿ ವಿವೇಕಾನಂದ ಯೂತ್‌ಮೂವ್‌ಮೆಂಟ್, ನಿಸರ್ಗ, ಬುಡಕಟ್ಟು ಕೃಷಿಕರ ಸಂಘ ಮುಂತಾದ ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟು ಸಮುದಾಯದ ನಡುವೆ ಕಾರ್ಯ ನಿರ್ವಹಿಸುತ್ತಿವೆ.

**ಸಮಾರೋಪ**

ಕರ್ನಾಟಕ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳ ಪ್ರಮುಖ ಯೋಜನೆಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಪ್ರಮುಖ ಯೋಜನೆಗಳ ಅನುಷ್ಠಾನಗಳಲ್ಲಿರುವ ತೊಡಕುಗಳು, ಸವಾಲುಗಳು ಹಾಗೂ ಪರಿಹಾರೋಪಾಯಗಳನ್ನು ಗುರ್ತಿಸಿಕೊಳ್ಳಲಾಗಿದೆ. ರಾಜ್ಯ ಮತ್ತು ಸ್ಥಳೀಯ ಸರ್ಕಾರಗಳ ಯೋಜನೆಗಳು ಹಾಗೂ ಅವುಗಳ ಪರಿಮಾಣಾತ್ಮಕ ಅನುಷ್ಠಾನಗಳ ಬಗೆಗೆ ಈ ಅಧ್ಯಯನವು ಸಹಾಯಕವಾಗಿದೆ. ಪರಿಶಿಷ್ಟ ವರ್ಗಗಳ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿರುವ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗಳ ಸ್ಥಾಪನೆ ಹಾಗೂ ಹಿನ್ನೆಲೆಗಳನ್ನು ಅವಲೋಕಿಸಲಾಗಿದೆ. ಅಲ್ಲದೆ ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಗಳ ಕಾರ್ಯವೈಖರಿ, ಅನುಷ್ಠಾನಗೊಳಿಸಿ ಮೇಲ್ವಿಚಾರಣೆ ನಿರ್ವಹಿಸುವ ಯೋಜನೆಗಳನ್ನು ಅಭಿವೃದ್ಧಿ ಮಾಪಕದಲ್ಲಿ ಅಧ್ಯಯನ ಮಾಡಲಾಗಿದೆ. ಬುಡಕಟ್ಟು ಸಮುದಾಯಗಳ ಅಸ್ಮಿತೆ ಹಾಗೂ ಸಾಂಸ್ಕೃತಿಕ ಉಳಿವಿಗಾಗಿ ಸ್ಥಾಪನೆಗೊಂಡಿರುವ ಮೈಸೂರಿನ ಬುಡಕಟ್ಟು ಸಂಶೋಧನಾ ಸಂಸ್ಥೆ ನಿರ್ವಹಿಸುವ ಸಂಶೋಧನಾ ಕಾರ್ಯಕ್ರಮಗಳನ್ನು ಮತ್ತು ಬುಡಕಟ್ಟು ಸಮುದಾಯಗಳ ಅಸ್ಥಿತ್ವ ಹಾಗೂ ಉಳಿಯುವಿಗಾಗಿ ಅಗತ್ಯವಾದ ಅಭಿವೃದ್ಧಿಗೆ ಪೂರಕವಾದಕಾರ್ಯಕ್ರಮಗಳನ್ನು ವಿಮರ್ಶಿಸಲಾಗಿದೆ.

**ಪರಾಮರ್ಶನ ಗ್ರಂಥಗಳು**


- ಚಂದ್ರ ಪೂಜಾರಿ. (2010). *ಕರ್ನಾಟಕದ ಪಂಚವಾರ್ಷಿಕ ಯೋಜನೆಗಳು.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.
- ಲಕ್ಕಪ್ಪಗೌಡ, ಹೆಚ್. ಬಿ. (1998). *ಕರ್ನಾಟಕ ಬುಡಕಟ್ಟುಗಳು–ಸಂಪುಟ 1.* ಸತ್ಯ ಶ್ರೀ ಪ್ರಿಂಟರ್ಸ್.
- ಮಧು ಗುಂಡ್ಲುಪೇಟೆ. (2002). *ಕರ್ನಾಟಕದ ಬುಡಕಟ್ಟು ಜನಾಂಗಗಳ ಅಭಿವೃದ್ಧಿ.* ಅಕ್ಷತ ಪ್ರಕಾಶನ.
- *ಪರಿಶಿಷ್ಟ ಪಂಗಡಗಳ ಸರ್ವತೋಮುಖ ಅಭಿವೃದ್ಧಿ ಸರ್ಕಾರ ಯೋಜನೆಗಳು ಹಾಗೂ ಕಾರ್ಯಕ್ರಮಗಳ ಕೈಪಿಡಿ–2016–17.* ಕರ್ನಾಟಕ ರಾಜ್ಯ ಬುಡಕಟ್ಟು ಸಹಕಾರ ಸಂಸ್ಥೆ.
- ಪರಿಶಿಷ್ಟ ವರ್ಗಗಳ ಕಲ್ಯಾಣ 2017–2018 ನೇ ಸಾಲಿನ ವಾರ್ಷಿಕ ವರದಿ.
- ರಾಮಕೃಷ್ಣ, ಆರ್. (2007). *ಕರ್ನಾಟಕದ ಬುಡಕಟ್ಟುಗಳು.* ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 116-122
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ನಲವಡಿ ಶ್ರೀಕಂಠಶಾಸ್ತ್ರೀಗಳ ಸಾಹಿತ್ಯ ರಚನೆಯ ವಿಭಿನ್ನ ನೆಲೆಗಳು

**ಸ್ವಾತಿ ಕೆ.ಎಸ್**

ಸಂಶೋಧನಾ ವಿದ್ಯಾರ್ಥಿ, ಕನ್ನಡ ಸಾಹಿತ್ಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

***Abstract:***

*ಕನ್ನಡ ರಂಗಭೂಮಿಯಲ್ಲಿ ಜನಪದ ರಂಗಭೂಮಿ, ವೃತ್ತಿರಂಗಭೂಮಿ, ಹವ್ಯಾಸಿರಂಗಭೂಮಿ ಎಂಬ ಮೂರು ಪ್ರಕಾರಗಳನ್ನು ನೋಡುತ್ತೇವೆ. ವೃತ್ತಿರಂಗಭೂಮಿ ಎಂಬ ಪರಿಕಲ್ಪನೆ ಕರ್ನಾಟಕಕ್ಕೆ ಬಂದಿದ್ದು ಮರಾಠಿಗರಿಂದ. ಇದು ಉಗಮಗೊಂಡಿದ್ದು ಉತ್ತರ ಕರ್ನಾಟಕದಲ್ಲಿ, ಮರಾಠಿ ವೃತ್ತಿಕಂಪನಿಗಳು ಉತ್ತರಕರ್ನಾಟಕವನ್ನು ಪ್ರವೇಶಿಸಿ ಎಲ್ಲೆಲ್ಲೂ ಮರಾಠಿ ಎನ್ನುವಂತೆ ಮಾಡಿದರು ಇವರ ಹಾವಳಿಯನ್ನು ತಪ್ಪಿಸುವ ಸಲುವಾಗಿ ಶಾಂತಕವಿಗಳು ಕರಾವಳಿ ಯಕ್ಷಗಾನದ ನಡೆಯಲ್ಲಿಯೇ 'ಉಷಾಹರಣ' ಎಂಬ ವೃತ್ತಿನಾಟಕವನ್ನು ರಚಿಸಿ ಕಂಪನಿಯನ್ನು ಸ್ಥಾಪಿಸಿ ವೃತ್ತಿರಂಭೂಮಿಗೆ ಚಾಲನೆ ನೀಡಿದರು. ಇವರ ಹಾದಿಯಲ್ಲಿಯೇ ಹಲವಾರು ನಾಟಕಕಾರರು ಹುಟ್ಟಿಕೊಂಡರು, ಅವರಲ್ಲಿ ಉತ್ತರ ಕರ್ನಾಟಕದ ನಲವಡಿ ಶ್ರೀಕಂಠಶಾಸ್ತ್ರಿಗಳು ಕೂಡ ಒಬ್ಬರು. ಪ್ರಸ್ತುತ ಲೇಖನದಲ್ಲಿ ಇವರ ಸಾಹಿತ್ಯ ರಚನೆಯ ವಿಭಿನ್ನ ನೆಲಗಳನ್ನು ಕುರಿತು ಚರ್ಚಿಸಲಾಗಿದೆ.*

***Keywords:*** *ಜನಪದ ರಂಗಭೂಮಿ, ಹವ್ಯಾಸಿರಂಗಭೂಮಿ, ವೃತ್ತಿರಂಗಭೂಮಿ, ನಲವಡಿ ಶ್ರೀಕಂಠಶಾಸ್ತ್ರಿ, ಅಹಿರಾವಣ–ಮಹಿರಾವಣ.*

**ಪೀಠಿಕೆ**

ಕನ್ನಡ ರಂಗಭೂಮಿಯಲ್ಲಿ ಮೂರು ಪ್ರಕಾರಗಳನ್ನು ಕಾಣುತ್ತೇವೆ. ಅವುಗಳೆಂದರೆ ಜನಪದ ರಂಗಭೂಮಿ, ವೃತ್ತಿರಂಗಭೂಮಿ, ಹವ್ಯಾಸಿ ರಂಗಭೂಮಿ. ನಲವಡಿ ಶ್ರೀಕಂಠಶಾಸ್ತ್ರೀಗಳು ಕಂಡುಬರುವುದು ವೃತ್ತಿರಂಗಭೂಮಿ ಪ್ರಕಾರದಲ್ಲಿ. ವೃತ್ತಿರಂಗಭೂಮಿ ಎಂಬ ಪರಿಕಲ್ಪನೆ ಕರ್ನಾಟಕಕ್ಕೆ ಬಂದಿದ್ದು ಮರಾಠಿಗರಿಂದ ಎನ್ನುವಂತಹದ್ದನ್ನು ಕೆಲವು ಅಧ್ಯಯನಗಳು ನಿರೂಪಿಸಿವೆ. ಕನ್ನಡ ವೃತ್ತಿರಂಗಭೂಮಿ ಉಗಮಗೊಂಡಿದ್ದು ಉತ್ತರಕರ್ನಾಟಕದಲ್ಲಿ, ಕಾರಣ ಮರಾಠಿ ವೃತ್ತಿಕಂಪನಿಗಳು ಉತ್ತರಕರ್ನಾಟಕವನ್ನು ಪ್ರವೇಶಿಸಿ ಎಲ್ಲೆಲ್ಲೂ ಮರಾಠಿ ಎನ್ನುವಂತೆ ಮಾಡಿದರು ಇವರ ಹಾವಳಿ ಕುರಿತು ಶಾಂತಕವಿಗಳು ಹೀಗೆ ಹೇಳಿದ್ದಾರೆ.

> ***"ಎಲ್ಲಿ ನೋಡಲು ಮರಾಟಿಯರ ನಾಟಕ ಕೀರ್ತಿ।***
> ***ಎಲ್ಲಿ ನೋಡಲು ಮರಾಟಿಯರ ನಾಟಕದರ್ಥಿ।***
> ***ಎಲ್ಲಿ ನೋಡಲು ಮರಾಟಿಯರ ನಾಟಕ ನಟರ ಮೂರ್ತಿಗಳ ಸಂಚಾರವು।***
> ***ಎಲ್ಲಿ ನೋಡಲು ಮರಾಟಿಯರ ನಾಟಕದಾಟ।***
> ***ಎಲ್ಲಿ ನೋಡಲು ಮರಾಟಿಯರ ನಾಟಕದೂಟ***
> ***ಎಲ್ಲಿ ನೋಡಲು ಮರಾಟಿಯರ ನಾಟಕಮಯಂ ತಾನಾಯ್ತು ಕರ್ನಾಟಕಂ।"*** [1]

***Please cite this article as:*** ಸ್ವಾತಿ ಕೆ.ಎಸ್. (2024). ನಲವಡಿ ಶ್ರೀಕಂಠಶಾಸ್ತ್ರೀಗಳ ಸಾಹಿತ್ಯ ರಚನೆಯ ವಿಭಿನ್ನ ನೆಲೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 3(2), 116–122

ಹೀಗೆ ಮರಾಠಿಗರ ಹಾವಳಿಯಿಂದಾಗಿ ಕನ್ನಡ ನಾಡು ನುಡಿಗೆ ಪೆಟ್ಟು ಬೀಳುವಂತಾಯಿತು. ಇವರ ಹಾವಳಿಯನ್ನು ತಪ್ಪಿಸುವ ಸಲುವಾಗಿ ಶಾಂತಕವಿಗಳು ಕರಾವಳಿ ಯಕ್ಷಗಾನದ ನಡೆಯಲ್ಲಿಯೇ 'ಉಷಾಹರಣ' ಎಂಬ ವೃತ್ತಿನಾಟಕವನ್ನು ರಚಿಸಿ 1877ರಲ್ಲಿ ಕಂಪನಿಯನ್ನು ಸ್ಥಾಪಿಸಿ ವೃತ್ತಿರಂಭೂಮಿಗೆ ಚಾಲನೆ ನೀಡಿದರು. ಇವರ ಹಾದಿಯಲ್ಲಿಯೇ ಹಲವಾರು ನಾಟಕಕಾರರು ಹುಟ್ಟಿಕೊಂಡರು, ಅವರಲ್ಲಿ ಉತ್ತರ ಕರ್ನಾಟಕದ ನಾಟಕಕಾರರಾದ ಗರುಡ ಸದಾಶಿವರಾಯರು, ವಾಮನರಾವ್ ಮಾಸ್ತರ, ನಾರಾಯಣರಾವ್ ಹುಯಿಲಗೋಳ, ಕಂದಗಲ್ಲ ಹನುಮಂತರಾಯರು, ಚಿತ್ತರಗಿ ಗಂಗಾಧರಶಾಸ್ತ್ರೀ, ಎಚ್.ಟಿ. ಮಹಾಂತೇಶಶಾಸ್ತ್ರೀ ಮುಂತಾದ ನಾಟಕಕಾರರ ಸಾಲಿನಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳ ಹೆಸರು ಉಲ್ಲೇಖವಾಗುತ್ತದೆ. ಉತ್ತರ ಕರ್ನಾಟಕದ ವೃತ್ತಿರಂಗಭೂಮಿಗೆ ನಾಟಕ ರಚನೆಯ ಮೂಲಕ ಕೊಡುಗೆ ಕೊಟ್ಟವರಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳು ಒಬ್ಬರು. ಇವರ ರಚನೆಯನ್ನು ಕೇವಲ ವೃತ್ತಿರಂಗಭೂಮಿಗೆ ಸೀಮಿತಗೊಳಿಸದೆ, ಅವರೊಬ್ಬ ವೃತ್ತಿರಂಗಭೂಮಿಯ ನಾಟಕಕಾರರು ಎಂದು ಗುರುತಿಸುವುದರೊಂದಿಗೆ ಅವರನ್ನು ಕೀರ್ತನಕಾರರು, ಕವಿಗಳು, ಬಯಲಾಟ ರಚನಕಾರರು, ರಂಗಗೀತೆಗಳ ರಚನಕಾರರು ಹೀಗೆ ಮುಂತಾದ ನೆಲೆಗಳಲ್ಲಿ ಇವರ ಸಾಹಿತ್ಯ ರಚನೆಯನ್ನು ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

**ಕೀರ್ತನ ರಚನೆಯ ನೆಲೆ**

ನಲವಡಿ ಶ್ರೀಕಂಠಶಾಸ್ತ್ರೀಗಳನ್ನು ಕೀರ್ತನಾಕಾರರು ಎಂದು ಇಲ್ಲಿ ಗುರುತಿಸಿಲಾಗಿದೆ. ವೃತ್ತಿರಂಗಭೂಮಿಗೆ ಬರುವ ಪೂರ್ವದಲ್ಲಿ ಇವರ ವೃತ್ತಿಯು ಕೀರ್ತನೆಗಳನ್ನು ಹಾಡುವುದಾಗಿತ್ತು. ಇವರ ಸಮಕಾಲೀನ ಪರಿಸರವು ಇವರನ್ನು ವೃತ್ತಿರಂಗಭೂಮಿಗೆ ಹೊರಳುವಂತೆ ಮಾಡಿದೆ. ಶಾಸ್ತ್ರ–ಸಂಗೀತದ ಬಗ್ಗೆ ಜ್ಞಾನ ಹೊಂದಿದ್ದ ಶಾಸ್ತ್ರೀಗಳು ಹಳಗನ್ನಡ ಕಾವ್ಯಗಳನ್ನು ರಾಗಬದ್ಧವಾಗಿ ಹಾಡುವ ಕಲೆಗಾರಿಕೆಯನ್ನು ಕಲಿತಿದ್ದರು. "ಧಾರ್ಮಿಕ ವಿಷಯಕ್ಕೆ ಸೀಮಿತವಾಗಿದ್ದ ಕೀರ್ತನ ವೇದಿಕೆಯನ್ನು ಸಾಮಾಜಿಕ–ರಾಷ್ಟ್ರೀಯ ವಿಷಯ–ವಿಚಾರಗಳಿಗೆ ಬಳಸಿ ಹಳ್ಳಿಗಳಲ್ಲಿ ಜಾಗೃತಿಯನ್ನು ಉಂಟು ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ."[2] ಇದು ಇವರ ಕೀರ್ತನ ವೈಶಿಷ್ಟ್ಯವಾಗಿದೆ. ಕೀರ್ತನೆಯನ್ನು ಒಂದು ಕಲೆಯನ್ನಾಗಿ ಬೆಳೆಸಬೇಕೆಂಬ ತಾತ್ವಿಕ ಚಿಂತನೆಯಿಂದ ಶಾಸ್ತ್ರೀಗಳು 'ಕೀರ್ತನ ತರಂಗಿಣಿ' ಎಂಬ ಕೃತಿಯನ್ನು ರಚಿಸಿರುವುದನ್ನು ಕಾಣುತ್ತೇವೆ. ಶ್ರೀಕಂಠಶಾಸ್ತ್ರೀಗಳು ತಿಳಿಸುವಂತೆ "ಉಪದೇಶ ಪೀಠದಲ್ಲಿ ನಿಂತು ಕೀರ್ತನ ಮಾಡುತ್ತಿರುವ ಕೀರ್ತನ ವೃತ್ತಿಗೂ, ಹೊಸದಾಗಿ ಕೀರ್ತನ ಮಾಡಬೇಕೆಂಬ ತರುಣರಿಗೂ ಈ ಪುಸ್ತಕವು ಅತ್ಯುಪಯುಕ್ತವಾಗಿದೆ. ಈ ಬಗೆಯ ಕೀರ್ತನೆಗಳನ್ನು ಉತ್ತರ ಕರ್ನಾಟಕದಲ್ಲಿ ಈವರೆಗೆ ಯಾರು ಬರೆದಿಲ್ಲ. ನಾನೀಪ್ರಯತ್ನ ಮಾಡಿದ್ದೇನೆ."[3] ಎಂದು ಹೇಳಿಕೊಂಡಿದ್ದಾರೆ. ಇಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳ ಕೀರ್ತನೆಯ ರಚನೆಯಲ್ಲಿ ಹೊಸತನವನ್ನು ಕಾಣುತ್ತೇವೆ.

**ರಂಗಗೀತೆಗಳ ರಚನೆಯ ನೆಲೆ**

ಅಂದಿನ ಕಾಲಘಟ್ಟದಲ್ಲಿ ವೃತ್ತಿರಂಗಭೂಮಿಯಲ್ಲಿ ರಂಗಗೀತೆಗಳಿಗೆ ಹೆಚ್ಚು ಪ್ರಾಶಸ್ತ್ಯವಿತ್ತು. ಕರ್ನಾಟಕದಲ್ಲಿ ಸಂಗೀತ ಪ್ರಧಾನ ನಾಟಕ ಕಂಪನಿಗಳೇ ಹೆಚ್ಚು ಕಂಡುಬರುತ್ತವೆ. ಆದರೆ ಇಂದಿನ ರಂಗಗೀತೆಗಳಿಗೆ ಅಂದಿನ ಹೊಳಪು ಮರೆಯಾಗಿದೆ. ಹೆಚ್ಚಾಗಿ ಚಲನಚಿತ್ರಗಳೇ ಇಂದಿನ ಕಂಪನಿಗಳಲ್ಲಿ ಕಾಣಲಾಗುತ್ತದೆ. ಅಂದಿನ ಹಾಡುಗಳನ್ನು ಹಾಡಿದರೂ ಕೇಳುವ ವ್ಯವಧಾನ ಪ್ರೇಕ್ಷಕರಲ್ಲಿಲ್ಲ. ಈ ನಿಟ್ಟಿನಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳ ಹಾಡುಗಳು ಅಂದಿನ ಕಾಲದಲ್ಲಿ ಜನಮನ್ನಣೆ ಪಡೆದಿತ್ತು. ಇವರ ರಂಗಗೀತೆಗಳಿಗೆ ಕವಿತಾ ರಚನೆಯ ಶಕ್ತಿಯನ್ನು ಇಲ್ಲಿ ವಿಶ್ಲೇಷಿಸಿಸಲಾಗಿದೆ. ಹೊಸ ಹಾಡುಗಳಿಗಾಗಿ ಇವರನ್ನು ಹುಡುಕಿಕೊಂಡು ಬರುತ್ತಿದ್ದರಂತೆ. ಯಾವ ಸ್ಥಳದಲ್ಲಿ ಕಂಡರೂ ಕೇಳಿದಾಕ್ಷಣ ಹಾಡು ಕಟ್ಟಿ ಕೊಡುತ್ತಿದ್ದರಂತೆ. ಹಾಗೆಯೇ ಕಂದಗಲ್ಲು

ಹನುಮಂತರಾಯರ ನಾಟಕಗಳಿಗೆ ಹೊಸ ಹಾಡುಗಳನ್ನು ಬರೆದಿದ್ದಾರೆ. ಇವರ ಉದ್ದಾಲಕ ಚರಿತ್ರೆ, ಶೈವಶಾಂತಿ, ಸಂತಸಂಗ, ಶಾಪ ವಿಮೋಚನೆ, ಶಾಲಿವಾಹನ ಮುಂತಾದ ನಾಟಕಗಳು ಸಂಗೀತ ಪ್ರಧಾನವಾಗಿ ರಚನೆಗೊಂಡಿರುವುದು ಕಂಡುಬರುತ್ತದೆ.

**ಬಯಲಾಟದ ರಚನೆಯ ನೆಲೆ**

ಉತ್ತರ ಕರ್ನಾಟಕದಲ್ಲಿ ಹೆಸರುವಾಸಿಯಾದ ಮೂಡಲಪಾಯ ಬಯಲಾಟವು ಇಂದಿನ ದಿನಮಾನಗಳಲ್ಲೂ ಮಹತ್ವವನ್ನು ಪಡೆದುಕೊಂಡು ಬಂದಿದೆ. ಕವಿಗಳು ಬೇರೆ–ಬೇರೆ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆ ನೆಲೆಯಲ್ಲಿಯೇ ನಾಟಕಗಳ ರಚನೆಗೆ ಸೀಮಿತಗೊಳಿಸಿಕೊಂಡು ಅವರು ಆ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುತ್ತಾರೆ. ಕೆಲವರು ಒಂದಕ್ಕೆ ಜೋತು ಬೀಳದೆ ಅಂದರೆ ಸಾಮಾಜಿಕ ನಾಟಕ ರಚನೆಗೆ, ಭಕ್ತಿ ನಾಟಕದ ರಚನೆಗೆ ಎಂದು ತಮ್ಮನ್ನು ಒಂದು ಚೌಕಟ್ಟಿನ ನೆಲೆಯಲ್ಲಿ ಗುರುತಿಸಿಕೊಳ್ಳದೆ ವಿಭಿನ್ನ ರಚನೆಗೆ ತೊಡಗಿಕೊಳ್ಳುತ್ತಾರೆ. ಅವರಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳನ್ನು ಸಹ ಗುರುತಿಸಬಹುದು. ನಾಟಕಕಾರರೆಂದು ಹೆಸರಾಗಿದ್ದ ಇವರನ್ನು ಬಯಲಾಟಗಳನ್ನು ಬರೆದು ಕೊಡುವಂತೆ ಜನರು ಸಾಲುಕಟ್ಟಿ ನಿಲ್ಲುತ್ತಿದ್ದುದನ್ನು ನೋಡಿದರೆ, ಇವರ ಬಯಲಾಟ ರಚನೆಯ ಸಾಮರ್ಥ್ಯವು ತಿಳಿಯುತ್ತದೆ. ಇವರು ಏಳು ಬಯಲಾಟಗಳನ್ನು ರಚಿಸಿದ್ದಾರೆ. ಅವುಗಳೆಂದರೆ 'ಅಹಿರಾವಣ–ಮಹಿರಾವಣ', 'ಇಂದ್ರಜಿತಕಾಳಗ', 'ರತಿಕಲ್ಯಾಣ', 'ಸುಗಂಧ ಪುಷ್ಪಹರಣ', 'ಹನುಮಂತನಿಗೆ ವೀರಭದ್ರ ದೇವರಿಂದ ಲಿಂಗಧಾರಣ', 'ದ್ರೌಪದಿ ವಸ್ತ್ರಾಪಹರಣ' ದಂತಹ ಬಯಲಾಟಗಳನ್ನು ರಚಿಸಿದ್ದಾರೆ.

ಶ್ರೀಕಂಠ ಶಾಸ್ತ್ರೀಗಳಿಗೆ ಬಯಲಾಟಗಳ ರಚನೆಯಲ್ಲಿ ಎಷ್ಟು ಹಿಡಿತವಿತ್ತೆಂಬುದನ್ನು ಅವರು ರಚಿಸಿದ 'ಅಹಿರಾವಣ–ಮಹಿರಾವಣ'ವನ್ನು ಒಂದೇ ರಾತ್ರಿ ಬರೆದು ಕೊಟ್ಟಿರುವುದರಿಂದ ತಿಳಿಯುತ್ತದೆ. "ನಲವಡಿಯಲ್ಲಿ ಒಂದು ದಿನ ಸಾಯಂಕಾಲ ನಾಟಕ ಪ್ರಿಯರೊಂದಿಗೆ ಶಾಸ್ತ್ರೀಗಳು ಮಾತನಾಡುತ್ತ ಕುಳಿತಿದ್ದರಂತೆ. ಆಗ ಯಾರೊ ಬಂದು ಒಬ್ಬರು ಶಾಸ್ತ್ರೀಗಳೇ ಒಂದು ನಾಟಕ ಬರಿಯಲು ಎಷ್ಟು ದಿನ ಬೇಕು? ಎಂದು ಕೇಳಿದರಂತೆ, ಅದಕ್ಕೆ ಶಾಸ್ತ್ರೀಗಳು ಒಂದು ನಾಟಕ ಬರೆಯಲು ಕಾಲದ ನಿಯಮವಿಲ್ಲ. ಒಂದು ವರ್ಷದುದ್ದಕ್ಕೂ ಬರೆಯಬಹುದು, ಅಥವಾ ಒಂದೇ ದಿನದಲ್ಲೂ ಬರೆಯಬಹುದು ಎಂದರಂತೆ. ಹಾಗಾದರೆ ಒಂದೇ ದಿನದಲ್ಲಿ ನಮಗೊಂದು ಬಯಲಾಟ ಬರೆದು ಕೊಡಿರೆಂದು ಸವಾಲು ಹಾಕಿದರಂತೆ. ಸವಾಲು ಹಾಕಿದಂತೆ ಗುಂಪಿನಲ್ಲಿ ಶಾಸ್ತ್ರೀಗಳು ಅದಕ್ಕೆ ವಿಚಲಿತರಾಗದೆ ಇದೇ ರಾತ್ರಿ ಬರೆದು ಕೊಡುವೆನೆಂದು ಒಪ್ಪಿಕೊಂಡರಂತೆ. ಶಾಸ್ತ್ರೀಗಳ ಹಿರೇಮಠದಲ್ಲಿ ಎಲ್ಲರೂ ಸೇರಿದರು. ಶಾಸ್ತ್ರೀಗಳು ನಾಟಕ ಬರೆಯಲು ಸಿದ್ಧತೆ ಮಾಡಿಕೊಂಡು ಕುಳಿತುಕೊಂಡರು. ಗುಂಪಿನವರು ಅದನ್ನು ಪರೀಕ್ಷಿಸಲು ರಾತ್ರಿ ಕಳೆಯದೇ ಪರಿತಪಿಸುತ್ತಾ, ಹರಟುತ್ತಾ ಕುಳಿತರು. ನಾಟಕ ರಚನೆಗೆ ತೊಡಗಿ ಕುಳಿತ ಶಾಸ್ತ್ರೀಗಳು ನಾಟಕ ಮುಗಿಸಿಯೇ ಮೇಲೆದ್ದರಂತೆ. ಆಗಲೇ ಬೆಳಕು ಹರಿದಿದ್ದು ತಮ್ಮ ಕಣ್ಣೆದುರಿನಲ್ಲಿಯೇ ನಾಟಕ ಬರೆದಿದ್ದನ್ನು ಕಂಡ ಸವಾಲು ಹಾಕಿದವರು ಶಾಸ್ತ್ರೀಯವರ ಅಶುನಾಟಕತ್ವಕ್ಕೆ ತಲೆಬಾಗಿದರು. ಅದರಲ್ಲೂ ಆ ಬಯಲಾಟದಲ್ಲಿ ಅಂದಿನ ಪ್ರಚಲಿತ ಸಮಸ್ಯೆಯಾಗಿದ್ದ ಸ್ವತಂತ್ರ್ಯಾಂಧೋಲನದ ಕುರಿತು ಭಾರತ–ಬ್ರಿಟಿಷರನ್ನು ಸಾಂಕೇತಿಕವಾಗಿ ಚಿತ್ರಿಸಿರುವರು."[4] ಈ ರೀತಿಯ ರಚನೆಯು ಅನ್ಯ ನಾಟಕಕಾರರಲ್ಲಿ ವಿರಳ. ಒಂದೇ ದಿನದಲ್ಲಿ ನಾಟಕ ಪ್ರತಿ ಮಾಡಿಸಲು ಅಸಾಧ್ಯವಾದ ದಿನಮಾನದಲ್ಲಿ ಶ್ರೀಕಂಠ ಶಾಸ್ತ್ರೀಗಳ ರಚನಾಶೈಲಿ, ವ್ಯವಧಾನ ಅನ್ಯ ನಾಟಕಕಾರರಿಗೆ ಸ್ಫೂರ್ತಿಯಾಗುತ್ತದೆ.

ಶ್ರೀಕಂಠಶಾಸ್ತ್ರೀಗಳು ಏಳು ಬಯಲಾಟಗಳನ್ನು ರಚನೆ ಮಾಡಿಲ್ಲ. ಅವುಗಳನ್ನು ಪ್ರಕಾಶಕರು ವ್ಯಾಪಾರದ ದೃಷ್ಟಿಯಿಂದ ಶಾಸ್ತ್ರೀಗಳ ಹೆಸರು ಹಾಕಿಸಿದ್ದಾರೆ ಎನ್ನುವ ವಾದಕ್ಕೆ ಪ್ರತ್ಯುತ್ತರವಾಗಿ ಶ್ರೀಕಂಠಶಾಸ್ತ್ರೀಗಳಿಂದ ಬರೆಯಿಸಿಕೊಂಡು

ಆಡಿದಂತವರು, ಕಣ್ಣಾರೆ ಕಂಡವರು ಇದ್ದಾರೆ. ಬಯಲಾಟದ ಹಿಂದಿನ ಕಥೆ ಹೇಳುತ್ತಾರೆ. ಬಯಲಾಟಗಳು ಇವರ ರಚನೆ ಎನ್ನುವುದಕ್ಕೆ ಪದ್ಯಗಳನ್ನು ಕೊಟ್ಟು ಅಲ್ಲಿನ ಹಾಡು, ಶೈಲಿ, ಭಾಷೆ, ಬದಲಾವಣೆಗಳ ಮೂಲಕ ಇವರೇ ಬಯಲಾಟಗಳ ರಚನಕಾರರು ಎಂದು ಸ್ಪಷ್ಟಪಡಿಸುತ್ತಾ ಇನ್ನೊಂದು ಉದಾಹರಣೆ ನೋಡುವುದಾದರೆ. "ಶ್ರೀಕಂಠ ಶಾಸ್ತ್ರೀಗಳು ಸಂಸ್ಕೃತ ಶಾಸ್ತ್ರಬಲ್ಲ ಪಂಡಿತರು. ಜನಸಾಮಾನ್ಯರ ಅಭಿನಯಕ್ಕಾಗಿ ಅವರ ಅಪೇಕ್ಷೆಗೆ ಅನುಗುಣವಾಗಿ ಬಯಲಾಟಗಳನ್ನು ಬರೆದಿರಬೇಕೆಂದು ನಿರ್ಧರಿಸಬೇಕಾಗುವುದು. ಮೂಡಲಪಾಯದ ಕೃತಿಗಳನ್ನು ರಚಿಸಿದವರು ಜಾನಪದ ಕವಿಗಳಲ್ಲ; ಚೆನ್ನಾಗಿ ಸಂಸ್ಕೃತ ಭಾಷೆಯನ್ನು ಅರಿತ ಸುಸಂಸ್ಕೃತರು. ಪೌರಾಣಿಕ ವಸ್ತುಗಳನ್ನು ಅವರು ತಮ್ಮ ಕೃತಿಯಾಗಿ ಸ್ವೀಕರಿಸುತ್ತಿದ್ದುದರಿಂದ ತಾವು ಒಪ್ಪಿದ ಅನುಪ್ರಾಸಯುಕ್ತ ಸಂಸ್ಕೃತ ಪದ ಬಹುಳತೆಯ ಭಾಷಾ ಪದ್ಧತಿಯಲ್ಲಿ ಔಚಿತ್ಯವನ್ನು ಕಂಡುಕೊಂಡರು. ತಮ್ಮ ಭಾಷಾ ರೀತಿಯ ಬಗೆಗೆ ಅವರು ಪ್ರಾಮಾಣಿಕ ಭಾವವನ್ನೇ ತಳೆದವರಾಗಿದ್ದರು."[5] ಎನ್ನುವ ಅಭಿಪ್ರಾಯ ಬಯಲಾಟಗಳನ್ನು ಶಾಸ್ತ್ರೀಗಳು ಬರೆದರೆಂಬುದನ್ನು ಸಮರ್ಥಿಸುತ್ತದೆ.

ಬಯಲಾಟದ ಸನ್ನಿವೇಶಗಳ ಮೂಲಕ ಅವುಗಳಲ್ಲಿನ ಕರುಣರಸ, ನಾಟಕದ ಸಂಭಾಷಣೆ, ಸಂಪ್ರದಾಯ ಮೂಡಿಬರುವಿಕೆ, ಸರಳ ಭಾಷೆ, ಗಾದೆಗಳು ಹೇರಳವಾಗಿದ್ದು ಅವು ಸಂದರ್ಭೋಚಿತವಾಗಿ ಬಳಕೆಗೊಂಡಿವೆ. ಹಾಗೆಯೇ ಸಹಜ ಪ್ರಾಸದಲ್ಲಿ ನೀತಿಮಾತು ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಬಯಲಾಟಗಳನ್ನು ಕಾಣಲಾಗುತ್ತದೆ. ಹಾಗೆಯೇ ಬಯಲಾಟದ ರಾಗಗಳಲ್ಲಿ. ಭೈರವಿ, ಆನಂದಭೈರವಿ, ಕೇದಾರಗೌಳ, ಕಾಂಬೋಧಿ, ಏಕತಾಳ–ರೂಪತಾಳ ಹೀಗೆ ಎಲ್ಲಾ ಬಯಲಾಟಗಳಿಗೆ ರಾಗಗಳನ್ನು ಸೂಚಿಸಿರುವುದು ಬಯಲಾಟಗಳ ಗೀತೆಗಳ ಸ್ವರೂಪ ತಿಳಿದುಕೊಳ್ಳುವ ಹಿನ್ನೆಲೆಯನ್ನು ಹೊಂದಿರುವುದು ಕಂಡುಬರುತ್ತದೆ. ಇವರ ಬಯಲಾಟಗಳಲ್ಲಿ ನಾಟಕಕಾರ ಪಾತ್ರ ಸೃಷ್ಟಿಯ ವೈಶಿಷ್ಟ್ಯತೆಯನ್ನು ಕಾಣಲಾಗುತ್ತದೆ. ಸಂಸ್ಕೃತದ ಪದ, ಪ್ರಾಸಗಳಿಂದ ಕೂಡಿದ್ದರೂ ಭಾಷಿಕವಾಗಿ ಸರಳ–ಸಹಜತೆಯನ್ನು ಬಯಲಾಟಗಳ ಲಕ್ಷಣಗಳಲ್ಲಿ ಬದಲಾವಣೆಗೊಳಿಸಿ ಹೊಸತನ ತಂದದ್ದು ನಾಟಕಕಾರರ ರಚನೆಯ ದೃಷ್ಟಿಕೋನವಾಗಿದೆ. ಈ ಬಯಲಾಟಗಳ ಶೈಲಿಯನ್ನು ಸನ್ನಿವೇಶಕ್ಕೆ ತಕ್ಕ ಭಾಷೆ, ಲಾಲಿತ್ಯದ ಶೈಲಿ, ಕಾವ್ಯಮಯ ಎಂದು ಗುರುತಿಸಲಾಗಿದೆ.

**ವೃತ್ತಿರಂಗ ನಾಟಕಗಳ ರಚನಾ ನೆಲೆ**

1940ರ ನಂತರ ವೃತ್ತಿರಂಗಭೂಮಿಯ ವೈಭವಕಾಲ ಇಳಿಮುಖದತ್ತ ಸಾಗಿತು. ಇದಕ್ಕೆ ಮಧ್ಯಮ ಹಾಗೂ ಹವ್ಯಾಸಿ ರಂಗಭೂಮಿ ಕಾರಣವೆಂದು ಗುರುತಿಸಬಹುದು. ಇವುಗಳಿಂದಾಗಿ ವೃತ್ತಿರಂಗಭೂಮಿಗೆ ಭವಿಷ್ಯವೇ ಇಲ್ಲದಂತಾಯಿತು. ಈ ಕಾಲಾವಧಿಯಲ್ಲಿಯೇ ಹಲವು ನಾಟಕ ಮಂಡಳಿಗಳು ಮುಚ್ಚಿದವು, ಕೆಲವು ದಿವಾಳಿಯಾದವು. ವೃತ್ತಿರಂಗಭೂಮಿ ಪೂರ್ಣಪ್ರಮಾಣದಲ್ಲಿ ನಶಿಸಿ ಹೋಗಬಾರದೆಂಬ ನಿಟ್ಟಿನಲ್ಲಿ ಅಳಿದುಳಿದ ಮಂಡಳಿಗಳಲ್ಲಿ ಹೊಸ ನಾಟಕಗಳನ್ನು ಬರೆಯಲು ವೃತ್ತಿನಾಟಕಕಾರರನ್ನು ಅವಲಂಬಿಸಬೇಕಾಯಿತು. ಹೊಸತನವನ್ನು ಮೈಗೂಡಿಸಿಕೊಂಡು ನಾಟಕ ರಚಿಸಬೇಕು ಎನ್ನುವ ಕಾಲಕ್ಕೆ "ಕೈಲಾಸ, ಶ್ರೀರಂಗ, ಕಾರಂತರ ಮಧ್ಯಮವರ್ಗೀಯ ನಾಟ್ಯರಂಗ ವಿರಚಿತ ಸಾಹಿತ್ಯಿಕ ನಾಟಕಗಳ ರಚನೆ ನಡೆಯಿತು. ವೃತ್ತಿರಂಗಭೂಮಿ ಮೂಲೆಗುಂಪಾಯಿತು. ಸಾಯುತ್ತಿರುವ ವೃತ್ತಿರಂಗದ ಮೇಲೆ ಹೀಗೆ ಸುಶಿಕ್ಷಿತರು ಮಾಡಿದ ದಾಳಿಯಿಂದ ಸುಕ್ಷಿತರು ಇಂಥ ನಾಟಕಗಳನ್ನು ನೋಡದಾದರು."[6] ಇದರಿಂದ ವೃತ್ತಿರಂಗಭೂಮಿ ಪುನಶ್ಚೇತನಗೊಳ್ಳಲು ಹೊಸ ನಾಟಕಕಾರರನ್ನು ಕಾಯಬೇಕಾಯಿತು. ಇಂತಹ ಸಂದರ್ಭದಲ್ಲಿ ವೃತ್ತಿರಂಗಭೂಮಿಯ ಚೇತನಕ್ಕೆ

ಕಾರಣರಾದವರು ನಲವಡಿ ಶ್ರೀಕಂಠ ಶಾಸ್ತ್ರೀಗಳು ಮತ್ತು ಕಂದಗಲ್ಲ ಹನುಮಂತರಾಯರು ಎನ್ನಲಾಗಿದೆ.

ಶ್ರೀಕಂಠಶಾಸ್ತ್ರೀಗಳ ನಾಟಕಗಳ ರಚನೆಯನ್ನು ಪೌರಾಣಿಕ, ಭಕ್ತಿರಸ ಪ್ರಧಾನ, ಸಾಮಾಜಿಕ, ರಾಜಕೀಯ ನೆಲೆಯಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ಪೌರಾಣಿಕ ನಾಟಕಗಳಲ್ಲಿ ವಸ್ತು ಪೌರಾಣಿಕವಾಗಿದ್ದರೂ ಇಂದಿನ ಸಮಕಾಲೀನ ವಿಚಾರಗಳು ಪ್ರತಿಪಾದಿತವಾಗಿವೆ. ಯಾವುದೇ ಸಾಹಿತಿಗಳು ತಮ್ಮ ರಚನೆಯಲ್ಲಿ ತನ್ನ ಸುತ್ತಮುತ್ತಲಿನ ವಾತಾವರಣವನ್ನು ಗಮನಿಸಿರುವುದರಿಂದ ಈ ಬಗೆಗಿನ ಅಭಿವ್ಯಕ್ತಿ ಆತನ ರಚನೆಯಲ್ಲಿ ಮೂಡುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀಕಂಠಶಾಸ್ತ್ರೀಗಳು ಸ್ವಾತಂತ್ರ್ಯಪೂರ್ವ ಕಾಲದಲ್ಲಿದ್ದುದರಿಂದ ಪೌರಾಣಿಕ ನಾಟಕಗಳಲ್ಲಿ ಮದ್ಯಪಾನ ವಿರೋಧ, ಸ್ವಾತಂತ್ರ್ಯ ಚಳುವಳಿಗಳನ್ನು ತಂದರು. ಇದು ಶ್ರೀಕಂಠಶಾಸ್ತ್ರೀಗಳ ರಚನಾಶೈಲಿಯಲಿಯಾಗಿದೆ. ಭಕ್ತಿರಸದ ನಾಟಕಗಳನ್ನು ಅವುಗಳ ಉದ್ದೇಶ, ಕಥಾವಸ್ತು, ಸಂವಿಧಾನ, ಪಾತ್ರಸೃಷ್ಟಿ, ಸಾಹಿತ್ಯಕಾಂಶದಿಂದ ಕಾಣಲಾಗಿದೆ. 'ಹೇಮರೆಡ್ಡಿ ಮಲ್ಲಮ್ಮ' ನಾಟಕವನ್ನು ಭಕ್ತಿಪರನೆಲೆಯಲ್ಲಿ ಕಾಣಲಾಗುತ್ತದೆ. ಇಲ್ಲಿ ಸಾಮಾಜಿಕ ಜೀವನದಲ್ಲಿ ಕಂಡುಬರುವ ವಿಧವಾ ಸಮಸ್ಯೆ, ಅಸ್ಪೃಶ್ಯತೆ, ಮದ್ಯಪಾನ, ಸ್ತ್ರೀಸ್ವಾತಂತ್ರ್ಯ, ಕೌಟುಂಬಿಕ ಸಮಸ್ಯೆ ಮುಂತಾದ ಸಾಮಾಜಿಕ ಜೀವನದ ಸಮಸ್ಯೆಗಳು ನಾಟಕಗಳಲ್ಲಿ ಪ್ರತಿಬಿಂಬಿತವಾಗಿವೆ. ಶಾಸ್ತ್ರೀಗಳು ಪ್ರತಿಯೊಂದು ಸಮಸ್ಯೆಗಳಿಗೆ ದೃಷ್ಟಾಂತಗಳ ಮೂಲಕ ಅರಿಯುವ ಪರಿಹಾರವನ್ನು ಸೂಚಿಸುತ್ತಾರೆ. ಹೀಗೆ ಇವರ ವೃತ್ತಿರಂಗ ನಾಟಕಗಳ ರಚನೆಯನ್ನು ವಿಭಿನ್ನ ನೆಲೆಯಲ್ಲಿ ನೋಡ ಬಹುದಾಗಿದೆ.

**ಭಾವಾರ್ಥಗಳ ರಚನಾ ನೆಲೆ**

ಶ್ರೀಕಂಠಶಾಸ್ತ್ರೀಗಳ ನಾಟಕಗಳಿಗೆ ಸಮವೆನ್ನುವಷ್ಟು ಇತರ ಕೃತಿಗಳನ್ನು ರಚಿಸಿದ್ದಾರೆ. ಅವುಗಳೆಂದರೆ ಭಾವಾರ್ಥಗಳ ರಚನೆಯ ನೆಲೆಯಲ್ಲಿ ಬಸವಣ್ಣನವರ ವಚನಗಳು(ಅ), ಬಸವಣ್ಣನವರ ವಚನಗಳು(ಬ), ವಚನ ಮುಕ್ತಾವಳಿ, ಅಕ್ಕಮಹಾದೇವಿಯ ವಚನಗಳು, ಪ್ರಭುದೇವರ ವಚನಗಳು, ಅಂಬಿಗರ ಚೌಡಯ್ಯನ ವಚನಗಳು, ಅಖಂಡೇಶ್ವರ ವಚನಗಳು, ವಚನ ರತ್ನಮಾಲಾ ಹಾಗೂ ಶತಕ ಸಂಸ್ಕೃತ ಶ್ಲೋಕಗಳನ್ನು ಕೂಡಿಸಿಕೊಂಡು ಭಾವಾರ್ಥಗಳನ್ನು ರಚಿಸಿದ್ದಾರೆ.

**ಸಂಪಾದನಾ ಕೃತಿಗಳ ನೆಲೆ**

ಶ್ರೀಕಂಠಶಾಸ್ತ್ರೀಗಳು ಕೈವಲ್ಯಪದ್ಧತಿ, ದೇವಿಮಹಾತ್ಮೆಯಂಥ ಕಾವ್ಯಗಳನ್ನು ಸಂಪಾದಿಸಿ, ಸರಳ ಅನುವಾದ ಮಾಡಿದ್ದಾರೆ. ಹಾಗೂ ಕೊನೆಯಲ್ಲಿ ಕಠಿಣ ಶಬ್ದಗಳಿಗೆ ಅರ್ಥ ಕೋಶವನ್ನು ನೀಡಿದ್ದಾರೆ. ಇವರ ಇತರ ಕೃತಿಗಳನ್ನು ನೋಡುವುದಾದರೆ ಪೂಜಾ–ವ್ರತಾಚರಣೆ ಕೈಪಿಡಿಗಳು, ಸಂಗ್ರಹಗಳು, ಗದ್ಯಕೃತಿಗಳು, ಸಂಕೀರ್ಣ ಕೃತಿಗಳು ಈ ನೆಲೆಗಳಲ್ಲಿ ಶ್ರೀಕಂಠಶಾಸ್ತ್ರೀಗಳ ರಚನೆಯನ್ನು ಗುರುತಿಸಲಾಗಿದೆ.

**ಶ್ರೀಕಂಠಶಾಸ್ತ್ರೀಗಳ ಹಾಡುಗಳಲ್ಲಿ ಭಿನ್ನತೆ**

ಶ್ರೀಕಂಠಶಾಸ್ತ್ರೀಗಳ ಹಾಡುಗಳಲ್ಲಿ ಭಿನ್ನತೆಯನ್ನು ತಾತ್ವಿಕ ನೆಲೆಯಲ್ಲಿ ಗುರುತಿಸಿರುವುದರಿಂದ ಬೇರೆ ನಾಟಕಕಾರರಿಗಿಂತ ಶ್ರೀಕಂಠಶಾಸ್ತ್ರೀಗಳ ರಚನೆ ವೈವಿಧ್ಯಮಯದಿಂದ ಕೂಡಿದೆ ಎನ್ನುವ ಚಿಂತನೆಯು ನಿರೂಪಿತವಾಗಿದೆ. ಶಾಸ್ತ್ರೀಗಳು ರಂಗಗೀತೆಗಳನ್ನು ಮಾತ್ರ ರಚನೆ ಮಾಡದೆ ಕರ್ಬಲಾ ಹಾಡುಗಳು, ಲಾವಣಿಗಳು, ಹೆಣ್ಣುಮಕ್ಕಳ ಹಾಡು, ಬಿಡಿ ಹಾಡುಗಳನ್ನು ರಚನೆಮಾಡಿ ರಚನೆಯಲ್ಲಿ ವೈಶಿಷ್ಟ್ಯತೆಯನ್ನು ಮೆರೆದಿದ್ದಾರೆ. ಇವರ ರಂಗಗೀತೆಗಳನ್ನು ಭಾಷಿಕವಾಗಿ, ಸಾಹಿತ್ಯಿಕವಾಗಿ ನೋಡಬಹುದು. ಇವರ ಕರ್ಬಲಾ ಹಾಡುಗಳು ಧರ್ಮಾತೀತವಾಗಿ ಹಿಂದೂ–ಮುಸಲ್ಮಾನರ ಸೌಹಾರ್ದತೆಯ ಭಾಗವಾಗಿ ಇವೆ. ಈ ಹಾಡುಗಳಲ್ಲಿ ದೇಶಾಭಿಮಾನ, ಕನ್ನಡಾಭಿಮಾನ, ಗಾಂಧೀತತ್ವ, ಸ್ವದೇಶಿ ವಸ್ತುಗಳ ಬಳಕೆ, ಹಾಗೆಯೇ ಸಮಾಜದಲ್ಲಿನ ಅನ್ಯಾಯ, ಅತ್ಯಾಚಾರ ಮುಂತಾದ ದೋಷಗಳ ಪ್ರತಿಭಟನೆಯಿದೆ. ಈ ಹಾಡುಗಳಲ್ಲಿ ಗದ್ಯತನವಿದ್ದು,

ಜಾನಪದ ಶೈಲಿ ಹೊಂದಿರುವುದು ಇವರ ರಚನೆಯ ವೈಶಿಷ್ಟ್ಯವಾಗಿದೆ.

ಲಾವಣಿಗಳಲ್ಲಿ ಬಯಲು ಹಾಗೂ ಮೇಳ ಲಾವಣಿಗಳನ್ನು ನಲವಡಿ ಶ್ರೀಕಂಠಶಾಸ್ತ್ರೀಗಳು ರಚಿಸಿರುವುದನ್ನು ಗುರುತಿಸಲಾಗಿದೆ. ಇಲ್ಲಿ ಐತಿಹಾಸಿಕ ಲಾವಣಿಗಳಾದಂತಹ 'ಹೈದರಾಬಾದ ರಜಾಕರ ಲಾವಣಿ' ಹಾಗೂ 'ಬ್ರಿಟಿಷ್ ಜರ್ಮನ್ ಯುದ್ಧ' ಎಂಬೆರಡು ಲಾವಣಿಗಳಲ್ಲಿ ನಿಜಾಮನ ಮತ್ತು ಹಿಟ್ಲರ್‌ನ ನಿರಂಕುಶ ಆಡಳಿತದ ವಿರುದ್ಧದ ಹಿನ್ನೆಲೆಯಲ್ಲಿ ರಚನೆಯಾಗಿರುವದು ಕಂಡುರುತ್ತದೆ. ಇವರ ಒಟ್ಟು ಲಾವಣಿಗಳ ಆಶಯ ರಾಷ್ಟ್ರೀಯ ಸಮಸ್ಯೆಗಳನ್ನು ತಿಳಿಸುವುದು, ಶಿಕ್ಷಣ, ಒಕ್ಕಲುತನ, ಮದ್ಯಪಾನ ವಿರೋಧ ಮುಂತಾದ ವಿಚಾರಗಳು ತಾತ್ವಿಕ ಚಿಂತನೆಯನ್ನು ಒಳಗೊಂಡಿದೆ. ಇವರ ಲಾವಣಿ ಸ್ವರೂಪವನ್ನು ಜಾನಪದ ಶೈಲಿ, ಪ್ರಾಸಬದ್ಧ ಪದಬಳಕೆ, ಉಪಮಾನಗಳು, ಲಯಬದ್ಧ ಹಾಡುಗಾರಿಕೆ, ಕೆಲವೆಡೆ ಗ್ರಾಂಥಿಕ ಭಾಷೆ ಬಳಸಿರುವುದು ಕಂಡುರುತ್ತದೆ.

ಹೆಣ್ಣುಮಕ್ಕಳ ಹಾಡುಗಳನ್ನು ಜೋಗುಳ ಪದ, ಗುರುಗೀತಾ ಎಂಬ ಕೃತಿಗಳ ಹಿನ್ನೆಲೆಯಲ್ಲಿ ಕಾಣಹುದು. ಹಾಗೆಯೇ ನಾಟಕಗಳಲ್ಲಿಯೂ ಹೆಣ್ಣುಮಕ್ಕಳ ಹಾಡುಗಳನ್ನು ಬರೆದಿದ್ದಾರೆ. ಈ ಹಾಡುಗಳಲ್ಲಿ ಜಾನಪದ ಶೈಲಿ, ಗ್ರಾಂಥಿಕ ಶೈಲಿ ಬಳಕೆಯನ್ನು ಗುರುತಿಸಿದ್ದಾರೆ. ಬಿಡಿ ಹಾಡುಗಳು ರಾಷ್ಟ್ರಪ್ರೇಮ, ಭಕ್ತಿ, ಕನ್ನಡ ಅಭಿಮಾನ, ಸಾಮಾಜಿಕ ಜೀವನದ ಅಂಶಗಳನ್ನಾಧರಿಸಿ ಭಜನೆ, ಭಾವಗೀತೆ, ಚುಟುಕುಗಳಂತಹ ಪ್ರಕಾರಗಳಲ್ಲಿ ಹಾಡಲು ಬರುವಂತಿವೆ. ಈ ಹಿನ್ನೆಲೆಯಲ್ಲಿ ಇವುಗಳನ್ನು ಬಿಡಿ ಹಾಡುಗಳೆಂದು ಪರಿಗಣಿಸಿ ಕಾವ್ಯಾಂಶದ ಹಿನ್ನೆಲೆಯಲ್ಲಿ ನೋಡಲಾಗಿದೆ.

ಈ ರೀತಿಯಲ್ಲಿ ನಲವಡಿ ಶ್ರೀಕಂಠಶಾಸ್ತ್ರೀಗಳು ಸಾಹಿತ್ಯವಾಗಿ ಕೀರ್ತನೆ, ಜಾನಪದ ಪ್ರಕಾರದ ಒಡಪು, ಲಾವಣಿಗಳ ಮೂಲಕ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ರಂಗಭೂಮಿಯಲ್ಲಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲದೆ ಬಯಲಾಟಗಳನ್ನು ಸಹ ಬರೆದು ತಮ್ಮ ವೈಶಿಷ್ಟ್ಯತೆಯನ್ನು ತೋರಿಸಿದರು. ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ಕಾಲಘಟ್ಟದಲ್ಲಿ ಬದುಕಿದ್ದ ಶ್ರೀಕಂಠಶಾಸ್ತ್ರೀಗಳು ರಾಷ್ಟ್ರಾಭಿಮಾನ ಹೊಂದಿದ್ದು ಲಾವಣಿಗಳು, ಪೌರಾಣಿಕ ನಾಟಕಗಳ ಮೂಲಕ ರಾಷ್ಟ್ರಾಭಿಮಾನವನ್ನು ನಿರೂಪಿಸಿದ್ದಾರೆ. ಶ್ರೀಕಂಠಶಾಸ್ತ್ರೀಗಳು ಕನ್ನಡ ಅಭಿಮಾನ ಹೊಂದಿದ್ದರು. ಸಂಸ್ಕೃತ, ಹಿಂದಿ, ತೆಲುಗು ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದಿದ್ದರು. ಕನ್ನಡ ಭಾಷೆಯ ಮೇಲೆ ಒಲವಿದ್ದ ಇವರು ಕನ್ನಡ ಏಕೀಕರಣವನ್ನು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸುತ್ತಾ ಬಂದಿದ್ದಾರೆ. ಸಮಾಜ ಚಿಂತಕರಾದ ಇವರು ಸಮಾಜದ ಅಂಕು–ಡೊಂಕುಗಳನ್ನು ತೋರಿಸಿ ಸಮಾಜದ ನವ ನಿರ್ಮಾಣಕ್ಕೆ ತಮ್ಮದೇ ಆದಂತಹ ವಿಚಾರಗಳನ್ನು ನಾಟಕಗಳ ಮುಖಾಂತರ ಬಿತ್ತರಿಸಿದ್ದಾರೆ. ಈ ನೆಲೆಯಲ್ಲಿ ನಾಟಕಕಾರರೆಂದು ಹೆಸರು ವಾಸಿಯಾದ ನಲವಡಿ ಶ್ರೀಕಂಠಶಾಸ್ತ್ರೀಗಳ ರಚನೆಯು ಒಂದಕ್ಕೆ ಸೀಮಿತಗೊಳ್ಳದೆ ವಿಭಿನ್ನ ನೆಲೆಯಲ್ಲಿ ರಚನೆಗೈದುದು ವಿಶೇಷವಾಗಿದೆ. ಇಂತಹ ನಾಟಕಕಾರರ ಕುರಿತು ಇನ್ನಷ್ಟು ವಿಶ್ಲೇಷಣೆಗೊಳಪಡಿಸುವುದು ಜರೂರಿದೆ.

**ಕೊನೆಟಿಪ್ಪಣಿಗಳು**


1. ರಂಗನಾಥ, ಎಚ್.ಕೆ. (2014). *ಕರ್ನಾಟಕ ರಂಗಭೂಮಿ.* ಪುಟ–120.
2. ಮೃತ್ಯುಂಜಯ ಬ. ಹೊರಕೇರಿ. (2000). *ನಲವಡಿ ಶ್ರೀಕಂಠಶಾಸ್ತ್ರೀಗಳ ಜೀವನ ಮತ್ತು ಕೃತಿಗಳು.* ಪುಟ. 46
3. ಅದೇ. ಪುಟ–46
4. ಅದೇ. ಪುಟ–40
5. ಅದೇ. ಪುಟ–66
6. ಕೀರ್ತಿನಾಥ ಕುರ್ತಕೋಟಿ. (1974). *ಕನ್ನಡ ರಂಗಭೂಮಿ ಅಂದು–ಇಂದು.* ಪುಟ–79

**ಪರಾಮರ್ಶನ ಗ್ರಂಥಗಳು**


- ಕೀರ್ತಿನಾಥ ಕುರ್ತಕೋಟಿ. (1974). *ಕನ್ನಡ ರಂಗಭೂಮಿ ಅಂದು–ಇಂದು.* ಕರ್ನಾಟಕ ವಿಶ್ವವಿದ್ಯಾಲಯ.
- ಮೃತ್ಯುಂಜಯ, ಬ. ಹೊರಕೇರಿ. (1992). *ನಲವಡಿ ಶ್ರೀಕಂಠಶಾಸ್ತ್ರೀಗಳ ಜೀವನ ಮತ್ತು ಕೃತಿಗಳು.* ನಲವಡಿ ಶ್ರೀಕಂಠಶಾಸ್ತ್ರೀಗಳ ಸ್ಮಾರಕ ಪ್ರತಿಷ್ಠಾನ.
- ಮೃತ್ಯುಂಜಯ ಬ. ಹೊರಕೇರಿ. (2000). *ರಂಗ–ವೃತ್ತಿಂಗ.* ರವಿಕೀರ್ತಿ ಪ್ರಕಾಶನ.
- ರಂಗನಾಥ, ಎಚ್.ಕೆ. (2014). *ಕರ್ನಾಟಕ ರಂಗಭೂಮಿ.* ಹೇಮಂತ ಪ್ರಕಾಶನ.



SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 123-136
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# *Mro* Community and their Livelihoods in Bandarban District of the Chittagong Hill Tracts of Bangladesh

**Satish Chakma[1] & Dr. M. Meera[2]**
[1]Research Scholar, University of Mysore, Mysuru
[2]Director, Institute of Development Studies, University of Mysore, Mysuru

***Abstract:***
*The primary objective of the study is to understand the life and livelihood of the Mro indigenous community in Bandarban district of the Chittagong Hill Tracts of Bangladesh. CHT is comprised by 10 percent of the total land of Bangladesh and located in the south-eastern corner of Bangladesh sharing the international border with India in the north-east and Myanmar in the South and Chittagong district and India in the west accustomed by 11 distinct indigenous tribal community. Racially, religious, language, ethnicity, dress code, food habit, livelihood, customs, culture, social formation, habit and housing pattern is quite diverse than the mainstream community. In addition to the aforesaid aspects, they are also internally varied community to community and religion to religion. Though they are distinct between and within indigenous tribal community; they are harmonious by nature, peace lover by faith and hard working by blood. The study attempted to explore the Mro community and their livelihood in Bandarban district of the Chittagong Hill Tracts, Bangladesh. They are the fifth largest community among of the 11-native community in CHTs followed by the Krama religion that emerged from the collective faith of Hinduism, Buddhism and Christianity; who most of them exclusively depend on jhum cultivation for their livelihood followed by the natural resources' extraction for subsistence livelihood. However, their unique culture, religion, customs, dress code, language and housing formation are the foundation of their identity.*

***Keywords:*** *Mro community, livelihoods and their activities, forest dependency, Chittagong Hill Tracts, Bangladesh.*

## Introduction

The Chittagong Hill Tracts are located in the south-eastern corner of Bangladesh, a land that is bejewelled by diverse culture, religion, ethnicity, geography, politics, faith, and customs, as well as vibrant costumes that are remarkably

***Please cite this article as:*** Satish Chakma & M. Meera. (2024). *Mro* Community and their Livelihoods in Bandarban District of the Chittagong Hill Tracts of Bangladesh. *SRUJANI: Indian Journal of Innovative Research and Development,* 3(2), 123-136

distinct from the mainstream Bengali community (MoCHTA, 2022). In addition to the 11 distinct indigenous communities, illustrated below, there are also Bengali community (Hindu and Muslim), are residing in the pristine region of Bangladesh. The Chittagong Hill Tracts represent 10 percent of the total land area of Bangladesh (MoCHTA, 2022). However, due to the inaccessibility of the region, the majority of the people are dependent on agriculture and forest resources, followed by two major cultivation methods. First, wetland cultivation, which is cultivated in lowland or valley land; and second, high or slope land cultivation, locally known as *jhum* cultivation (Majumdar, 2013; Hossain and Ahmad, 2017). Thus, both methods are integrated with the lives, culture, and religion of the Mro community in the CHTs, depending on the availability of land. It is, therefore, the traditional cultivation method by which the indigenous communities produce their subsistence livelihood. Hence, due to the different geographical structure of the CHTs, the local ethnic communities are gravely dependent on *jhum* cultivation.

The 11 distinct ethnic communities represent only 0.55 percent of the total population of the Chittagong Hill Tracts of Bangladesh (BBS, 2022). Among the 11 ethnic communities, some of them represent further minorities in terms of number, including Lusai, Khiang, Khumi, and Chak communities. However, their numbers individually do not even exceed four thousand. Lushai is the smallest community among the total 11 ethnic groups of CHTs, whose total number is estimated at only 380 individuals (BBS, 2022). However, the majority of them are residing in the Bandarban district of CHTs. Mro is one of the fifth largest communities and is considered the most backward of the 11 ethnic groups due to its juxtaposition with nature and residing in a remote area.

The majority of the Mro people were found to be relatively residing in five upazilas (sub-districts) of Bandarban district vis-à-vis Thanchi, Alikadam, Lama, Ruma, and Naikhyangchari upazilas, particularly in rural remote areas (Chowdhury et al., 2014), where modern facilities such as education, transportation, medical facilities, business accessibility, banking, electricity, etc. have entirely remained absent for decades (Chowdhury et al., 2009). Though several developments, policies, and programs have been implemented in CHTs since the Peace Accord in 1997, the light and effect of such developments have yet to be felt in the locality of the Mro community. Eventually, they are totally and systematically excluded from the modern world. In this context, some of the researchers referred to them as the nude community in CHTs (van Schendel, W., 2002). Jhum farming was the main occupation for the Mro community as well as other minority groups in CHTs. Therefore, jhum cultivation is nowadays considered the dominant agriculture,

while horticulture, hunting, small businesses, and the collection of non-timber products are the secondary income sources for them in remote areas (Chowdhury et al. 2014).

**Objectives**

The Mro community of the Chittagong Hill Tracts, particularly in Bandarban district, is considered one of the most backward communities in the hilly region. Their socio-economic and political representation has been taken out of focus by the majority of the indigenous community themselves on one hand and the mainstream community, including government, on the other. Hence, the study is undertaken based on the following two particular objectives:

- To study the socio-economic condition of the Mro tribe
- To understand how and why their livelihoods are associated exclusively with the forest.

**Methodology**

The integrated research method of both qualitative and quantitative research techniques has been applied in this study based on the secondary data that has been collected from the published reports of the government and non-government organizations. However, Bandarban district has been selected purposefully because the majority of the Mro community has been existing since immemorial time.

**Result and discussion**

The result and discussion section are the crucial part of the study. Generically, it reflects on the in-depth introduction of ethnicity of the Mro community, their associated culture, religion, and customs; their living standards and eventually, their dependency on nature for livelihood. More or less degree, the indigenous communities in the CHTs usually depends on the natural forest for medicines, foods, nutrition, minerals, firewood and house construction materials. But the people who are residing in the remote areas they ultimately depend on nature. Among of them Mro community is one whose life is incorporated with forest.

**Who are the Mro?**

The Mro community is one of the 11 indigenous tribal communities in the Chittagong Hill Tracts of Bangladesh. They belong to the Tibeto-Burman language group that is spoken by 52,455 Mro people (BBS, 2022; MHFW, 2011). They are explored to be dwelt in remote areas of Thanchi, Alikadam, Lama, Ruma, and Naikhyangchari upazilas in Bandarban district. In addition to that, a small segment of Mro people is seen to be residing in Rangamati district. In major societies, education fundamentally plays a pivotal role in development in respect of social, economic, cultural, religious, and political aspects, and education is found to have a correlation between and within knowledge, whether it is modern or traditional. In the context of education, the Mro community in Bolipara union of Thanchi upazila of Bandorban district found the zero-literacy rate (Chowdhury

et al. 2009) who are residing in the hilltops that are hardly reachable from the urban areas of Thanchi upazila, and they used to wear a typical traditional dress that almost seemed to be undressed. Above all, they are attempting their best to protect their uniqueness, culture, and lifestyle, as well as their major sources of subsistence livelihood, through their traditional farming system, popularly known as *jhum* cultivation, slash and burn, or shifting cultivation.

**Ethnic composition in the Chittagong Hill Tracts**

The Chittagong Hill Tracts is a land rich in ethnicity, culture, religion, dress, language, ritual, food habits, and a unique cultivation system that makes the hilly region more diverse than the other parts of Bangladesh. 11 distinct communities, for example, Chak, Chakma, Marma, Tripura, Tanchangya, Khumi, Khyang, Lushai, Mro, Pankhu, and Bawm, are living together following their respective cultures, religions, faiths, and customs. Chakma is the majority community (48.8%), while Lusai is the minor community (0.04%). In the context of numbers, Mro is the fifth largest community (5.3%) in the Chittagong Hill Tracts among the ethnic communities. The majority of the indigenous tribal people reside in rural areas in scattered situations. Hamlet, or village, locally called Para, is the main abode of the indigenous tribal people, and each *para* is administered by the head of the village, called *Karbari*. Except that a temporary hut is built up on the *jhum* plot, which is eventually deserted when the harvest process gets over. Table No. 1 demonstrates the ethnic minority population in the Chittagong Hill Tracts of Bangladesh. However, the recent population and housing census in Bangladesh in 2022 enumerated that the total population of Chittagong Hill Tracts was 18,41,829, which represents only 1 percent of the total population of Bangladesh.

**Table 1: Ethnic population distribution in CHTs**

| Communities | Male | Female | Total | % |
|---|---|---|---|---|
| Chak | 1,555 | 1,522 | 3,077 | 0.03 |
| Chakma | 2,43,889 | 2,39,410 | 4,83,299 | 48.8 |
| Marma | 1,11,317 | 1,12,944 | 2,24,261 | 22.7 |
| Tripura | 78,183 | 78,395 | 1,56,578 | 15.8 |
| Tonchonga | 23,316 | 22,656 | 45,972 | 4.6 |
| Khumi | 1,951 | 1,829 | 3,780 | 0.4 |
| Khiang | 2,459 | 2,367 | 4,826 | 0.5 |
| Lusai | 189 | 191 | 380 | 0.04 |
| Mro | 26,742 | 25,713 | 52,455 | 5.3 |
| Pankhoa/Pankho | 943 | 914 | 1,857 | 0.2 |
| Bom | 6,659 | 6,534 | 13,193 | 1.3 |
| Total | 4,97,203 | 4,92,475 | 9,89,678 | 99.72 |

**Source:** BBS. (2022).

**Land distribution in the agriculture sector**

10 percent of the land area (13295 sq. miles) comprises the south-eastern hilly region called the Chittagong Hill Tracts (MoCHTA 2021; UNICEF, 2019). The term was coined by the British Administrator in 1860, when they officially annexed the CHT region under the domain of their administration (Chakma, 2022). However, in respect of the availability of agricultural land, particularly wet rice cultivation in the Chittagong Hill Tracts of Bangladesh, only 3.2 percent, which, according to the size of the population, is nominal or not sufficient to deal with the extensive agriculture. Hence, some parts of this region entirely depend on jhum cultivation. A prevalent scenario in respect of jhum cultivation is dominant in the two districts of Rangamati and Bandarban. Topographically, Bandarban comprises a mountainous area where the flat land is relatively scanty, and on the other hand, Rangamati is the largest district in Bangladesh, where farming land is not sufficient. In 1960, a hydroelectric development project was implemented by the then government in order to generate electricity for the welfare of the region's inhabitants as well as the entire Bangladesh, but the major target was to deal with the industries in cities, especially in Chittagong and Dhaka. It is the largest hydroelectric plant in Bangladesh. Unfortunately, it is seen that the indigenous people in the Chittagong Hill Tracts of Bangladesh have been given the opportunity to access electricity at a rate of approximately less than 37.5 percent, while they are using energy from kerosene at around 46.4 percent, which is equal to the national rural average, and 29.4 percent are using solar (Toufique et al., 2017). Consequently, this plant submerged around 40 percent of the arable land in CHTs and uprooted approximately 100 thousand indigenous people from their land without making any or partial compensation (Jean and Chakma, 2008; Prakash, 2013). However, the affected community is mostly identified as the Chakma community, which constitutes around 70 percent (Chakravarty, 2017; Prakash, 2013). Among them, the largest segment of the victims migrated to Arunachal Pradesh (earlier NEFA—at present comprised of Lohit, Changlang, and Papumpare in Arunachal Pradesh) (Chawngkunga, 1983), and the rest of the affected people settled down in the forest area, dealing with the insecure life. Hence, due to this project, cultivable land became scarce, and on the other hand, forest land became dominant. Simultaneously, the Forest Department has declared more than 50 percent of land to be taken into consideration under the Forest Department in order to expand the forestry that was previously considered community land by the indigenous communities. which several thousands of

people were evicted from their occupied land for the second time after the Kaptai Hydroelectric Dam. Furthermore, approximately 64609 individuals of 12222 families of the indigenous people repatriated from Tripura state of India who crossed the border during the turmoil situation in CHTs (PCJSS, 2021) within 1986 took shelter in Tripura state of India in order to be safe from the torture and persecution perpetrated jointly by the security forces of the state and settler Bengali migrated from plain district. Table No. 2 addresses the land distribution of CHTs in various farming and non-farming sectors.

**Table 2: Land use capacity of the Chittagong Hill Tracts of Bangladesh**

| Class | Suitability | Land area (%) |
|---|---|---|
| Class A | Suitable for paddy cultivation | 3.2 |
| Class B | Suitable for horticulture | 2.90 |
| Class C | Suitable for tree crops with intrusive soil conservation practices | 15.50 |
| Intermediate class between C and D | Miscellaneous use | 1.40 |
| Class D | Suitable for forestry alone | 77.00 |

**Source:** Nishat, A and Biswas, S. R. (2005).

**Demography of the CHTs**

According to the land size of the Chittagong Hill Tracts of Bangladesh, the population is growing faster, which is leading to exceeding the minimum land capacity. However, the inconsistence growth of non-tribal population from plain districts into CHTs is considered to be a critical problem that not only contributes to reducing the land size but also affects the lives of the tribal people, demography, harmony, environment, and biodiversity in CHTs, gravely threatening and jeopardizing the lives and livelihood of the local community. The density of the population in the Chittagong Hill Tracts of Bangladesh varies remarkably from region to region and district to district. In the case of Khagrachari district, it is, however, seen that the density of population is 243 per sq. km, while Rangamati and Bandarban represent 106 and 98 persons, respectively. Hence, the average density of the population in CHTs represents 135 per sq. km. against the national average of 1265 per km2 (3,277 people per $mi^2$). Table no. 3 reflects the demography of CHTs.

**Table 3: Demographic Profile of Chittagong Hill Tracts of Bangladesh**

| Particulars | Khagrachari | Rangamati | Bandarban | CHT |
|---|---|---|---|---|
| Total population | 668,944 | 650,079 | 436,950 | 1,755,973 |
| Share of population in the division (%) | 2.16 | 2.10 | 1.41 | 6.67 |
| Total under-eighteen population | 265,391 | 257,907 | 173,351 | 696,649 |
| Total under-five population | 69,948 | 67,976 | 45,690 | 183,614 |
| Population density per sq. Km. | 243 | 106 | 98 | 132 |
| Infant mortality rate (per 1000 live births) | 117 | 61 | 35 | 75 |

**Source:** UNICEF (2019).

**Activities carried out by the Mro people**

The indigenous people of the Chittagong Hill Tracts of Bangladesh engaged in various domestic and non-domestic activities throughout the year. Due to their prime dependence on natural resources, the indigenous people's activities significantly vary from those of other sections of the population, particularly the Bengali community, who do not rely on natural resources. Hence, throughout the year, indigenous people accomplished the work based on the month, and every month they produced new activities. However, the Mro community also engaged with various work from January to December. Hunting, harvesting the forest product, and Jhum cultivation are the prime activities carried out by the Mro community.In the context of the activities, some of the work is only in the domain of women, such as fetching water from the stream, caring for and rearing domestic animals, cooking food, collecting fuel wood, weeding the jhum field, and taking care of children and old people. On the contrary, some of the work is exclusively carried out by men, such as clearing the forest for jhum cultivation, taking wood from the forest, clearing the debris in the jhum field, carrying the cash crop product, hunting wild animals, etc. Furthermore, some work is gender neutral and can be done both male and female together, such as harvesting paddy, cotton, vegetables, the construction of a house, sowing seeds, burning the field, etc. Table no. 4 is the flow chart of the annual activities carried out by the Mro community in Bandarban district.

**Table 4: Annual activity calendar of the Mro tribe in Thanchi, Bandarban**

| Month | Activities |
|---|---|
| January | Hunting of deer, birds, selection of Jhum land. |
| February | Cutting the jungle in the Jhum land. |
| March | The cut jungle remains as usual to facilitate drying. |
| April | Burning of dried plant materials. Unburned materials are collected and kept in heap in one place and further burning was done 7-10 days after the first burning. |
| May | After the first shower, planting of banana and gada flower (marigold) was done followed by rice. |
| June | Planting continues, 1st weeding was done in rice. |
| July | 2nd weeding done, insecticide application done in rice, harvesting of pine apple. |
| August | Harvesting of rice, maize and vegetables. |
| September | Harvesting of cotton, sesame, vegetables, later rice (koyil dhan). |
| October | Harvesting of remaining cotton, Cow-killing Ceremony (Chia-Chot-Plai). |
| November | Jhum finished. |
| December | Hunting starts in the jungle and forests. |

**Source:** Chowdhury et al. (2007).

**Preferences of the wild animals for consumption**

Forest resources contribute to the livelihoods of millions of ethnic minority population such as wild foods, fodder, construction materials, and medicinal herbs. Bangladesh has 2.52 million ha of tropical forest ecosystems, amounting to 10 percent of its total land area. More than two thirds of the population live in rural areas and is directly or indirectly depend on forests. Chittagong Hill Tracts comprise 10 percent of the country's total land, but they constitute almost 43 percent of the total land area in the region and are either natural, planted, or grasslands with scatter timber tress and bamboo (Ahammad et al., 2019).

Diversified food is always seen to be consumed by the tribal communities in the world. They extract various types of food items form the forest. Along with that, they even harvest some sorts of wild animals, which helps them to meet their nutritional needs. The indigenous people in the CHTs of Bangladesh have been exclusively dependent on the forest resource for some decades. Due to the development of agriculture and access to market facilities, a small segment of the population became reluctant to extract forest resources. Besides that, most of the indigenous people are still relying on forest products, particularly in rural communities. They extract vegetables, fuel wood, medicinal plants, flora and fauna, fruits, non-timber products such as cane, bamboo, sun grass, creepy plants,

and hunt wild animals for nutritional supplements, etc. As a source for them, rivers and forests are considered to be the best storehouses of natural resources. However, several factors are associated with the reduction of forest resources. Hence, due to the overexploitation of natural resources, the rapid increase in population and rapid increase of the value of forest resources are the prime sources of reducing forest resources. Except the vegetables, it is, however, seen that the Mro community in Bandarban district harvests numerous wild animals, as well as other indigenous communities in CHTs. Tabel no. 5 illustrates the wild animals preferred by the Mro community.

**Table 5: Top ten animals preferred for hunting by Mro tribal in Bandarban district**

| Income category of farmers | | | |
|---|---|---|---|
| **Rank** | **Rich** | **Medium** | **Poor** |
| 1 | Wild boar | Wild boar | Deer |
| 2 | Monitor | Monitor | Monitor |
| 3 | Python | Wild cow | Talking bird/Parrot |
| 4 | Wild cow | Jungle fowl | Hornbill |
| 5 | Monkey | Fishing cat | Wild boar |
| 6 | Jungle fowl | Leopard | Wild elephant |
| 7 | Snail | Frogs | Snail |
| 8 | Tortoise | Tortoise | Jungle fowl |
| 9 | Crab | Monkey | Fox |
| 10 | Frogs | Crab | Mongoose |

Source: Chowdhury et al. (2007).

**Fuelwood used by the Mro community in Bandarban**

The indigenous people in the world gained sufficient knowledge to deal with the forest resources. They know better how, when, and what they should extract and use. Hence, their dependency rate on forests is comparatively higher than that of the non-tribal population. In the present era, the tribal people are therefore massively affected by climate change, which has made their livelihoods insecure. Lynn et al. (2013) conducted a study in order to understand climate change and its impact on the tribal people of American Indian and Alaska Native tribes. They find that tribal people depend on forests gravely in order to extract a wide variety of natural resources, such as natural fungi, plants, and animals' species, for foods, medicines, ceremonies, community health, and economic health from generation to generation. Due to climate change, the impact directly affects the culture, economy, and traditional way of life of tribal people. However, the indigenous people of the Chittagong Hill Tracts of Bangladesh are not exceptional. Due to climate change, the indigenous people of that region suffer a lot during the summer when water scarcity becomes widespread and acute that severely affecting their lives. Unabated destroying of the natural forests that retain high water levels is considered to be one of the causes of climate change in CHTs. As a result, the way of life of indigenous people is going to change radically along

ಲೇಖಕ ಇಂತಹ ಪ್ರಾದೇಶಿಕ ಪದಗಳನ್ನು ಬಳಸುವ ಸಂದರ್ಭದಲ್ಲಿ ಓದುಗರಿಗೆ ಹೆಚ್ಚು ಹತ್ತಿರವಾಗುತ್ತಾನೆ. ಸಾಮಾನ್ಯ ಜನತೆಯ ದಿನನಿತ್ಯ ಜೀವನ ಇಲ್ಲಿ ಕಲಾತ್ಮಕವಾಗಿ ಮೂಡಿ ಬಂದಿದೆ.ಇಂತಹ ಸಂರ್ಭದಲ್ಲಿಯೇ ಸೂರಿಯವರ ಶೈಲಿಯೂ ಹೊಸ ರೂಪ ಪಡೆಯುತ್ತದೆ. ಸಂಪೂರ್ಣವಾಗಿ ಪ್ರಾದೇಶಿಕ ನುಡಿಗಟ್ಟಿನಿಂದ ಕೂಡಿಕೊಂಡು ಆ ಭಾಷೆಯ ಅಡಂಬರದಲ್ಲಿಯೇ ಧೋರಣೆಯನ್ನು ಗೌಣಗೊಳಿಸಿಕೊಳ್ಳುವ ಅಪಾಯದಿಂದ ಲೇಖಕರು ಪಾರಾಗಿದ್ದಾರೆ.

ಈಟೊತ್ತು, ಮಕ, ಚಾವ್ಡಿತಾವ, ಸೇದ್ಬೋಗ, ರಾವ್ ಬಡಿಯ, ಮೂಳ, ಮಾರ್ರಾಯ್ರೆ, ತಥ್ ಇವ್ನವ್ವನ, ಅರವಂಟಿಗೆ ಮುಂತಾದ ಪದಗಳು ಕೆಲವರಿಗೆ ಕೇವಲ ಬೈಗುಳುಗಳಾಗಿ ಕಾಣಬಹುದು. ಆದರೆ ಇವೆಲ್ಲಾ ಒಂದು ಜನಾಗದ ಸಂಸ್ಕೃತಿಯ ಅವರಣಗಳೂ ಹೌದು ಎಂಬುದನ್ನು ಮರೆಯುವಂತಿಲ್ಲ. ಹಳ್ಳಿಗರ ದಿನನಿತ್ಯದ ಬದುಕೇ ಹಾಸ್ಯ, ವಿಡಂಬನೆ, ಬೈಗುಳುಗಳಿಂದ ಕೂಡಿದೆ.ಆ ಬೈಗಳುಗಳ ಹಿಂದೆ ಸೇಡಿನ ಭಾವನೆಯಿರದೆ ಚುಚ್ಚುವ ಗುಣವಿದೇ; ಬಹಳ ಬಿರುಸು ನುಡಿಗಳೆಂದೆನಿಸಿದರೂ ಅವುಗಳಲ್ಲಿ ದ್ವೇಷದ ಬದಲಾಗಿ ಜೀವನ ಪ್ರೀತಿಯಿದೆ.

**ಗಾದೆ ಮಾತು**

ಸೂರಿಯವರ ಕಾದಂಬರಿಗಳಲ್ಲಿ ಗಾದೆ ಮಾತುಗಳನ್ನು ಬಳಸಿಕೊಂಡಿದ್ದಾರೆ. ಗಾದೆ ಸುಳ್ಳಾದರೂ ವೇದ ಸುಳ್ಳಾಗದು ಎಂಬ ಮಾತಿನಂತೆ, ಒಂದು ಪ್ರದೇಶದ ಗಾದೆ ಮಾತುಗಳನ್ನು ಗಮನಿಸಿ ಅಲ್ಲಿಯ ಸಂಸ್ಕೃತಿಯನ್ನು ಅರ್ಥೈಸಿಕೊಳಬಹುದಾಗಿದೆ. ಹಿಂದಿನ ಜನಸಮುದಾಯದ ಅನುಭವದ ನುಡಿಗಟ್ಟುಗಳಾಗಿರುವುದರಿಂದ ಹಿಂದಿನ ಜನ ಸಮುದಾಯದ ಸಂಸ್ಕೃತಿಯನ್ನು ತಿಳಿಯಲು ಗಾದೆಗಳು ಸಹಾಯಕವಾಗುತ್ತದೆ. ಜನಪದರಿಂದ ಬಂದ ಈ ಗಾದೆ ಮಾತುಗಳು ಶಿಷ್ಟಸಾಹಿತ್ಯದಲ್ಲಿ ಮೊದಲಿನಿಂದಲೂ ಬಳಕೆಯಾಗುತ್ತ ಬಂದಿದೆ.

ಗಾದೆ ಮಾತು ಬರಹಕ್ಕೆ ತೀವ್ರತೆಯನ್ನು ತಂದು ಕೊಡುವುದಲ್ಲದೆ, ನಿರೂಪಣಾ ವಿಷಯದ ಸ್ಪಷ್ಟತೆಗೆ ಅನುಕೂಲವಾಗುತ್ತದೆ ಮತ್ತು ಓದುಗರಲ್ಲಿ ಪರಿಣಾಮವನ್ನುಂಟುಮಾಡುತ್ತದೆ. ಅಂತೆಯೆ ಶಿಷ್ಟ ಸಾಹಿತಿಗಳು ಜನಸಮುದಾಯದಿಂದ ಬಂದ ಜನಪದರ ಗಾದೆಗಳನ್ನು ತಮ್ಮ ಕೃತಿಯ ಅಭಿವ್ಯಕ್ತಿ ಮಾಧ್ಯವನ್ನಾಗಿ ಬಳಸಿಕೊಂಡಿದ್ದಾರೆ.

ಸೂರಿಯವರ ಕಾದಂಬರಿಗಳು ಹೆಚ್ಚಾಗಿ ನಗರಜೀವನವನ್ನು ಮತ್ತು ಗ್ರಾಮೀಣ ಬದುಕನ್ನು ಸಮನ್ವಯ ಮಾಡಿಕೊಳ್ಳುವ ಮೂಲಕ ಆಧುನೀಕತೆಯ ಪ್ರಕ್ರಿಯೆಗೆ ಒಳಪಡಿಸುತ್ತವೆ. ಅದರಲ್ಲೂ ತೋಟದ ಮನೆ' 'ಶಾಪ' ಮತ್ತು 'ಹೊಸ ಚಿಗುರು' ಕಾದಂಬರಿಗಳು ಹಳ್ಳಿ ಜೀವನದ ಸಂಸ್ಕೃತಿಯನ್ನು ಹೇಳುತ್ತವೆ. ಇವರ ಎಲ್ಲ ಕಾದಂಬರಿಗಳನ್ನು ಅಧ್ಯಯನ ಮಾಡಿದಾಗ ಗಾದೆ ಮಾತುಗಳ ಬಳಕೆ ಯಥೇಚ್ಚವಾಗಿರುವದುನ್ನು ಕಾಣಬಹುದು. ತೋಟದ ಮನೆ' 'ಶಾಪ' ಮತ್ತು 'ಹೊಸ ಚಿಗುರು' ಕಾದಂಬರಿಗಳಲ್ಲಿ ಬಳಕೆಯಾದ ಕೆಲವು ಗಾದೆ ಮಾತುಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ.

"ಕೃತ್ತಿಕೆ ಮಳೆಗೆ ಕುರಿತಷ್ಟು ಎಳ್ಳು"

"ಕೃತ್ತಿಕೆ ದನಕ್ಕೆ ಮೃತ್ಯು"

"ರೋಹಿಣಿ ಹೊಯ್ದರೆ ಹೋಣಿಯೆಲ್ಲಾ ಮಳೆ"

"ವಕ್ಕಲಿಗನ ಎದೆಯಲ್ಲಿ ಅವಲಕ್ಕಿ ಕುಟ್ಟಿತು"

"ಪುಷ್ಯ ಹುಸಿಯೊಲ್ಲ"

"ಆಶ್ಲೇಷ ಮಳೆ ಕೈತುಂಬಾ ಬೆಳೆ, ಅಸಲೆ ಮಳೆ ಸೊಗಸು ಬೆಳೆ, ಬಂದರೆ ಅಸಲೆ, ಹೋದರೆ ಸೋಸಲೆ"

"ಉಬ್ಬೆ ಮಳೇಲಿ ಬಿತ್ತಿದ್ರೆ ಹುಲ್ಲೂ ಕಾಳು ಇಲ್ಲ, ಉಬ್ಬೆ ಮಳೆಗೆ ಗುಬ್ಬಿ ತಲೆಯೂ ನೆನೆಯೋಲ್ಲ"

"ಅಸ್ತೆಗೆ ಆರು ಕಾಯಿ, ಚಿತ್ತಿಗೆ ಮೂರು ಕಾಯಿ"

"ಕುರುಡು ಚಿತ್ತೆ ಎರಚಿದತ್ತ ಮಳೆ, ವಿಶಾಖೆ ಹಿಡಿದರೆ ಪಿಶಾಚಿ ಹಿಡಿದಂತೆ, ಅನುರಾಧೆ ಸುರಿದರೆ ಮನೋರಾಗ ಹೋಗುತ್ತೆ"

"ಹುಡುಗ್ಮುಂಡೇವ್ಕೆ ಯಜಮಾನ್ಕೆ ಕೊಟ್ರೆ ವೊಡೆಗದ್ದೆ ಕೊಯ್ಸಿದವಂತೆ"

ಇಲ್ಲಿ ಬಳಕೆಯಾದ ಈ ಗಾದೆ ಮಾತುಗಳನ್ನು ತೋಟದ ಮನೆ ಕಾದಂಬರಿಯಿಂದ ಆಯ್ದುಕೊಳ್ಳಲಾಗಿದೆ. ಈ ಮೇಲಿನ ಮಾತುಗಳನ್ನು ಆಡುವವರೆಲ್ಲ ರೈತಾಪಿ ವರ್ಗದ ಜನ. ಹಳ್ಳಿಜನರ ಸಂಭಾಷಣೆಗಳಲ್ಲೇ ಗಾದೆ ಮಾತಿನ ಪ್ರಯೋಗ ಹೆಚ್ಚು.ಕಾಲದಿಂದ ಕಾಲಕ್ಕೆ. ಬಾಯಿಂದ ಬಾಯಿಗೆ ಹರಿದುಕೊಂಡು ಬಂದಿರುವ ಈ ಗಾದೆ ಮಾತುಗಳಿಗೆ ಹಳ್ಳಿಯ ಬದುಕಿನಲ್ಲಿ ಪ್ರಮುಖ ಸ್ಥಾನವಿದೆ.ಗಾದೆಗಳನ್ನು ಬಳಸುವುದರಿಂದ ಬರಹಕ್ಕೆ ತೀಕ್ಷ್ಣತೆ ಬರುತ್ತದೆ. ಅದನ್ನು ಸಾಹಿತ್ಯಕೃತಿಗಳ ವಿಶ್ಲೇಷಣೆಯ ಮುಖಾಂತರ ಸ್ಪಷ್ಟಪಡಿಸಬಹುದಾಗಿದೆ.

**ಮೌಲಿಕವಾದ ನುಡಿಗಟ್ಟು**

ಮೌಲಿಕವಾದ ನುಡಿಗಟ್ಟುಗಳು ಸೂರಿಯವರ ಕಾದಂಬರಿಗಳ ಪಾತ್ರ ಸಂಭಾಷಣೆಯ ಮೂಲಕ ಪ್ರಕಟವಾಗುತ್ತವೆ. ಬದುಕಿನ ಮೌಲಿಕ ನುಡಿಗಳನ್ನು ಕಾದಂಬರಿ ಮಾಧ್ಯಮದ ಮೂಲಕ ಹೇಳುವುದು ಸೂರಿ ಅವರ ವಿಶಿಷ್ಟ ಶೈಲಿಗೆ ಸಾಕ್ಷಿಯಾದಂತಿದೆ. ಆದರೆ ಈ ನುಡಿಗಳು ಎಲ್ಲಿಯೂ ಭಾಷಣದ ಒಣ ವರದಿಗಳಾಗದೆ ಅನುಭವ ತೀವ್ರತೆಯೊಂದಿಗೆ ಕಲಾತ್ಮಕತೆಯನ್ನೂ ಉಳಿಸಿಕೊಂಡು ಸಾಗುತ್ತವೆ. ಇವರ ಕಾದಂಬರಿಗಳನ್ನೂ ಓದಿದ ನಂತರವೂ ಈ ನುಡಿಗಳು ಸದಾ ಓದುಗರ ಮನಸ್ಸಿನಲ್ಲಿ ನಿಲ್ಲುತ್ತವೆ. ನೇರ, ಸರಳ, ಸ್ಪಷ್ಟ, ಧ್ವನಿಪೂರ್ಣವಾಗಿ ಬರುವ ಮಾತುಗಳು ಲೇಖಕರ ಧೋರಣೆಯನ್ನು ಸ್ಪಷ್ಟಪಡಿಸುತ್ತವೆ. ಕೆಲವು ಕಾದಂಬರಿಗಳಿಂದ ಆಯ್ಕೆ ಮಾಡಿದ ನುಡಿಗಳನ್ನಿಲ್ಲಿ ಉದಾಹರಿಸಲಾಗಿದೆ.
"ವಕ್ಕಲಿಗನ ಮನೆಯಲ್ಲಿ ಅವಲಕ್ಕಿ ಕುಟ್ಟಿದಂತೆ"[7]
"ಊಳಲು ಎತ್ತಿಲ್ಲ, ಎತ್ತಿಲ್ಲದ ಮೇಲೆ ಎದೆಯಿಲ್ಲ"[8]

ಸೂರಿಯವರ ಕಾದಂಬರಿಗಳು ಮಹಿಳಾ ಸಮಸ್ಯೆಗಳತ್ತ ಹೆಚ್ಚು ಕೇಂದ್ರೀಕರಿಸುತ್ತವೆ. ಆದರೆ ಇಲ್ಲಿ ಲೇಖಕರು ಶೋಷಣೆಯನ್ನು ಕುರಿತು ಹೇಳುವಾಗ ರೊಚ್ಚನ್ನು ಹುಟ್ಟಿಸದೆ, ಸೇಡನ್ನು ಬೆಳೆಸದೆ ಕಾರುಣ್ಯವನ್ನು ಪ್ರಕಟಿಸುತ್ತಾರೆ. ಪ್ರತಿಭಟನೆಯ ಅಂಶವಿದ್ದರೂ ಅದು ಸೇಡಿನ ಜ್ವಾಲೆಯಲ್ಲ, ಹೋರಾಟದ ಮಾತು ಬಂದರೂ ಅದು ಹಿಂಸೆಯನ್ನುಂಟು ಮಾಡುವ ಹೊಡೆದಾಟ ವಾಗುವುದಿಲ್ಲ. ಹೆಣ್ಣಿಗೆ ಶೋಷಣೆಯಾಗಿದೆಯೆಂದು ತಿಳಿದು ಕೇವಲ ಗಂಡಸರನ್ನು ದೂಷಿಸುವುದಿಲ್ಲ. ಗಂಡು ಹೆಣ್ಣುಗಳಲ್ಲಿ ಮೇಲು ಕೀಳುಗಳೇ ಇಲ್ಲವೆಂದು ಸ್ಪಷ್ಟಪಡಿಸುವ ಲೇಖಕ ಇವರಿಬ್ಬರಿಗೂ ಸಮಸ್ಯೆಯಾಗಿ ಅಸಮಾನತೆಯ ವ್ಯವಸ್ಥೆಯನ್ನು ಪ್ರಶ್ನಿಸುವತ್ತ ಓದುಗರ ಗಮನ ಸೆಳೆಯುತ್ತಾರೆ. ಆದ್ದರಿಂದಲೇ ಸೂರಿಯವರು ವಿಶಿಷ್ಟ ರೀತಿಯ ಸಾಹಿತಿಯಾಗಿ ಕಾಣುತ್ತಾರೆ. ಈ ವಿಶಿಷ್ಟ ರೀತಿಯ ಧೋರಣೆಯೆ ಅವರ ವಿಶಿಷ್ಟ ಶೈಲಿಯನ್ನು ಹುಟ್ಟು ಹಾಕಿದೆ.

ಮಹಿಳಾ ಶೋಷಣೆ ಮತ್ತು ಸಮಸ್ಯೆಗಳಿಗೆ ಸಂಬಂಧಿಸಿದ ಸ್ತ್ರೀವಾದಿ ನೆಲೆಗಳನ್ನು ಸೂರಿಯವರ ತೋಟದ ಮನೆ, ಹೊಸಚಿಗುರು, ಶಾಪ, ಪಿತೃವನ, ವಿಷಕನ್ಯೆ, ಮುಂತಾದ ಕಾದಂಬರಿಗಳಿಂದ ಕೆಲವು ಸಂದರ್ಭಗಳನ್ನು ಉದಾಹರಿಸಲಾಗಿದೆ.

"ಸ್ತ್ರೀಗೆ ವ್ಯಕ್ತಿತ್ವ ಮುಖ್ಯ, ತನ್ನ ಅಭಿಪ್ರಾಯಗಳನ್ನು, ಅಭಿರುಚಿಗಳನ್ನು ಕೊಂದುಕೊಂಡು ಗಂಡಸಿನ ಅಭಿಪ್ರಾಯ, ಅಭಿರುಚಿಗಳನ್ನು ತನ್ನದನ್ನಾಗಿ ಮಾಡಿಕೊಂಡು ಇಷ್ಟಾಇಷ್ಟಗಳನ್ನು ಲೆಕ್ಕಿಸದೆ ಚಪ್ಪಲಿಯ ಕೆಳಗಿನ ಅಟ್ಟೆಯ ಹಾಗೆ ಜೀತದಾಳಾಗಿ ಬಾಳಬಾರದು. ತನ್ನ ಆಲೋಚನೆ ಆಸೆಗಳನ್ನು ಮುಚ್ಚಿಟ್ಟುಕೊಂಡು ಕಮರಿಸಬಾರದು. ಸ್ವತಂತ್ರವಾಗಿ ಆಲೋಚಿಸಬೇಕು. ತನಗೆ ಬೇಕಾದುದನ್ನು ತಾನೇ ಆಯ್ಕೆ ಮಾಡುವ ನಿರ್ಧಾರ ಅವಳದಾಗಿರಬೇಕು. ಆ ಪ್ರಯತ್ನದಲ್ಲಿ ಒಂದೊಂದು ಸಲ ಪ್ರಮಾದದಲ್ಲಿ ಸಿಕ್ಕಿಬೀಳಬಹುದು. ಪುರುಷನ ದುಡುಕಿಗೆ, ದುರಾಕ್ರಮಣ ಬುದ್ಧಿಗೆ ಸ್ತ್ರೀ ತಲೆಬಾಗುತ್ತಾಳೆ. ಅಷ್ಟು

ಮಾತ್ರಕ್ಕೆ ಅವನನ್ನು ಗಂಡನೇಂದು ಮುದ್ರೆಯೊತ್ತಿ, ಹೊತ್ತುತಂದು, ಬಲವಂತವಾಗಿ ಕರುಳು ಬಗ್ಗಿಸಿ ಅವನ ಕೈಯಿಂದಲೇ ತಾಳಿ ತಾಳಿ ಕಟ್ಟಿಸುತ್ತದೆ ಪುರುಷ ಪ್ರಧಾನ ಸಮಾಜ. ಅಂತಹ ಸಂದರ್ಭದಲ್ಲಿ ಧೈರ್ಯವಾಗಿ ವಿರೋಧಿಸುವ ಶಕ್ತಿ ಮತ್ತು ಮನಸ್ಥಿತಿ ಸ್ತ್ರೀಗೆ ಬೇಕು. ತನ್ನ ಅಭಿಪ್ರಾಯಗಳನ್ನು ಅಭಿರುಚಿಗಳನ್ನು ಅರ್ಥ ಮಾಡಿಕೊಂಡು ತನ್ನ ವ್ಯಕ್ತಿತ್ವವನ್ನು ಗೌರವಿಸುವ ವ್ಯಕ್ತಿಟ ಒಲಿದು ಬಂದಾಗ ನಡೆದಿದ್ದನ್ನೆಲ್ಲಾ ಮುಚ್ಚಿಡದೆ ಆತನ ಬಳಿ ಹೇಳಿಕೊಳ್ಳಬೇಕು. ಆಗ ಆತ ಸ್ವ–ಪ್ರೇರಣೆಯಿಂದ ಲಗ್ನ ಮಾಡಿಕೊಂಡರೆ ಮುಂದೇ ಆತ ಎಂದೂ ಹಿಂದಿನ ವಿಷಯವನ್ನುಮಾತನಾಡಲಾರ ಮಾತನಾಡಬಾರದು"[9]

"ಗರ್ಭವತಿಯಾಗುವುದು ಸ್ತ್ರೀಗೆ ಪ್ರಕೃತಿ ಕೊಟ್ಟ ವರ. ಅದರಲ್ಲಿ ನಾಚುವಂತದೇನೂ ಇಲ್ಲ. ಗರ್ಭವತಿಯಾದ ಮಾತ್ರಕ್ಕೆ ಪ್ರಪಂಚವೇನೂ ಹಾಳಾಗುವುದಿಲ್ಲ. ಅದು ಶಾಪವೇನು ಅಲ್ಲ. ಮಕ್ಕಳನ್ನು ಪಡೆಯುವ ಹಕ್ಕು ಸ್ತ್ರೀಗೆ ಇದೆ. ಮಗುವುಗೆ ಜನ್ಮ ಕೊಡಬೇಕೆ? ಬೇಡವೇ? ಎನ್ನುವುದನ್ನ ಹೆಂಗಸೇ ನಿರ್ಧರಿಸಿಕೊಳ್ಳಬೇಕು. ಹಡೆಯಬೇಕೆನಿಸಿದ, ಮಾತ್ರಕ್ಕೆ ಆ ಕನ್ಯೆಯನ್ನಾಗಲಿ, ಹಡೆದ ಮಗುವನ್ನಾಗಲಿ ಸಮಾಜ ಕೆಟ್ಟ ದೃಷ್ಟಿಯಿಂದ ನೋಡಬಾರದು. ಆ ಕನ್ಯೆಯನ್ನು, ಮಗುವನ್ನು ಗೌರವಿಸಬೇಕು, ಪೋಷಿಸಬೇಕು. ಹಗಂತ ಕಾನೂನು ಮಾಡಬೇಕು. ಅದಕ್ಕೆ ಬೇಕಾದ ಬದಲಾವಣೆಗಳನ್ನು ತರಬೇಕು. ಇಷ್ಟಪಟ್ಟು ಆಕೆಯನ್ನ ಲಗ್ನ ಮಾಡಿಕೊಂಡ ಮೇಲೆ ಆ ಸಮಾಜವಾಗಲಿ, ಕೈಯಿಂದಾಗಲಿ ಹಿಂಸಿಸಬಾರದು"[10]

ಈ ಮೇಲಿನ ಎರಡು ಮಾತುಗಳಲ್ಲಿ ಮಹಿಳಾ ಸಮಾನತೆಯ ಬಗೆಗೆ ಸ್ಪಷ್ಟ ನಿಲುವು ಇದೆ. ಪಿತೃವನ ಕಾದಂಬರಿಯಲ್ಲಿ ಬರುವ ಮೊದಲನೆ ಮಾತಿನಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ಕುರಿತ ವಿಶ್ಲೇಷಣೆಯಿದೆ. ಮಹಿಳೆಯ ನಿಜವಾದ ಸಿಟ್ಟು ಇರಬೇಕಾದದ್ದು ಕೇವಲ ಪುರುಷನ ಮೇಲಲ್ಲ. ಇಡೀ ವ್ಯವಸ್ಥೆಯ ಮೇಲಿರಬೇಕೆಂದು ನಿರೂಪಿಸುತ್ತಾರೆ. ಈ ದೇಶಸದಲ್ಲಿ ಸ್ವತಂತ್ರವೆಂದಾಗ ಅದು ಕೇವಲ ಶ್ರೀಮಂತ ಮಹಿಳೆಯರಿಗೆ ಮಾತ್ರ ಅನ್ವಯಿಸುತ್ತದೆ. ಎಂಬ ಮಾತು ಅರ್ಥ ಪೂರ್ಣವಾಗಿದೆ. ಇಲ್ಲಿಯ ಸ್ತ್ರೀ ಸಮಸ್ಯೆ ಪ್ರತ್ಯೇಕವಾಗಿ ನಿಲ್ಲದೆ ವರ್ಗ ಸಮಸ್ಯೆಯಲ್ಲಿ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತದೆ.

ಮೊದಲ ನುಡಿ ಪಿತೃವನ ಕಾದಂಬರಿಯ ಪ್ರಮುಖ ಪ್ರತಿಭಟನೆಯ ಧ್ವನಿಯಾಗಿದೆ. ಪುರಾಣ ಕಾಲದ ಯಯಾತಿ ಮಹಾರಾಜನ ಸಂದರ್ಭದಲ್ಲಿ ನಡೆದ ಮಹಿಳಾ ಶೋಷಣೆಯ ಮುಖಗಳನ್ನು ಪರಿಚಯಿಸಲಾಗಿದೆ. ಅಂದಿನ ಧರ್ಮದ ಬಗೆಗೆ, ಆ ವ್ಯವಸ್ಥೆಯನ್ನು ಹುಟ್ಟುಹಾಕಿದ ಯಜಮಾನಶಾಹಿ ವಿರುದ್ಧ ಲೇಖಕರು ಜಯಾಳ ಪಾತ್ರದ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಮಹಿಳಾ ಸಮಸ್ಯೆಗೆ ಹಿಂದೆ ಸಂಬಂಧಿಸಿದಂತೆ ಹಿಂದೆ ಉಲ್ಲೇಖಿಸಿದ ಮಾತುಗಳು ಮಹಿಳಾ ಸಮಸ್ಯೆಯನ್ನು ವಸ್ತುನಿಷ್ಠವಾಗಿ ನೋಡುವಲ್ಲಿ ಮತ್ತು ಅದಕ್ಕೆ ಸರಿಯಾದ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಉಪಯುಕ್ತವಾಗಿವೆ. ಅಲ್ಲದೆ ಮೌಲಿಕವಾಗಿದ್ದು ಸ್ತ್ರೀ ಸಮಾನತೆಯ ಅನಿವಾರ್ಯತೆಯನ್ನು ಕಾನೂನುರಿತ್ಯಾ ಹೋರಾಟದ ಮಹತ್ವವನ್ನು ಒತ್ತಿ ಹೇಳುತ್ತಿವೆ.

ಹೀಗೆ ಇವರ ಕಾದಂಬರಿಗಳಲ್ಲಿ ಬಡವರ ಬಗೆಗೆ ಕೇವಲ ಕರುಣೆಯಲ್ಲದೆ ಹೋರಾಟದ ಆಶಯಗಳಿವೆ. ಕೇವಲ ಉಪದೇಶಗಳಾಗಿರದೆ ಸಿದ್ದಾಂತಗಳಾಗಿವೆ. ಬಡವರನ್ನು ಶೋಷಿತರನ್ನು ರೊಚ್ಚಿಗೇಳಿಸಿ ಕೈಬಿಡುವ ವಿಧಾನವಾಗಿರದೆ, ಅವರ ಮೂಲಭೂತ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಅಪಾರವಾದ ಕಾಳಜಿಯಿದೆ.

"ಪ್ರಜೆಗಳು ಎಂದೂ ಜಾತಿ ಧರ್ಮದ ಗೆರೆಗಳನ್ನು ಎಳೆದುಕೊಳ್ಳುವುದಿಲ್ಲ. ಸರ್ಕಾರವೇ ತಲೆಕೆಟ್ಟ ಗೆರೆಗಳನ್ನೆಲ್ಲಾ ಎಳೆದುಬಿಟ್ಟಿದೆ. ಅಂತಸ್ತು, ಆರ್ಥಿಕ ಸ್ಥಿತಿ, ಸಾಮಾಜಿಕ ಪ್ರತಿಷ್ಠೆ ಇವು ಯಾವುದನ್ನೂ ಲೆಕ್ಕಿಸದೆ , ಜಾತಿ ಸಾತಿಗಳ ನಡುವೆ ಗೆರೆ ಎಳೆದು ಪರಸ್ಪರ ಹಲ್ಲು ಕಡಿದುಕೊಳ್ಳುವಂತೆ ಮಾಡಿದ್ದಾರೆ. ಹೀಗೆ ಮಾಡುವುದರಿಂದ ಯಾರಿಗೆ ಪ್ರಯೋಜನ? ಪ್ರಜೆಗಳಿಗೋ? ಪ್ರಭುಗಳಿಗೋ?"[11]

ಈ ಮೇಲಿನ ಮಾತುಗಳಲ್ಲಿ ಜಾತಿಯನ್ನು ಕಿತ್ತೊಗೆಯಬೇಕೆಂಬ ಹಂಬಲ ಮತ್ತು ಆಶಯವಿದೆ. ಜಾತಿಯತೆಯನ್ನು ವಿರೋಧಿಸುವುದು ಮನುಷ್ಯತ್ವವನ್ನು ಸಾರುವುದು ಲೇಖಕರ ಆಶಯವಾಗಿದೆ. ಸೂರಿಯವರು ತಮ್ಮ ಕಾದಂಬರಿಗಳಲ್ಲಿ ಮೌಲಿಕವಾದ ಆಶಯವನ್ನು ಪ್ರಸ್ತುತಪಡಿಸುವುದರ ಮೂಲಕ ಮಹಿಳಾ ಸಮಸ್ಯೆಗಳ ಬಗೆಗೆ, ಶೋಷಿತರ ಬದುಕಿನ ಬಗೆಗಿರುವ ಮಾನವೀಯ ನೆಲೆಯನ್ನು ಕಥನ ಸಾಹಿತ್ಯದ ಮುಖೇನ ಅಮೂಲ್ಯವಾದ ವಿಚಾರಗಳನ್ನು ನಿರೂಪಿಸಿದ್ದಾರೆ.

**ಸಂಭಾಷಣೆ**

ಕಾದಂಬರಿ ಸಾಹಿತ್ಯ ಪ್ರಕಾರದಲ್ಲಿ ಸಂಭಾಷಣೆಗಳಿಗೆ ಒಂದು ವಿಶಿಷ್ಟವಾದ ಆಕರ್ಷಣೆಯಿರುತ್ತದೆ. ಸಂಭಾಷಣೆಗಳು ಕಾದಂಬರಿಕಾರನ ಅಭಿವ್ಯಕ್ತಿಯ ಅನುಕೂಲಕ್ಕಾಗಿ ಬರುತ್ತವೆ. ಕೆಲವು ಕಾದಂಬರಿಗಳಲ್ಲಿ ಸಂಭಾಷಣೆಗಳೇ ಇಲ್ಲದೆ ಲೇಖಕನೆ ನೇರವಾಗಿ ಕಥೆಯ ಸನ್ನಿವೇಶವನ್ನು ವಿವರಿಸಬಹುದು. ಕಾದಂಬರಿಕಾರ ಮಾತುಗಳ ಅರ್ಥ ವಿವರಣೆಯನ್ನು, ಆ ಸಂದರ್ಭದ ಹಿನ್ನೆಲೆಯನ್ನು ವಿವರಿಸಿದಾಗ ಓದುಗನಿಗೆ ಕಾದಂಬರಿ ಹೆಚ್ಚು ಸರಳವಾಗಿ ಮತ್ತು ಕುತೂಹಲಕಾರಿಯಾಗಿ ಕಾಣುತ್ತದೆ. ನಾಟಕದಲ್ಲಿ ಇಂತಹ ಅವಕಾಶ ಇರುವುದಿಲ್ಲ. ಅಲ್ಲಿ ಕೇವಲ ಸಂಭಾಷಣೆಗಳಿರುತ್ತವೆ. ಅಂತೆಯೇ ನಾಟಕವನ್ನು ಓದುವುದಕ್ಕಿಂತ ನೋಡುವುದರಿಂದ ಆನಂದವುಂಟಾಗುತ್ತದೆ. ಒಂದು ಕಾದಂಬರಿಯಲ್ಲಿ ನಾಟಕದ ಬಹುಭಾಗವಿರುತ್ತದೆ. ನಾಟಕದಲ್ಲಿ ಕಾದಂಬರಿಯ ಭಾಗ ಇರಲಾರದು. ಒಂದು ಕಾದಂಬರಿಯನ್ನು ನಾಟಕಕ್ಕೆ ರೂಪಾಂತರಿಸಬಹುದೆ ಹೊರತು ನಾಟಕವನ್ನು ಕಾದಂಬರಿಗೆ ರೂಪಾಂತರಿಸಲು ಬರುವುದಿಲ್ಲ. ಹೀಗಾಗಿ ಕಾದಂಬರಿಯಲ್ಲಿ ಸಂಭಾಷಣೆಗಳಿಗೆ ತನ್ನದೇ ಆದ ವೈಶಿಷ್ಟ್ಯತೆ ಇರುತ್ತದೆ.

ಸೂರಿಯವರ ಕಾದಂಬರಿಗಳಲ್ಲಿ ಎರಡು ರೀತಿಯ ಸಂಭಾಷಣೆಗಳನ್ನು ಗುರುತಿಸಬಹುದಾಗಿದೆ. ಹಳ್ಳಿ ಜನಜೀವನವನ್ನು ಚಿತ್ರಿಸುವ ಸಂದರ್ಭದಲ್ಲಿ ಹಳ್ಳಿಗರು, ಕೊಳಚೆ ಕೊಂಪೆ ಜನರು ಆಡುವ ಗ್ರಾಮ್ಯ ಭಾಷೆಯ ಸಂಭಾಷಣೆಗಳು ಹೆಚ್ಚು ಪರಿಣಾಮಕಾರಿಯೆನಿಸುತ್ತವೆ. ನಗರ ಜೀವನದ ಕಥಾವಸ್ತುವಿನಲ್ಲಿ ನಗರದಲ್ಲಿ ಆಡುವ ಆಡುಮಾತುಗಳ ಸಂಭಾಷಣೆಗಳನ್ನು ತುಂಬಾ ಸರಳವಾದ ರೀತಿಯಲ್ಲಿ ಬರೆದಿದ್ದಾರೆ. ಆದರೆ ಇವರ ಯಾವ ಸಂಭಾಷಣೆಯಲ್ಲೂ ಕೃತಕತೆ ಕಂಡು ಬರುವುದಿಲ್ಲ, ಕಾದಂಬರಿ ನಗರ ಜೀವನವನ್ನೇ ಹೇಳಲಿ, ಇಲ್ಲವೆ ಗ್ರಾಮೀಣ ಬದುಕಿನದ್ದೇ ಇರಲಿ, ಯಾವುದಿದ್ದರೂ ಅದರಲ್ಲಿ ಬರುವ ಸಂಭಾಷಣೆಗಳು ನೈಜವಾಗಿವೆ. ಹಳ್ಳಿ ಮತ್ತು ನಗರ ಇವರಡರ ಸಂಪರ್ಕವನ್ನೂ ಹೊಂದಿರುವ ಲೇಖಕ ಆಯಾ ಸಂದರ್ಭದ ಕಥಾವಸ್ತುವಿಗೆ ಮತ್ತು ಪರಿಸರಕ್ಕೆ ತಕ್ಕಂತೆ, ಪಾತ್ರಗಳ ಮೂಲಕ ಸಂಭಾಷಣೆಗಳನ್ನು ತುಂಬಾ ಅಚ್ಚುಕಟ್ಟಾಗಿ ಹೇಳಿಸಿದ್ದಾರೆ.

“ಇದ್ಯಾಕೋ ಚಿಕ್ಕೀರ, ಮಂಕ್ ಬಡ್ದೋನಂತೆ ಕುಂತ್ಯಲ್ಲೊ”[12]

“ಅಪ್ಪಾ ನಿಮ್ ದಮ್ಮಯ್ಯ ಅಂತೀನಿ, ಬೆವರು ಸುರಿಸಿ ದುಡಿದ ದುಡ್ಡು. ಹೋರಿ ತರಾಕಂತ ಬಂದೀವಿ. ಕೈ ಮುಗಿತೀವಿ, ನಿಮ್ ಕಾಲಿಗೆ ಬಿಳ್ತೀವಿ, ದಮ್ಮಯ್ಯ ನಮ್ಮ ಹಣ ನಮಗೆ ಕೊಡ್ರಿ”[13]

“ಎಲ್ಡ್ ಜೊತೆ ಹೋರಿ ಬೇಕಿದ್ದವು ಕಣಣ್ಣಾ । ಕೊಂಡ್ಕೊಂಡ್ ಬರಾನ ಅಂತ”[14]

ಮೇಲಿನ ಎರಡು ಸಂಭಾಷಣೆಗಳು ಕ್ರಮವಾಗಿ ‘ತೋಟದ ಮನೆ’ ಮತ್ತು ‘ಶ್ರೀಗುರು ನಿರ್ವಾಣ ಸಿದ್ಧರು’ ಕಾದಂಬರಿಯಿಂದ ಅಯ್ದುಕೊಂಡವುಗಳು. ಹಳ್ಳಿಗರ ನೆಲದ ಮಾತು ಇಲಿ ನೈಜವಾಗಿ ಮೂಡಿಬಂದಿವೆ. ಅನೇಕ ಗ್ರಾಂಥಿಕ ಪದಗಳನ್ನು ಹಳ್ಳಿಗರು ತಮ್ಮ ನಾಲಗೆಗೆ ತಕ್ಕಂತೆ ಜೋಡಿಸಿಕೊಂಡು ಅವುಗಳಿಗೆ ಒಂದು ಹೊಸ ಸ್ಪರ್ಶ ಕೊಡುತ್ತಾರೆ. ಆಗ ಅವು ಕೇಳುವುದಕ್ಕೂ ಕುತೂಹಲಕಾರಿಯಾಗುತ್ತವೆ. ವ್ಯಾಕರಣಕಾರರು ಏನೇ ಹೇಳಿದರೂ ಗ್ರಾಮೀಣ ಜನರೇ ನಿಜವಾದ ಹೊಸ ಭಾಷೆಯನ್ನು

ಬೆಳೆಸುವವರು. ಈ ಸತ್ಯವನ್ನು ಲೇಖಕ ತಮ್ಮ ಕಾದಂಬರಿಗಳಲ್ಲಿ ಬರುವ ಅನೇಕ ಅಡುಮಾತಿನ ಸಂಭಾಷಣೆಗಳಲ್ಲಿ ತೋರಿಸಿದ್ದಾರೆ. 'ಎತ್ತು' ಪದ ಇಲ್ಲಿ 'ಹೋರಿ' ಆಗಿದೆ, 'ಮಂಕು' 'ಮಂಕ್' ಆಗಿದೆ. 'ಎರಡು' 'ಎಲ್ಡ್' ಆಗಿದೆ : 'ಕೊಂಡುಕೊಂಡು' ಎಂಬುದು 'ಕೊಂಡ್ಕೊಂಡ್' ಆಗಿದೆ. ಇಂತಹ ಅನೇಕ ಗ್ರಾಮೀಣ ಪದಗಳನ್ನು ಇವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಸೂರಿಯವರ ಸಂಭಾಷಣೆಗಳಲ್ಲಿ ಅದರಲ್ಲೂ ಗ್ರಾಮೀಣ ಜನರು ಆಡುವ ಸಂಭಾಷಣೆಗಳಲ್ಲಿ ಹೆಚ್ಚು ತೀಕ್ಷ್ಣತೆ ಇದ್ದು. ಸಂಭಾಷಣೆಯ ಕೊನೆ ಮಾತ್ರ ಬಹಳ ಪರಿಣಾಮಕಾರಿಯಾಗಿರುತ್ತದೆ. 'ತೋಟದ ಮನೆ' ಕಾದಂಬರಿಯಲ್ಲಿ ತನ್ನ ಕಲ್ಲಕ್ಕ ತಿಮ್ಮವ್ವನನ್ನು ಶ್ರೀಮಂತನಾದ ಗೌಡನೊಂದಿಗೆ ಹೊಂದಿಕೆ ಮಾಡುತ್ತಾಳೆ. ಆಗ ತಿಮ್ಮವ್ವ ಅತ್ಯಾಚಾರಕ್ಕೆ ಒಳಗಾಗುವುದರೊಂದಿಗೆ ಪ್ರತಿಭಟಿಸಿ ಹೊರಬರುವಾಗ ಕೊಲೆಗೀಡಾಗುತ್ತಾಳೆ. ಅವಳ ಶವವನ್ನು ತೋಟದಲ್ಲಿಯೆ ಮುಚ್ಚಿಹಾಕಿದಾಗ ಚಿಕ್ಕೀರಯ್ಯ ತಿಮ್ಮವ್ವ ಕಾಣೆಯಾಗಿರುವ ಬಗ್ಗೆ ಕೇಳುತ್ತಾನೆ. ಉಳ್ಳವರ ಪರವಾಗಿದ್ದು ಬಡವರನ್ನು ಕುರಿತು ಏನು ಬೇಕಾದರೂ ಮಾತನಾಡುವ ಜನರ ಮನಸ್ಥಿತಿಯನ್ನು ಸ್ಪಷ್ಟಪಡಿಸುತ್ತದೆ.

"ಇನ್ನೇನ್ಮಾಡಾಕಾಯ್ತದೆ ತಾಯಂತೆ ಮಗ್ಳು, ನೂಲ್ನಂತೆ ಸೀರೆ' ಅಂತ ಅಷ್ಟಿಲ್ದೆ ಗಾದೇ ಕಟ್ಟವ್ರಾ ಹಿರೀಕ್ರು"[15]

ಈ ಸಂಭಾಷಣೆಯನ್ನು 'ತೋಟದ ಮನೆ' ಕಾದಂಬರಿಯಿಂದ ಆಯ್ದುಕೊಂಡವುಗಳಾಗಿವೆ. ಇಲ್ಲಿಯ ವಿಶಿಷ್ಟತೆ ಕೇವಲ ಗ್ರಾಮ್ಯ ಭಾಷೆಯೊಂದೇ ಆಗಿರದೆ, ವಸ್ತುವಿನಲ್ಲಿಯೂ ಸಾಮ್ಯತೆ ಇದೆ. ಈ ಸಂಭಾಷಣೆಯಲ್ಲಿ ಕಲ್ಲಕ್ಕನ ಪರವಾಗಿ ಹನುಮಕ್ಕ ಮತ್ತು ಚಿಕ್ಕೀರಯ್ಯನ ಅಳಿಯನ ನಡುವೆ ತೀವ್ರವಾದ ಮಾತಿನ ಸೆಣಸಾಟವಿದೆ.

ಇಲ್ಲಿಯವರೆಗೆ ಗ್ರಾಮೀಣ ಜನತೆಯ ಸಂಭಾಷಣೆಗಳು ಸೂರಿಯವರ ಕಾದಂಬರಿಗಳಲ್ಲಿ ಬಳಕೆಯಾದ ಬಗೆಯನ್ನು ನೋಡಲಾಯಿತು. ಮುಂದೆ ನಗರದ ಜನರ ಸಂಭಾಷಣೆಗಳನ್ನು ಲೇಖಕರು ಹೇಗೆ ಸರಳಗೊಳಿಸಿದ್ದಾರೆ ಎಂಬುದನ್ನು ನೋಡಬಹುದಾಗಿದೆ.

"ಇದುವರೆಗೆ ಸಿಕ್ಕಿ ಸ್ವೇಚ್ಛಾ ಸ್ವಾತಂತ್ರ್ಯದಿಂದಾಗಿ ಗಂಡಸರು ಹಾಳಾಗಿ ಹೋದರು. ಇನ್ನು ಹೆಂಗಸರ ಸರದಿ ಅಂತ ಕಾಣ್ಸುತ್ತೆ, ಗಂಡ ಕೆಟ್ಟರೆ ಗೃಹಿಣಿ ಮಕ್ಕಳನ್ನಾದರು ಸರಿಯಾಗಿ ನೋಡ್ಕೊಳ್ತಾಳೆ. ಅದಕ್ಕೆ ಹೆಂಗಸು ಆದಿಲಕ್ಷ್ಮಿ ಗೃಹ ಲಕ್ಷ್ಮಿ ಆದಳು. ಆದರೆ ಹೆಂಗಸು ಕೆಟ್ಟರೆ ಮಕ್ಕಳು ಮುದುಕರ ಗತಿಯೇನು?"[16]

ಇವೆರಡೂ ಸಂಭಾಷಣೆಗಳಲ್ಲಿ ಸಾಮಾಜಿಕ ಬದುಕಿನ ಮೌಲ್ಯಗಳ ಹುಡುಕಾಟವಿದೆ.ಎರಡು ಸಂಭಾಷಣೆಗಳನ್ನು 'ಪಿತೃವನ' ಕಾದಂಬರಿಯಿಂದ ಆಯ್ದುಕೊಳ್ಳಲಾಗಿದೆ. ಕುಟುಂಬದಲ್ಲಿ ಸ್ತ್ರೀಯ ಪಾತ್ರವೇನು ಎಂಬುದನ್ನು ಕಾದಂಬರಿಯ ಪಾತ್ರವಾದ ಸೂರಿ ಹೇಳುವುದಾಗಿದೆ. ಹೀಗೆ ಬದುಕಿನ ಅನೇಕ ಸಂದರ್ಭಗಳನ್ನು ಎತ್ತಿಕೊಂಡು ಆಯಾ ಪಾತ್ರಗಳ ಮೂಲಕ ಸಂಭಾಷಣೆಗೆ ಹಚ್ಚುವ ಲೇಖಕರ ಈ ಮಾತುಗಳಲ್ಲಿ ಬದುಕಿನ ಅನುಭವವಿದೆ. ಅನೇಕ ಹೊಸ ಮೌಲ್ಯಗಳ ಹುಡುಕಾಟವಿದೆ.

**ವರ್ಣನೆ**

ಸೂರಿಯವರ ಕಾದಂಬರಿಗಳಲ್ಲಿ ಬರುವ ಪ್ರಕೃತಿ ವರ್ಣನೆ, ಪಾತ್ರ ವರ್ಣನೆ, ಸನ್ನಿವೇಶ ವರ್ಣನೆ ಇವೆಲ್ಲಾ ಅತ್ಯಂತ ಸಮಯೋಚಿತವಾಗಿ ಮೂಡಿಬಂದವುಗಳಾಗಿವೆ. ಅವರ ಕಾದಂಬರಿಗಳಲ್ಲಿ ಬರುವ ಅನೇಕ ವಾಕ್ಯಗಳು ಸುಂದರವಾದ ಕಾವ್ಯದಂತೆ ಕಮನೀಯತೆಯನ್ನು ತುಂಬಿಕೊಂಡಿವೆ.

ಪ್ರಕೃತಿ ವರ್ಣನೆ ಬಹಳಷ್ಟು ಕಡೆ ಬಂದಿದೆ. ಪಾತ್ರಚಿತ್ರಣದ ಪರಿಣಾಮಕಾರಿ ವರ್ಣನೆ ಕೆಲವು ಕಾದಂಬರಿಗಳಲ್ಲಿ ಬಂದಿದೆ.ಹೊಸ ಚಿಗುರು, ತೋಟದ ಮನೆ, ಗುರು,ಮುಂತಾದ ಕಾದಂಬರಿಗಳಲ್ಲಿ ಪ್ರಕೃತಿ

ವರ್ಣನೆ ಮೂಡಿ ಬಂದಿದೆಯಾದರೂ, ಶ್ರೀಗುರುನಿರ್ವಾಣಸಿದ್ಧರು ಕಾದಂಬರಿಯಲ್ಲಿ ವಿಶೇಷವಾಗಿ ಮತ್ತು ನೈಜವಾಗಿ ಮೂಡಿಬಂದಿದೆ.

"ಅರ್ಧರಾತ್ರಿಯ ಸಮಯ, ಹಾಲು ಚೆಲ್ಲಿದಂತಹ ಬೆಳದಿಂಗಳು ದಟ್ಟವಾಗಿ ಹರಡಿತ್ತು, ಅಲ್ಲಲ್ಲಿ ಗೂಬೆಗಳ ಪೂತ್ಕಾರ. ಹುಳು ಉಪ್ಪಟೆಗಳ ಕೊರಳ ಸಾವಿರ ಸದ್ದಿನ ಗರಗಸ ನಿಶ್ಯಬ್ಧತೆಯನ್ನೇ ಕೊಯ್ಯುತ್ತಿತ್ತು. ಎತ್ತಲಿಂದಲೋ ಸಾಗಿ ಬಂದ ಮೋಡವೊಂದು ತುರುವಿಕಲ್ ಬೆಟ್ಟದ ಮೇಲಿನ ಅಕಾಶದಲ್ಲಿ ಶ್ರಾವಣ ಚಂದ್ರನೊಂದಿಗೆ ಆಟವಾಡುತ್ತಿತ್ತು..."[17]

ಈ ವರ್ಣನೆಯನ್ನು ಕ್ರಮವಾಗಿ ಶ್ರೀಗುರು ನಿರ್ವಾಣಸಿದ್ಧರು ಕಾದಂಬರಿಯಿಂದ ಆಯ್ದುಕೊಂಡಿದ್ದಾಗಿದೆ. ಸೂರಿಯವರ ಪ್ರಾರಂಭದ ಕಾದಂಬರಿಗಳಲ್ಲಿ ವಸ್ತು, ಆಶಯ, ಧೋರಣೆಯ ದೃಷ್ಟಿಯಿಂದ ಅಂತಹ ವಿಶಿಷ್ಟ ಕೊಡುಗೆ ಕಾಣಿಸದಿದ್ದರೂ, ಅವರ ಪ್ರಾರಂಭದ ಕಾದಂಬರಿಗಳ ಸರಳ ಶೈಲಿ, ಸಹಜ ಸುಂದರ ವರ್ಣನೆ, ಶಿಸ್ತಿನ ಪ್ರತಿ ಪಾದನೆ ಇವೆಲ್ಲಾ ಓದುಗರನ್ನು ಆಕರ್ಷಿಸಿವೆ. 'ಸಂಧ್ಯಾ ಸೂರ್ಯನ ಹೊಂಗಿರಣಗಳು ಅಡಿಕೆ ಮರಗಳ ಸಂದಿಗಳಿಂದ ತೂರಿ ಬಂದು ಅಂಗಾತ ಮಲಗಿದ್ದ ಚಂದ್ರನ ಮುಖದ ಮೇಲೆ ಹರಡಿದವು......"[18] ಮತ್ತು 'ರಾಜನ ಗಂಭೀರತೆ, ಅಬ್ಬರದ ಭೋರ್ಗರೆತ, ಬಾಣದ ವರ್ಣರಂಜಿತ ತುಷಾರ ತುಂತುರುಗಳಲ್ಲಿ ಕಾಣುವ ಅಸಂಖ್ಯಾ ಕಾಮನ ಬಿಲ್ಲುಗಳು, ರಾಣಿಯು ನೊರೆ ನೊರೆಯಾಗಿ ಹಾಲಿನಂತೆ ಹರಿದಿಳಿಯುವ ಪ್ರವಾಹ......'[19]

ಇಂತಹ ಸಾಲುಗಳು ಯಾವ ಉತ್ತಮ ಕಾವ್ಯಕ್ಕೂ ಕಡಿಮೆಯಿಲ್ಲ. ಇಂತಹ ಅನೇಕ ಔಚಿತ್ಯ ವರ್ಣನೆಗಳನ್ನು ತಮ್ಮ ಕಾದಂಬರಿಗಳಲ್ಲಿ ಕೊಟ್ಟಿದ್ದಾರೆ.

ನಾಲ್ಕೂ ಕಾದಂಬರಿಗಳಿಂದ ಆಯ್ದುಕೊಂಡ ಈ ಮೇಲಿನ ನಾಲ್ಕು ವರ್ಣನೆಗಳು ಉತ್ತಮವಾದ ಕಾವ್ಯದಂತಿವೆ. ಚೈತ್ರಮಾಸದ ವರ್ಣನೆ, ಸಂಕ್ರಾಂತಿಯ ವರ್ಣನೆ, ಮೊದಲ ಮಳೆ ಬಿದ್ದ ಸಂದರ್ಭ, ನದಿಯ ಭೋರ್ಗರೆತ ಇವೆಲ್ಲವುಗಳನ್ನೂ ಲೇಖಕರು ಆಯಾ ಕಾದಂಬರಿಯ ಸನ್ನಿವೇಶಕ್ಕೆ ತಕ್ಕಂತೆ ಪೋಣಿಸಿದ್ದಾರೆ.'ಹಾಲು ಚೆಲ್ಲಿದಂತಹ ಬೆಳದಿಂಗಳು', 'ಸಂಧ್ಯಾ ಸೂರ್ಯನ ಹೊಂಗಿರಣಗಳು', 'ಬಾಣದ ವರ್ಣರಂಜಿತ ತುಷಾರ ತುಂತುರುಗಳಲಿ'–ಈ ಮುಂತಾದ ವರ್ಣನೆಯ ಸಾಲುಗಳಲ್ಲಿರುವ ಹೋಲಿಕೆ ಅದ್ಭುತವಾಗಿದೆ. ಪ್ರತಿಯೊಬ್ಬ ಉತ್ತಮ ಲೇಖನಲ್ಲೂ ಒಬ್ಬ ಕವಿ ಆಡಗಿರುತ್ತಾನೆ. ಎನ್ನುವ ಮಾತಿಗೆ ಇವರ ಕಾದಂಬರಿಗಳು ನಿದರ್ಶನವಾಗಿವೆ. ಪ್ರಕೃತಿಯ ಬದಲಾವಣೆಗಳನ್ನು, ಅದರ ಭವ್ಯತೆಯನ್ನು ವರ್ಣನೆಯ ಸನ್ನಿವೇಶಗಳು ತುಂಬಾ ಸೊಗಸಾಗಿ ಕಟ್ಟಿಕೊಡುತ್ತವೆ.

**ತಂತ್ರ**

ಸಾಹಿತ್ಯದಲ್ಲಿ ತಂತ್ರ ಕೂಡ ಅಲಂಕಾರ, ಉಪಮೆಗಳಂತೆ ಪರಿಣಾಮಕಾರಿ ಗುಣವನ್ನೊಳಗೊಂಡಿದೆ.ಇದು ಶೈಲಿಯ ಒಂದು ಭಾಗವಾಗಿ, ಅಭಿವ್ಯಕ್ತಿಯ ಒಂದು ವಿಧಾನವಾಗಿ ಸಾಹಿತ್ಯಕೃತಿಗಳಲ್ಲಿ ಬಳಕೆಯಾಗುತ್ತದೆ. ಸಾಮಾನ್ಯ ಓದುಗರಿಗೆ 'ತಂತ್ರ' ಎನ್ನವು ಈ ಪದ ಮೊದಲ ಬಾರಿಗೆ ಆಶ್ಚರ್ಯ ಮತ್ತು ಅಂಜಿಕೆಗಳೆರಡನ್ನೂ ಹುಟ್ಟಿಸಬಹುದು. ಎಷ್ಟೋ ಕೃತಿಗಳಲ್ಲಿ ಹೇಳಬೇಕಾದುದನ್ನು ಸರಳವಾಗಿ ಹೇಳಲಾಗಿದೆ. ಅಲ್ಲಿ ತಂತ್ರದ ಮಾತು ಎಲ್ಲಿ ಬಂತು? ಎಂದು ಅನ್ನಿಸುವುದೂ ಉಂಟು. ಆದರೆ ಅಂತಹ ಸರಳ ಕೃತಿಯೂ ಕೂಡ ವಿಶ್ಲೇಷಣೆಗೆ ಸಿಕ್ಕಾಗ ಸಂಕೀರ್ಣವಾಗಿ ಕಾಣುತ್ತದೆ. ತಂತ್ರಕ್ಕೂ ಕೃತಿಯ ಪರಿಣಾಮಕ್ಕೂ ಅರ್ಥಪೂರ್ಣ ಸಂಬಂಧವಿದೆ.

"ನಿಜವಾಗಿ ಒಂದು ಸಾಹಿತ್ಯಕೃತಿಯನ್ನು ಓದುವುದು ಎಂದರೆ ಒಂದು ಬಗೆಯ ಪ್ರಯಾಣ.ಈ ಪ್ರಯಾಣದಲ್ಲಿ ಒಂದು ನಿಯಂತ್ರಣವಿದೆ. ಈ ನಿಯಂತ್ರಣವೇ ಅದರ ತಂತ್ರ...ಕವಿ ತನ್ನ ಜೀವನನುಭವವನ್ನು ಓದುಗನಿಗೆ ಸಂವಹನಗೊಳಿಸಲು ಅನುಭವವನ್ನು ವ್ಯವಸ್ಥೆಗೊಳಿಸುವ ವಿಧಾನವೇ ಕೃತಿಯ ತಂತ್ರ.ಯಶಸ್ವಿಯಾದ ಸಾಹಿತ್ಯಕೃತಿಯಲ್ಲಿ

ತಂತ್ರ, ಕೃತಿಯಲ್ಲಿನ ಅನುಭವಕ್ಕೆ ಶರೀರ ನೀಡುವ ವಿಧಾನ."[20] ಹೀಗೆ ಸಾಹಿತ್ಯದಲ್ಲಿ ತಂತ್ರದ ಬಳಕೆಯ ಬಗೆಗೆ ಎಲ್.ಎಸ್. ಶೇಷಗಿರಿರಾವ್ ರೀತಿ ಅಭಿಪ್ರಾಯಪಟ್ಟಿದ್ದಾರೆ. ಒಟ್ಟಾರೆ ಸಾಹಿತ್ಯಕೃತಿಯೊಂದರಲ್ಲಿ ಬಳಕೆಯಾಗುವ ತಂತ್ರ, ಸಾಹಿತ್ಯ ಕೃತಿಯ ವಸ್ತು, ಧೋರಣೆ, ಆಶಯಗಳನ್ನು ಸ್ಪಷ್ಟಪಡಿಸಲು, ಪರಿಣಾಮ ಕಾರಿಯಾಗಿಸಲು ಬಳಸಲ್ಪಡುವ ಒಂದು ವಿಧಾನವೆಂದು ಅರ್ಥೈಸಿಕೊಳ್ಳಬಹುದಾಗಿದೆ.

ಸಿ.ಎನ್.ರಾಮಚಂದ್ರನ್ ಅವರ 'ಸಾಹಿತ್ಯವಿಮರ್ಶೆ' ಕೃತಿಯ ಏಳನೆಯ ಅಧ್ಯಾಯದ 'ಕಥನ ಶಾಸ್ತ್ರ' ಎಂಬ ವಿಮರ್ಶಾ ಲೇಖನದಲ್ಲಿ ಕೃತಿಯನ್ನು ರಚಿಸುವಾಗ ಲೇಖಕನಾದವನು ಅನುಸರಿಸುವ ಮತ್ತು ಓದುಗನು ಗ್ರಹಿಸುವ ಐದು ಸಂಹಿತೆಗಳನ್ನು ಸೂಚಿಸುತ್ತಾರೆ. ಅವು ಹೀಗಿವೆ. '1. ಘಟನಾಸೂತ್ರಸಂಹಿತೆ, 2. ರಹಸ್ಯ ಸಂಹಿತೆ, 3. ಸಾಂಸ್ಕೃತಿಕ ಸಂಹಿತೆ, 4. ನಿರ್ದೇಶನಾ ಸಂಹಿತೆ, ಹಾಗೂ 5. ಸಂಕೇತ ಸಂಹಿತೆ'[21] ಈ ಎಲ್ಲಾ ಅಂಶಗಳು ಸೂರಿಯವರ ಕಾದಂಬರಿಗಳಲ್ಲಿ ಕಂಡು ಬರುತ್ತದೆ. ಸಾಂಸ್ಕೃತಿಕ ಸಂಹಿತೆಯನ್ನು ಸೂರಿಯವರ ಸೃಜನಶೀಲ ಕೃತಿಗಳಲ್ಲಿ ಯಥೇಚ್ಛವಾಗಿ ಕಾಣಬಹುದು. ಸಾಂಸ್ಕೃತಿಕ ಸಂಹಿತೆಯನ್ನು ಹೊರತುಪಡಿಸಿದರೆ ಉಳಿದ ನಾಲ್ಕು ಸಂಹಿತೆಗಳು ಸೂರಿಯವರ ಅನುವಾದ ಸಾಹಿತ್ಯದಲ್ಲಿ ಗಮನಿಸಬಹುದು.

ಸೂರಿ ಅವರ ಕಾದಂಬರಿಗಳು ತುಂಬಾ ಸರಳವಾಗಿವೆ. ಓದುಗನಿಗೆ ಕ್ಲಿಷ್ಟವೆನಿಸುವ ಯಾವ ಪ್ರಸಂಗವೂ ಅಲ್ಲಿಲ್ಲ. ಕಥೆಯನ್ನು ಅವರು ಸರಳವಾಗಿ, ನೇರವಾಗಿ, ಸ್ಪಷ್ಟವಾಗಿ ಹೇಳಿದ್ದರೂ ಅದರ ಪರಿಣಾಮಕಾರಿ ತೀಕ್ಷ್ಣತೆಗಾಗಿ ಅವರು ಬಳಸುವ ಭಾಷೆ, ಹೇಳುವ ರೀತಿ, ವಿಧಾನ ಇವು ಕಾದಂಬರಿಯ ವಿಶ್ಲೇಷಣೆಗೆ ತೊಡಗಿದಾಗ ತುಂಬಾ ಮುಖ್ಯವೆನಿಸುತ್ತವೆ.

ಸೂರಿಯವರಸೃಜನಶೀಲ ಕಾದಂಬರಿಗಳಾದ 'ಹೊಸ ಚಿಗುರು"ತೋಟದ ಮನೆ "ಪಿತೃವನ" ಶ್ರೀಗುರು ನಿರ್ವಾಣ ಸಿದ್ದರು' 'ಗುರು' ಶೀತಾಗ್ನಿ ಕಾದಂಬರಿಗಳಲ್ಲಿ ಅವರು ಕಥೆ ಹೇಳುವ ವಿಧಾನವನ್ನು ವೈವಿಧ್ಯತೆಗಳನ್ನು ಗುರುತಿಸುವ ಮೂಲಕ ತಂತ್ರದ ವೈಶಿಷ್ಟ್ಯತೆಯನ್ನು ಗುರುತಿಸಬಹುದಾಗಿದೆ.

'ತೋಟದ ಮನೆ' ಮತ್ತು ಹೊಸಚಿಗುರು ಕಾದಂಬರಿಗಳು ಒಂದೇ ತಂತ್ರವನ್ನು ಒಳಗೊಂಡಿದ್ದರು, ವಸ್ತು ಮತ್ತು ಪಾತ್ರಗಳು ಭಿನ್ನವಾಗಿರುವುದರಿಂದ ಇದೇ ತಂತ್ರವನ್ನು ಕಾದಂಬರಿಕಾರರು ಬಳಸಿದ್ದಾರೆ. ತೋಟದ ಮನೆ ಕಾದಂಬರಿಯು ಮೊದಲಿಗೆ ಕೃಷಿಕ ಜನಾಂಗದ ಬದುಕನ್ನು ವರ್ಗ ಪ್ರಜ್ಞೆಯ ಹಿನ್ನೆಲೆಯಲ್ಲಿ ಹೇಳಿದೆ. ಕೃಷಿಕರ ಮೂಲ ಕಸುಬಾದ ಕೃಷಿ ಕಾಯಕದ ಬಗೆಗೆ, ಇಲ್ಲಿ ವಿಶೇಷ ಒತ್ತು ಕೊಡಲಾಗಿದೆ.

ಈ ಕಾದಂಬರಿಯಲ್ಲಿ ಮುಖ್ಯವಾಗಿ ಮೂರು ಹಂತಗಳನ್ನು ಕಾಣಬಹುದು. ಮೊದಲಿಗೆ ಚಿಕ್ಕೀರಯ್ಯ ಕೃಷಿಯಲ್ಲಿ ತೋರುವ ಆಸಕ್ತಿ ಮತ್ತು ಹೊಸ ಕೃಷಿ ಬಗೆಯ ಪ್ರಯೋಗಗಳನ್ನು ಮಾಡುವುದು. ಎರಡನೆಯದಾಗಿ ಮಳೆಯ ಮತ್ತು ನೀರಿನ ಅಭಾವದಿಂದಾಗಿ ಬೆಳೆ ಕೈಕೊಟ್ಟು ಸಾಲಗಾರನಾಗಿ ತನ್ನ ಇಡೀ ಕುಟುಂಬವೇ ಕೂಲಿಗೆ ಹೋಗುವುದು. ಮೂರನೆಯದು ಚಿಕ್ಕೀರಯ್ಯನ ಮಗಳು ತಿಮ್ಮವ್ವ ಗೌಡನಿಂದ ಅತ್ಯಾಚಾರಕ್ಕೆ ಒಳಗಾಗಿ, ಕೊಲೆಯಾಗುವುದರೊಂದಿಗೆ ತನ್ನ ತಮ್ಮನ ಕೊಲೆಯಾಗಿ ರಾಮುವಿನಿಂದ ತನಿಖೆಗೆ ಒಳಪಡಿಸಿ ಆರೋಪಿಗಳಿಗೆ ಶಿಕ್ಷೆಯನ್ನು ಕೊಡಿಸುವುದರೊಂದಿಗೆ ರಾಮು ಮತ್ತು ಜ್ಯೂಲಿಯ ಮಧ್ಯೆ ಪ್ರೇಮ ಬೆಳೆದು ಮದುವೆಯಾಗುವುದರೊಂದಿಗೆ ಕಾದಂಬರಿಯ ಮುಕ್ತಾಯವಾಗುತ್ತದೆ. ಈ ಮಧ್ಯೆ ಲೇಖಕರು ಕೊಲೆಯ ರಹಸ್ಯವನ್ನು ಬಿಡಿಸುವ ತಂತ್ರವು ಸ್ವಾರಸ್ಯಕರವಾಗಿದೆ. "ಗೌಡನಿಂದ ಅತ್ಯಾಚಾರಕ್ಕೊಳಗಾಗಿ ಸತ್ತ ತಿಮ್ಮವ್ವ ಕಡಾಣಿ ಕಲ್ಲಕ್ಕನಿಗೆ ದೆವ್ವವಾಗಿ

ಕಾಣಿಸುವಂತೆ ಜ್ಯೂಲಿ ಅವಳಿಗೆ ಮಾನಸಿಕವಾಗಿ ಭ್ರಮೆಯನ್ನು ಹುಟ್ಟಿಸುತ್ತಾಳೆ. ಇದರಿಂದ ದಿನೇ ದಿನೇ ಭಯದಿಂದ ಸೊರಗುತ್ತಿದ್ದ ಕಲ್ಲಕ್ಕನನ್ನು ವಿಶ್ವಾಸಕ್ಕೆ ತೆಗೆದುಕೊಂಡು ರಂಗೇಗೌಡ ಇಲ್ಲದ ಸಮಯದಲ್ಲಿ ಜ್ಯೂಲಿ ಕಲ್ಲಕ್ಕನೊಂದಿಗೆ ನಿರ್ಜನ ಪ್ರದೇಶದಲ್ಲಿದ್ದ ಹನುಮಂತ ದೇವರ ಗುಡಿಯಲ್ಲಿದ್ದ ಮಂತ್ರವಾದಿಯ ಬಳಿಗೆ ನಿಂಬೆ ಹಣ್ಣುಗಳನ್ನು ತೆಗೆದುಕೊಂಡು ಬರುತ್ತಾರೆ. ನಿಂಬೇ ಹಣ್ಣುಗಳನ್ನು ಕಲ್ಲಕ್ಕನಿಂದಲೇ ಕೊಯ್ಯಿಸಿದಾಗ ಅದರಿಂದ ರಕ್ತ ಹೊರ ಬರುತ್ತದೆ. ಅದೇ ಸಂದರ್ಭವನ್ನು ಉಪಯೋಗಿಸಿಕೊಂಡ ಮಂತ್ರವಾದಿ ನಿನ್ನ ಹಿಂದೆ ಬಿದ್ದಿರುವ ದೆವ್ವ ಸಾಮಾನ್ಯದ್ದಲ್ಲ, ನಿನ್ನ ಮೇಲೆ ಅದಕ್ಕೆ ಕೋಪ ಏಕೆಂದು ತಿಳಿಯಬೇಕಾದರೆ ಗರ್ಭಗುಡಿಯಲ್ಲಿ ದೆವ್ವಕ್ಕೆ ಯಾರ‍್ಯಾರು, ಏನೇನು ಮಾಡಿದರೆಂಬುದನ್ನು ಜೋರಾಗಿ ನಿಜಹೇಳು ಇಲ್ಲದಿದ್ದರೆ ರಕ್ತವನ್ನು ಕಾರಿಕೊಂಡು ಸಾಯುತ್ತೀಯ ಎಂದು ಹೆದರಿಸಿದಾಗ, ನಡೆದ ಘಟನೆಯೆಲ್ಲವನ್ನು ಚಾಚು ತಪ್ಪದೇ ಹೇಳುತ್ತಾಳೆ. ಅದನ್ನು ಜ್ಯೂಲಿ ರೆಕಾರ್ಡ ಮಾಡಿಕೊಳ್ಳುತ್ತಾಳೆ ”[22] ಮನುಷ್ಯನಿಗೆ ಅತೀತವಾದ ಶಕ್ತಿಯ ಮೇಲಿರುವಷ್ಟು ನಂಬಿಕೆ ತನ್ನಮೇಲಿರುವುದಿಲ್ಲ ಇದನ್ನೇ ಬಳಸಿಕೊಂಡು ಸತ್ಯವನ್ನು ಹೇಳಿಸುತ್ತಾಳೆ.

‘ಪಿತೃವನ’ ಕಾದಂಬರಿಯು ನಿರ್ದೇಶನಾ ಸಂಹಿತೆಯ ತಂತ್ರವನ್ನು ಒಳಗೊಂಡಿದೆ. ಈ ಕಾದಂಬರಿಯ ಪಾತ್ರಗಳಲ್ಲಿನ ಒಳ್ಳೆಯತನ, ಸನ್ನಿವೇಶಗಳಲ್ಲಿನ ಪಾತ್ರ ಸಂಬಂಧಗಳಲ್ಲಿ, ಘರ್ಷಣೆಗಳಲ್ಲಿ, ವೇದನೆಯಲ್ಲಿ, ಸಂಸ್ಕಾರದಲ್ಲಿ ಕಂಡುಬರುತ್ತವೆ. ಸಾಮಾನ್ಯ ಕಾದಂಬರಿಕಾರರ ದೃಷ್ಟಿಗೆ ಬೀಳದ ಒಂದು ವರ್ಗಕ್ಕೆ ಸೇರಿದ ಪಾತ್ರಗಳು ಈ ಕಾದಂಬರಿಯಲ್ಲಿ ಕಂಡುಬರುತ್ತವೆ. ಸೂರಿ ಬ್ರಾಹ್ಮಣವರ್ಗದವನಾಗಿದ್ದರೂ ಶವವಾಹಕ ವೃತ್ತಿ ಹಿಡಿದಾಗ ಬದುಕಿನಲ್ಲಾಗುವ ಚಿತ್ರ ವಿಚಿತ್ರಗಳು, ಆ ವೃತ್ತಿಯಲ್ಲಿರುವ ವ್ಯಾಪಾರ ರಹಸ್ಯಗಳು, ಗಡಸು ಪ್ರವೃತ್ತಿ, ಒರಟುತನದ ಪ್ರವೃತ್ತಿ ಓದುನ ಮೇಲೆ ಪ್ರಭಾವ ಬೀರುತ್ತದೆ. ನಾಯರ್‌ನ ಮೂಕಪ್ರೇಮ ನಮಗೆ ಮೂಕ ಭಾದೆಯನ್ನುಂಟು ಮಾಡುತ್ತದೆ. ಅರುಣಾಳ ಬಾಳು ಸವಾಲೆಸೆಯುತ್ತದೆ. ಜಯಳ ಪಾತ್ರ ಓದುಗರನ್ನು ಯೋಚಿಸುವಂತೆ ಮಾಡುತ್ತದೆ. ನಿರುದ್ಯೋಗಿ ಆನಂದ್, ಸೂರಿಯ ಸಹಚರರು ಓದುಗರನ್ನು ಹಿಡಿದು ನಿಲ್ಲಿಸುತ್ತಾರೆ. ಸ್ಮಸಾನವಾಸಿ ವೀರಬಾಹು ಹೊಸದೊಂದು ತೀರಕ್ಕೆ ನಮ್ಮನ್ನು ಕೊಂಡೊಯ್ಯುತ್ತಾನೆ. ಅಣ್ಣಮ್ಮ, ಚಲ್ಲಮ್ಮ, ರಾಜು, ರಿಕ್ಷಾದವನು ನಮ್ಮೆದುರಿಗೆ ಸಹಜವಾಗಿ ನಮ್ಮೆದುರು ನಿಲ್ಲುತ್ತಾರೆ. ಹೀಗೆ ಓದುಗನನ್ನು ಹಿಡಿದಿಡುವ ತಂತ್ರ ಈ ಕಾದಂಬರಿಯಲ್ಲಿ ಹಾಸುಹೊಕ್ಕಾಗಿದೆ.ಅಲ್ಲದೆ ಹಲವಾರು ದೃಷ್ಟಿಕೋನಗಳಿಂದ ಈ ಕೃತಿಯನ್ನು ವಿಶ್ಲೇಷಿಸಬಹುದಾದ ಗುಣವನ್ನು ಈ ಕಾದಂಬರಿ ಪಡೆದುಕೊಂಡಿದೆ.

‘ಶ್ರೀಗುರು ನಿರ್ವಾಣಸಿದ್ಧರು’ ಕಾದಂಬರಿ ಸಾಂಸ್ಕೃತಿಕ ಸಂಹಿತೆಯ ತಂತ್ರವನ್ನು ಒಳಗೊಂಡಿದೆ.ಈ ಕಾದಂಬರಿ ಒಂದುಆಧ್ಯಾತ್ಮಿಕ ಕೃತಿ. ಇಲ್ಲಿ ವೀರಶೈವ ಧರ್ಮದ ಬಗ್ಗೆವಿಸ್ತಾರವಾಗಿ ತಿಳಿಸುವುದರ ಜೊತೆಗೆ ಇಸ್ಲಾಂ ಧರ್ಮದ ನಿಕಾಹ್–ತಲಾಕ್,ನಮಾಜಿನ ವಿವರಣೆ, ಸ್ಥಳ ಪುರಾಣ, ಮಳೆಯ ನಕ್ಷತ್ರಗಳ ಬಗೆಗಿನ ವಿವರಣೆ, ಗಾದೆಗಳು ಜನಪದ ಗೀತೆಗಳು, ಈ ಕೃತಿಯನ್ನು ಜ್ಞಾನದ ಕಣಜವಾಗಿಸಿವೆ. ಹಲವು ಸ್ಥಳಗಳ ಹೆಸರಿನಹಿನ್ನಲೆ, ಸ್ಥಳಪುರಾಣ ಓದಿದಾಗ ನಮಗೆ ಅಚ್ಚರಿಯೆನಿಸುತ್ತದೆ. ನಿರ್ವಾಣಸಿದ್ಧರು ಮೆರೆದಪವಾಡಗಳು, ಅನೇಕ ಜನರಿಗೆ ಸತ್ಪಥವನ್ನು ತೋರಿದ ಘಟನೆಗಳು, ಇಲ್ಲಿ ಅತ್ಯಂತ ಮಾರ್ಮಿಕವಾಗಿ ಚಿತ್ರಿತವಾಗಿವೆ ಈ ಕೃತಿಯನ್ನು ಓದುತ್ತಿದ್ದರೆ ನಾವೇ ಹಲವು ಕ್ಷೇತ್ರಗಳನ್ನು ಸಂದರ್ಶಿಸಿದ ಅನುಭವದೊಂದಿಗೆ ಅದ್ಭುತವಾದ ಸ್ಥಳ ಪುರಾಣ ತಿಳಿಸುವ ತಂತ್ರಗಳನ್ನು ಒಳಗೊಂಡಿದೆ.

‘ಷಾಂಗ್ರೀಲಾ’, ಸಾಮಾಜಿಕ ಸಾಹಸಭರಿತ ಕಾದಂಬರಿ. ಈ ಕಾದಂಬರಿಯಲ್ಲಿ ಗಾಯಾತ್ರಿ ಮತ್ತು ಅವಿನಾಶ್ ಹಿಮಾಲಯ ಯಾತ್ರೆಯನ್ನು ಕೈಗೊಳ್ಳುವ ಮೂಲಕ ಅಮೇರಿಕದವರು ಹಿಮಾಲಯದಲ್ಲಿ ಅಡಗಿಸಿಟ್ಟ ಪ್ಲೊಟೋನಿಯಂ ಬ್ಯಾಟರಿಯನ್ನು

ಹುಡುಕಿ ತೆಗೆಯುವುದಾಗಿರುತ್ತದೆ. ಪ್ಲೋಟೋನಿಯಂ ಬ್ಯಾಟರಿಯನ್ನು ಹುಡುಕಲು 'ಪ್ಲೋಟೋನಿಯಂ ಫೈಂಡರ್' ಎಂಬ ಯಂತ್ರವನ್ನು ಬಳಸುವ ತಂತ್ರವೇ ಇದರಲ್ಲಿ ವಿಶೇಷವಾಗಿದೆ. ಮುಂದೆ ಇವರ ಪ್ರಯಾಣದ ಸಂದರ್ಭದಲ್ಲಿಮುಖಾಮುಖಿಯಾಗುವ ಅಘೋರಿಗಳ ಜೀವನ, ಬೌದ್ಧ ಸನ್ಯಾಸಿಗಳ ಬೇಟಿ, ಷಾಂಗ್ರೀಲಾದ ರಾಜ ಶಾಕ್ಯನನ್ನು ಬಂಧಿಸಿ ಆಡಳಿತ ನಡೆಸುತ್ತಿದ್ದ ಸೇನಕನೊಡನೆ ಹೋರಾಡಿ ಅವಿನಾಶ್ ಗೆದ್ದುಶಾಕ್ಯನನ್ನು ಬಂಧನದಿಂದ ಬಿಡುಗಡೆ ಮಾಡುವವರೆಗೆ ಈ ಕಾದಂಬರಿ ಮುಂದುವರಿತ್ತದೆ.

'ಮೇರಾ ಭಾರತ್ ಮಹಾನ್' ಕಾದಂಬರಿಯು 'ಗ್ರೀನ್‌ಟಾರ್ಚ್' ಅನ್ವೇಷಣೆಯ ತಂತ್ರವನ್ನು ಒಳಗೊಂಡದ್ದಾಗಿದೆ. 'ಹಿಮಜ್ವಾಲೆ' ಅಂಟಾರ್ಟಿಕಾ ಖಂಡದ ಪ್ರಕೃತಿಯ ವೈಚಿತ್ರ್ಯಗಳನ್ನು ತಿಳಿಸುತ್ತದೆ.

ಬ್ಲಡ್ ಸಕ್ಕರ್ (ಶಿಶು ರಕ್ತಾನ್ವೇಷಣೆ) ವಿಭಿನ್ನ ಕಥಾ ವಸ್ತುವನ್ನೊಳಗೊಂಡ ಕಾದಂಬರಿ. ಈ ಕಾದಂಬರಿಯಲ್ಲಿ ಬರುವ ಇಂದಿರಾದೇವಿ ಮಕ್ಕಳನ್ನು ಪಡೆಯುವ ಉದ್ದೇಶದಿಂದ ಮೂಢನಂಬಿಕೆಗಳಿಗೆ ಒಳಗಾಗಿ ಶಿಶುಗಳ ರಕ್ತವನ್ನು ಕುಡಿಯುವ ಪೈಶಾಚಿಕ ಮನಸ್ಥಿತಿಯನ್ನು ವಿವರಿಸುವ ಘಟನೆಗಳನ್ನು ಒಳಗೊಂಡಿದೆ.

ಅನ್ವೇಷಿಸಿ, ಕಾದಂಬರಿಯಲ್ಲಿ ಮುಖ್ಯವಾಗಿ ಎರಡು ಕಥಾ ತಂತ್ರಗಳನ್ನು ಹೊಂದಿದೆ. ವಿಶ್ವಾತ್ಮನ, ಆಸ್ತಿ ಮತ್ತು ಅರಮನೆಯನ್ನು ಕಾಪಾಡಲು ಕಂಪ್ಯೂಟರ್‌ನ್ನು ವಿಶೇಷವಾಗಿ ಬಳಸಿಕೊಂಡಿರುವುದು ಮತ್ತು ಪುನರ್ಜನ್ಮದ ನಂಬಿಕೆಯನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. ಅಧ್ಬುತ ಸರಮಾಲೆಗಳನ್ನೊಳಗೊಂಡ ಕಾದಂಬರಿ. ಮನೋಯಜ್ಞ–1–2, ವಿಶ್ವಕರ್ಮ ಅಪಾರವಾದಾಸ್ತಿಯನ್ನು ಹೊಂದಿದವನು. ತನ್ನ ಮರಣದ ದಿನವನ್ನು ತಿಳಿದುಕೊಂಡು ಮುಂದಿನ ಜನ್ಮದ ವ್ಯವಸ್ಥೆಯನ್ನು ಹೇಗೆ ಮಾಡಿಕೊಳ್ಳುತ್ತಾನೆ ಎಂಬುದು ಒಂದು ಮಾದರಿಯಾಗಿ ನಿಲ್ಲುತ್ತದೆ.

'ಸಾಹಿತ್ಯ ಕೃತಿಯಲ್ಲಿ ತಂತ್ರ ಎನ್ನುವುದು ಕವಿಯ ಜೀವನಾನುಭವಕ್ಕೆ ಹೊಂದಿಕೊಂಡಿದೆ. ಆ ಅನುಭವ ಅಭಿವ್ಯಕ್ತಿಗೆ ಅನಿವಾರ್ಯವಾದ ಸಾಧನವಾಗುತ್ತದೆ. ಬರಿಯ ಚಮತ್ಕಾರಕ್ಕಾಗಿ ಕಣ್ಣಿಗೆ ಹೊಡೆಯುವ ತಂತ್ರವನ್ನು ಬಳಸಿದಾಗ ಕೃತಿ ಕರಡಿಯ ಧರ್ಮವನ್ನು ಹೊದ್ದೆ ಮನುಷ್ಯರಂತೆ ಕಾಣುತ್ತದೆ.ಒಳ್ಳೆಯ ಸಾಹಿತ್ಯ ಕೃತಿಯ ತಂತ್ರದ ಅಧ್ಯಯನವೇ ಒಂದು ಸಂತೋಷವನ್ನು ಕೊಡುವ ಅನುಭವ' ಎನ್ನುವ ಎಲ್. ಎಸ್. ಶೇಷಗಿರಿರಾವ್ ಅವರ ಮಾತಿನಲ್ಲಿ ಔಚಿತ್ಯವಿದೆ.ಸಾಹಿತ್ಯ ಕೃತಿಯೊಂದರಲ್ಲಿ ಅದರ ತಂತ್ರದ ಬಳಕೆ ವಸ್ತು–ಧೋರಣೆ–ಆಶಯಗಳಿಗೆ ಪೂರಕವಾಗಿರ ಬೇಕಾಗುತ್ತದೆ. ಬರಿಯ ಚಮತ್ಕಾರಕ್ಕಾಗಿ ಮಾಡುವ ಯಾವುದೇ ಕಾರ್ಯ ಪರಿಣಾಮಕಾರಿಯಾಗಲಾರದು.

ಸೂರಿ ಅವರ ಕಾದಂಬರಿಗಳಲ್ಲಿ ತಂತ್ರದ ಬಳಕೆ ಕರಡಿಯ ಧರ್ಮವನ್ನು ಹೊದ್ದ ಮನುಷ್ಯನಂತೆ ಕಾಣದೆ, ತುಂಬಾ ವಾಸ್ತವವಾಗಿ ಮತ್ತು ವಸ್ತುವಿಗನುಗುಣವಾಗಿ ನಡೆದಿದೆ. ಅವರು ತಂತ್ರಕ್ಕಾಗಿ ತಂತ್ರವನ್ನು ಬಳಸಿದವರಲ್ಲ. ಹೀಗೆ ಸೂರಿಯವರ ಕಾದಂಬರಿಗಳ ವಿಶ್ಲೇಷಣೆಗೆ ತೊಡಗಿದಾಗ ತುಂಬಾ ಸರಳವಾಗಿ ಕಾಣುವ ಅವರ ಶೈಲಿಯಲ್ಲಿ ಆಕರ್ಷಣೆಯಿದೆ. ಸಪ್ಪಗೆ ಕಾಣುವ ಗದ್ಯದಲ್ಲಿ ಕಾವ್ಯ ಗುಣವಿದೆ, ಸಂದರ್ಭೋಚಿತ ವರ್ಣನೆಗಳಿವೆ. ಅವರು ಬಳಸಿದ ಆಡುನುಡಿಗಳು–ಪಡೆನುಡಿಗಳು–ಗಾದೆಮಾತುಗಳು ಒಟ್ಟಾರೆ ಕೃತಿಯ ಸೊಬಗನ್ನು ಹೆಚ್ಚಿಸುತ್ತಲೇ ಅರ್ಥಪೂರ್ಣವಾಗಿ ಕಾಣಿಸುತ್ತವೆ.

ಸೂರಿಯವರಿಗೆ ನಗರದ ಮತ್ತು ಹಳ್ಳಿಯ ಬದುಕಿನ ಅನುಭವಗಳಿರುವುದರಿಂದ ಅವರು ತಮ್ಮ ಕಾದಂಬರಿಗೆ ತಕ್ಕಂತೆ ಯಾವುದೇ ರೀತಿಯ ಭಾಷೆಯನ್ನು ಬಳಸಿದರೂ ಅದು ನೈಜವೆನಿಸುತ್ತದೆ. ಅಬ್ಬರದ ಪ್ರಚಾರವಿಲ್ಲದೆ, ಆಡಂಬರದ ಚಮತ್ಕಕಾರಗಳಿಲ್ಲದೆ ಸೂರಿ ಅವರ ಕೃತಿಗಳು ಅವರ ಭಾಷೆ, ಶೈಲಿ, ತಂತ್ರದ ಪರಿಣಾಮವಾಗಿ ವೈಚಾರಿಕತೆ, ವೈಜ್ಞಾನಿಕತೆಗಳು ನೈಜತೆಯಿಂದ ಹೊಸದನ್ನು ಹೇಳಲು ಪ್ರಯತ್ನಿಸುತ್ತವೆ.

**ಸಮಿಕ್ಷೆ**

ಸೂರಿಯವರ ಸೃಜನಶಿಲ ಮತ್ತು ಅನುವಾದ ಕಾದಂಬರಿಗಳಲ್ಲಿ ಸ್ತ್ರೀ ಮತ್ತು ಪುರುಷ ಪಾತ್ರಗಳು ಕಂಡು ಪ್ರಧಾನವಾಗಿ. ಸಾಹಿತ್ಯ ಯಾವಾಗಲೂ ತನ್ನ ಸಮಕಾಲೀನ ಸಂದರ್ಭದ ಸಮಾಜವನ್ನು ಪ್ರತಿನಿಧಿಸುತ್ತಿರುತ್ತದೆ. ಶತಮಾನಗಳಿಂದ ಪುರುಷಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯ ಶೋಷಣೆ ನಿರಂತರವಾಗಿ ನಡೆಯುತ್ತಲೇ ಬಂದಿರುವುದು ಸಾರ್ವತ್ರಿಕ ಸತ್ಯವಾಗಿದೆ.

ಸೂರಿ ಅವರ ಪ್ರಾರಂಭದ ಕಾದಂಬರಿಗಳಿಗೂ, ಇತ್ತೀಚಿನ ಕಾದಂಬರಿಗಳಿಗೂ ವಸ್ತು, ಧೋರಣೆಗಳ ದೃಷ್ಟಿಯಿಂದ ಗಮನಾರ್ಹವಾದ ಬದಲಾವಣೆಯಿದೆ. ಅವರ ಸ್ತ್ರೀಪಾತ್ರಗಳು ಪ್ರಾರಂಭದ ಕಾದಂಬರಿಯಲ್ಲಿ ಅಸಹಾಯಕ ಸ್ಥಿತಿಯನ್ನನುಭವಿಸಿದರೆ. ನಂತರದ ಕಾದಂಬರಿಗಳಲ್ಲಿ ಅಂತರಿಕ ಬಂಡಾಯಕ್ಕೆ ಅಣಿಯಾಗುತ್ತಾರೆ. ಇತ್ತೀಚಿನ ಕೃತಿಗಳಲ್ಲಿ ಆ ಬಂಡಾಯ, ತಾತ್ವಿಕ ನಿಲುವನ್ನು ತಾಳುತ್ತಾ ಸಾರ್ವತ್ರಿಕ ಮನ್ನಣೆಯನ್ನು ಪಡೆಯುತ್ತದೆ.

ಸೂರಿಯವರ ಸೃಜನಶೀಲ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು ಹೆಚ್ಚಾಗಿ ಬಡತನದ ಪರಿಸರದಿಂದ ಬೆಳೆದು ಬಂದಿರುವಂಥವು. ಬಡತನದ ಅಸಮಾನತೆ ಇವರ ನಿರಂತರ ಶೋಷಣೆಗೆ ಕಾರಣವಾಗಿದೆ.ಕೆಲವು ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳಿಗೆ ಬಡತನದ ಸಮಸ್ಯೆ ಇರದಿದ್ದರೂ ಅವರು ಯಜಮಾನ್ಯ ಸಂಸ್ಕೃತಿಯ ತುಳಿತಕ್ಕೊಳಗಾಗಿದ್ದಾರೆ. ಹಸಿವೆಯಿಂದ ಅಲ್ಲಿಶೋಷಣೆ ನಡೆಯದಿದ್ದರೂ, ಮಾನಸಿಕ ಹಿಂಸೆಗೆ ಒಳಗಾಗುತ್ತಾರೆ.ಹೀಗೆ ಇವರ ಕಾದಂಬರಿಗಳ ಎಲ್ಲಾ ಸ್ತ್ರೀಪಾತ್ರಗಳು ಒಂದಿಲ್ಲೊಂದು ರೀತಿಯ ಶೋಷಣೆಗೆ ಒಳಗಾದಂಥವು.ಪ್ರಾರಂಬದ ಪಾತ್ರಗಳು ಈ ನೋವು–ಯಾತನೆಗಳನ್ನು ಸಹಿಸಿಕೊಂಡು ಅಸಹಾಯಕರಂತೆ ಕಾಣುತ್ತಾರೆ. ಇಲ್ಲಿ ಕರುಣೆ–ಕನಿಕರವೇ ಪ್ರಧಾನವಾಗಿದೆ. ನಂತರದ ಮಹಿಳಾಪಾತ್ರಗಳು ಈ ಶೋಷಣೆಯನ್ನು ಸಹಿಸುವುದರ ಬದಲು, ಶೋಷಣೆಯ ವಿರುದ್ಧ ದನಿ ಎತ್ತುತ್ತಾರೆ. ವ್ಯಕ್ತಿಗತ ಶೋಷಣೆಯನ್ನು ಸಾರ್ವತ್ರಿಕಗೊಳಿಸುತ್ತಾ: ಸಂಘಟನೆ, ಚರ್ಚೆ, ದನಿಯೆತ್ತಿ ಮಾತನಾಡುವ ಧೈರ್ಯದ ಮೂಲಕ ಅನೇಕ ಪ್ರಶ್ನೆಗಳ ಹುಟ್ಟಿಗೆ ಕಾರಣರಾಗುತ್ತಾರೆ. ಆದರೆ ಎಲ್ಲಾ ಕಾದಂಬರಿಗಳ ಸ್ತ್ರೀಪಾತ್ರಗಳು ಶೋಷಣೆಯಿಂದ ಮುಕ್ತವಾಗಿಲ್ಲ. ಇದು ಇವರ ಕಾದಂಬರಿಗಳಲ್ಲಿ ಎದ್ದು ಕಾಣುವ ಸಂಗತಿಯಾಗಿದೆ. ಸೂರಿಯವರು ಪಾತ್ರ ಚಿತ್ರಣ ಮಾಡುವುದರಲ್ಲಿ ತುಂಬ ನಿಷ್ಣಾತರು ಅದು ಸ್ತ್ರೀ ಪಾತ್ರವೇ, ಪುರುಷಪಾತ್ರವೇ ಆಗಿರಲಿ ವ್ಯಕ್ತಿಯ ಹಿನ್ನಲೆಯನ್ನು ಸಾರಾವತ್ತಾಗಿ ಸಂಗ್ರಹಿಸುತ್ತಾರೆ.

ಪಿತೃವನ ಕಾದಂಬರಿಯ ಸ್ತ್ರೀ ಪಾತ್ರಗಳಲ್ಲಿ ಜಯ, ಮಂಗ, ಅರುಣಾ, ಬಡತನದ ಹಿನ್ನೆಲೆಯಿಂದ ಬಂದ ಪಾತ್ರಗಳಾಗಿವೆ. ಬಡತನವೇ ಶಾಪವಾಗಿ ಪರಿಣಮಿಸಿರುವಾಗ ಅನಿವಾರ್ಯವಾಗಿ ಮೈಮಾರಿಕೊಳ್ಳುವ ಸ್ಥಿತಿಗೆ ಬರುತ್ತಾರೆ. ಈ ಹಿನ್ನಲೆಯಲ್ಲಿ ಅರುಣಾಳ ಪಾತ್ರವನ್ನು ಗಮನಿಸಬಹುದು "ಅರುಣಾ! ಎಂಬ ಕರೆಕೇಳಿಎಷ್ಟು ದಿನವಾಗಿತ್ತೂ, 'ರೋಗದ ಗೊಡ್ಡು, ಎಂದು ಕರೆಯುತ್ತಾರೆ. ಕೆಲವರು 'ಸಿನಿಮಾಸ್ಟಾರ್' ಎಂದು ಕರೆಯುತ್ತಾರೆ. ಹುಳು ಬಿದ್ದು, ಎಲೆ ಉದುರಿಸಿಕೊಂಡ ಮೋಟು ಮರದಂತಿದ್ದ ಆಕೆ ಅವರೆಲ್ಲರ ನಡುವೆ ಸುಂದರಿಯೆ!"[23] ಎಂಬ ವ್ಯಂಗ್ಯದ ನುಡಿ ಅವಳ ಬದುಕನ್ನು ರೂಪಿಸುತ್ತದೆ. ಇದು ಅರುಣಾಳ ಬದುಕಾದರೆ ಜಯಾ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು ಅನಾಥಳಾಗಿ ತನ್ನ ದೊಡ್ಡಪ್ಪನ ಮನೆಯಲ್ಲಿರಬೇಕಾಗುತ್ತದೆ. ಹಣದಾಸೆಗೆ ಬಿದ್ದ ಇವರು ಜಯಾಳನ್ನು ದಲ್ಲಾಳಿಗಳಿಗೆ ಮಾರಿ ಹಣವನ್ನು ತೆಗೆದುಕೊಳ್ಳುವ ಉದ್ದೇಶದಿಂದ ಅವಳನ್ನು ಶಾಲೆ ಬಿಡಿಸುತ್ತಾರೆ. ಅಮಾನವೀಯವಾಗಿ ನಡೆಸಿಕೊಳ್ಳುತ್ತಾರೆ." ದಲ್ಲಾಳಿಗಳಿಗೆ ಇಷ್ಟವಾದ ಹುಡುಗಿಯರ ತಂದೆ ತಾಯಿಗಳನ್ನು ಒಪ್ಪಿಸಿ ವ್ಯಾಪಾರವನ್ನು ಕುದುರಿಸುವುದು.ಹತ್ತು ಮಕ್ಕಳ ತಂದೆ ಜಯಾಳನ್ನು ವ್ಯಾಪಾರಕ್ಕಿಟ್ಟ ಮರುದಿನ ಶಾಲೆಗೆ

ಹೋಗಬೇಡ, ಯಾರೂ ನೆಂಟರು ಬರುವವರಿದ್ದಾರೆಎಂದು ಸುಳ್ಳು ಹೇಳಿದರು"[24] ಹೀಗೆ ತನ್ನದೊಡ್ಡಪ್ಪನಿಂದಲೇಮಾರಾಟಕ್ಕೆ ಒಳಗಾಗುವ ಮೂಲಕ ಕೌಟುಂಬಿಕ ಶೋಷಣೆಗೆ ಒಳಗಾಗುತ್ತಾಳೆ.

ಸೂರಿಯವರ ಕಾದಂಬರಿಗಳಲ್ಲಿ ನಾಯಕಸ್ಥಾನ ಪಡೆದ ಇಲ್ಲಿಯ ಪುರುಷಪಾತ್ರಗಳು ಕೆಳವರ್ಗದ ಸ್ಥಿತಿಯನ್ನು ಪ್ರತಿನಿಧಿಸುವಲ್ಲಿ ಯಶಸ್ವಿಯಾಗಿವೆ. ಸೂರಿ, ಜಾನಕಿರಾಮಯ್ಯ, ಜಾತಿಯಿಂದ ಅಂತಸ್ತಿನಿಂದ ಏನು ಕಡಿಮೆಯಿಲ್ಲದವರು. ಸೂರಿಯ ಪಾತ್ರವನ್ನು ಲೇಖಕರು ಹೀಗೆ ಚಿತ್ರಿಸುತ್ತಾರೆ."ಸೂರಿಯ ಪೂರ್ತಿಹೆಸರು ಸೂರ್ಯನಾರಾಯಣ ಪರಬ್ರಹ್ಮ ಶಾಸ್ತ್ರಿ, ಅಜ್ಜಿ ಮಾತ್ರ ಸೂರಿ ಅಂತಲೇ ಕರೆಯುತ್ತಿದ್ದಳು, ತಂದೆಯವರೇನೋ ಅಪ್ಪಾಎಂದು ಕರೆಯುತ್ತಿದ್ದರು. ತಂದೆಯವರಿಗೆ ತಿಳಿಹೇಳಿ 'ಸೂರ್ಯನಾರಾಯಣ ಮೂರ್ತಿ ಎಂದು ನಾಮಕರಣ ಮಾಡಿಸಿದಳು.ತನ್ನ ತಾತ ಪರಬ್ರಹ್ಮ ಶಾಸ್ತ್ರಿಯವರು ಯಜ್ಞಮಾಡಿ ಸೋಮಾಯಾಜಿ ಗಳಾಗಿದ್ದರು. ನನ್ನತಂದೆ ಲಕ್ಷ್ಮಿನಾರಾಯಣ ಶಾಸ್ತ್ರಿ, ಹತ್ತು ಊರುಗಳಲ್ಲಿ ಪೌರೋಹಿತ್ಯಮಾಡಿ 'ಸಿದ್ಧಾಂತಿ' ಎನಿಸಿಕೊಂಡಿದ್ದರು.ತಾನು ಮಾತ್ರ ಅತ್ತ 'ಕೇಶವಾಯ ಸ್ವಾಹ' ಆಗಲಿ ಎ.ಬಿ.ಸಿ.ಡಿ. ಯಾಗಲಿ ಅಂಟದೆ ಹೆಣಗಳ ಸೂರಿಯಾಗಿ ಪ್ರಸಿದ್ಧನಾದೆ"[25] ಅಜ್ಜಂಪುರ ಜಿ ಸೂರಿ. ಪಿತೃವನ ಪು. 73.

"ಜಾನಕಿ ರಾಮಯ್ಯ ಒಬ್ಬ ದೊಡ್ಡರೈತ. ಅನ್ನಕ್ಕಾಗಿ, ಸಾರಿಗಾಗಿ ವರ್ಷಕ್ಕೊಂದು ಎಕರೆ ಮಾರಿಕೊಂಡ. ವಿಜೃಂಭಣೆಯಿಂದ ಹೆಣ್ಣು ಮಕ್ಕಳ ಮದುವೆಗಳನ್ನು ಮಾಡಿದ. ಬಾವ ಮೈದುನ ಕೊಲೆಯ ಕೇಸುಗಳಲ್ಲಿ ಸಿಕ್ಕಿ ಬಿದ್ದಾಗ ಅವರನ್ನು ಗೆಲ್ಲಿಸಿ ತನ್ನ ನೆತ್ತಿಯಮೇಲೆ ಬಟ್ಟೆ ಹಾಕೊಕೊಂಡ, ದೇವರು ಮಾತ್ರ ಕೈಬಿಡಲಿಲ್ಲ ಹಸಿವು ಎಂಬ ಹನ್ನೊಂದನೇ ಅವತಾರವನ್ನೆತ್ತಿ, ಜಾನಕಿ ರಾಮಯ್ಯನ ಹೊಟ್ಟೆಯ ಒಳಗೆ ವಿಶ್ವ ರೂಪ ಪ್ರದರ್ಶನಕ್ಕೆ ಪ್ರಾರಂಭಿಸಿದ......"[26] ಅಜ್ಜಂಪುರ ಜಿ ಸೂರಿ. (ಪಿತೃವನ ಪು.73) ಇಲ್ಲಿ ಜಾನಕಿರಾಮಯ್ಯ ಸ್ಥಿತಿವಂತನಾದರೂ, ಬಂಧುಗಳಿದ್ದರೂ, ಎಲ್ಲರ ನಿರ್ಲಕ್ಷ್ಯಕ್ಕೊಳಗಾಗಿ ಅನಾಥನಾಗುವ ಸಂದರ್ಭವನ್ನು ವಿವರಿಸಿದ್ದಾರೆ.

'ಹೊಸಚಿಗುರು' ಕಾದಂಬರಿಯ ಕಾಳ, 'ತೋಟದ ಮನೆ' ಕಾದಂಬರಿಯ ರಾಮಣ್ಣ, ದಲಿತರ ಮೇಲಾಗುತ್ತಿರುವ ದೌರ್ಜನ್ಯವನ್ನು ಖಂಡಿಸಿ ಸಾಮಾಜಿಕ ಅವ್ಯವಸ್ಥೆಯನ್ನು–ದಬ್ಬಾಳಿಕೆಗಳನ್ನೆಲ್ಲಾ ಒಂದೊಂದಾಗಿ ಕಳಚಿಕೊಂಡು ಸಮಾನತೆಯ ಬದುಕಿಗಾಗಿ ಹಾತೊರೆಯುವ ಅನೇಕ ಪ್ರಯತ್ನಗಳು ಇಲ್ಲಿವೆ.

ಇಲ್ಲಿ ಪುರುಷರಿಗಿಂತ, ಸ್ತ್ರೀ ಮೇಲು ಅಥವಾ ಸ್ತ್ರೀಗಿಂತ ಪುರುಷ ಮೇಲು–ಎಂಬ ಶುಷ್ಕ ಚರ್ಚೆಯಿರದೆ: ಈ ವ್ಯವಸ್ಥೆಯ ಒಳನೋಟಗಳನ್ನು ಹುಡುಕುವ ಪ್ರಯತ್ನವಿದೆ. ಈ ಎಲ್ಲ ಕಾದಂಬರಿಗಳ ಪುರುಷ, ಮತ್ತು ಸ್ತ್ರೀಪಾತ್ರಗಳ ಮುಖಾಂತರ ಆಳವಾದ ಅಧ್ಯಯನ ನಡೆಸಿದಾಗ ಈ ಅಂಶ ಸ್ಪಷ್ಟವಾಗಿ ಕಂಡುಬರುತ್ತದೆ. ಆದ್ದರಿಂದ ಇಲ್ಲಿಯ ಸ್ತ್ರೀಪಾತ್ರಗಳ ಬಂಡಾಯ ಕೇವಲ ಪುರುಷರ ಮೇಲಷ್ಟೇ ಆಗಿರದೆ ಒಟ್ಟಾರೆ ಈ ವ್ಯವಸ್ಥೆ ನಿರ್ಮಿಸಿದ ಅಸಮಾನತೆಯ ವಿರುದ್ಧವಾಗಿದೆ. ಈ ಅಂಶವನ್ನು ಇಲ್ಲಿಯ ಪುರುಷ ಪಾತ್ರಗಳೂ ಅರಿತುಕೊಂಡು ಹೋರಾಡುವುದು ಗಮನ ಸೆಳೆಯುವ ಸಂಗತಿಯಾಗುತ್ತದೆ. ಒಟ್ಟಿನಲ್ಲಿ ಸೂರಿಯವರು ಸೃಷ್ಟಿಸಿದ ಪಾತ್ರಗಳು ತಮ್ಮ ಗುಣ ವಿಶಿಷ್ಟತೆಯಿಂದ ಹಸಿರಾಗಿ ನಿಂತಿವೆ.

**ಆಕರ ಗ್ರಂಥಗಳು :**


1. ಅಜ್ಜಂಪುರ ಜಿ. ಸೂರಿ. (1994). ತೋಟದ ಮನೆ. ಪುಟ. 35
2. ಅದೇ. ಪುಟ. 36
3. ಅದೇ. ಪುಟ. 72
4. ಅದೇ. ಪುಟ. 40
5. ಅಜ್ಜಂಪುರ ಜಿ. ಸೂರಿ, (1988). ಹೊಸ ಚಿಗುರು. ಪುಟ. 79
6. ಅದೇ. ಪುಟ. 84

7. ಅಜ್ಜಂಪುರ ಜಿ. ಸೂರಿ. (1994). ತೋಟದ ಮನೆ. ಪುಟ.24
8. ಅದೇ. ಪುಟ. 42
9. ಅಜ್ಜಂಪುರ ಜಿ ಸೂರಿ. (1994). ಪಿತೃವನ, ಪುಟ. 85
10. ಅದೇ. ಪುಟ. 86
11. ಅದೇ. ಪುಟ. 95
12. ಅಜ್ಜಂಪುರ ಜಿ. ಸೂರಿ. (1994). ತೋಟದ ಮನೆ. ಪುಟ. 16
13. ಅಜ್ಜಂಪುರ ಜಿ. ಸೂರಿ. (2003). ಶ್ರೀ ಗುರು ನಿರ್ವಾಣ ಸಿದ್ಧರು. ಪುಟ. 57
14. ಅದೇ. ಪುಟ. 57
15. ಅಜ್ಜಂಪುರ ಜಿ. ಸೂರಿ. (1994). ತೋಟದ ಮನೆ. ಪುಟ. 52
16. ಅಜ್ಜಂಪುರ ಜಿ ಸೂರಿ. (1994). ಪಿತೃವನ. ಪುಟ. 83
17. ಅಜ್ಜಂಪುರ ಜಿ. ಸೂರಿ. (2003). ಶ್ರೀ ಗುರು ನಿರ್ವಾಣ ಸಿದ್ಧರು. ಪುಟ. 20
18. ಅದೇ. ಪುಟ. 96
19. ಅದೇ. ಪುಟ. 22
20. ಅದೇ. ಪುಟ. 22
21. ರಾಮಚಂದ್ರ ಸಿ.ಎನ್. ಸಾಹಿತ್ಯ ವಿಮರ್ಶೆ. ಪುಟ. 221
22. ಅದೇ. ಪುಟ. 222
23. ಅಜ್ಜಂಪುರ ಜಿ. ಸೂರಿ. (1994). ತೋಟದ ಮನೆ. ಪುಟ. 90
24. ಅಜ್ಜಂಪುರ ಜಿ ಸೂರಿ. (1994). ಪಿತೃವನ. ಪುಟ. 116
25. ಅದೇ. ಪುಟ. 59
26. ಅದೇ. ಪುಟ. 73.

**ಆಕರ ಗ್ರಂಥಗಳು**


1. ಅಜ್ಜಂಪುರ ಜಿ. ಸೂರಿ. (2003). ಶ್ರೀ ಗುರು ನಿರ್ವಾಣ ಸಿದ್ಧರು ಅಥವಾ ಸಿದ್ಧಪುರುಷ. ರತ್ನ ಪ್ರಕಾಶನ
2. ಅಜ್ಜಂಪುರ ಜಿ. ಸೂರಿ. (1994). ಶಾಪ. ಹೇಮಂತ ಪ್ರಕಾಶನ
3. ಅಜ್ಜಂಪುರ ಜಿ. ಸೂರಿ, (1994) ತೋಟದಮನೆ. ರತ್ನ ಪ್ರಕಾಶನ
4. ಅಜ್ಜಂಪುರ ಜಿ. ಸೂರಿ. (1988). ಹೊಸಚಿಗುರು. ರತ್ನ ಪ್ರಕಾಶನ
5. ಅಜ್ಜಂಪುರ ಜಿ. ಸೂರಿ. (1999) ಶೀತಾಗ್ನಿ. ರತ್ನ ಪ್ರಕಾಶನ
6. ಅಜ್ಜಂಪುರ ಜಿ ಸೂರಿ. (1994). ಪಿತೃವನ. ಗೀತಾಂಜಲಿ ಪಬ್ಲಿಕೇಷನ್ಸ್.



SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 164-168
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# Girish Karnad's Naga-Mandala: Mythological Aspects and Identity Crisis

**Rohitkumar G. N**
Guest faculty, Department of English, Koppal University, Koppal

***Abstract:***

*Girish Karnad's Naga-Mandala offers a profound exploration of marriage, identity, and the complexities of gender relations within the framework of mythology and folklore. By weaving together myths, folktales, and historical narratives, Karnad delves into the psychological and moral dilemmas faced by modern Indian men and women in various social contexts. The play's central theme addresses the struggles of twentieth-century women, highlighting issues of gender oppression and the challenges posed by patriarchal authority. Naga-Mandala not only portrays the dynamics of marriage but also critically examines the societal norms and traditions that reinforce gender exploitation. Karnad's use of mythology and folklore is a powerful tool in addressing these themes, offering a lens through which the dichotomies of instinct versus reason, body versus mind, and male versus female psyche are explored. Through characters who seek wholeness and balance, Karnad illustrates the complex journey toward coexistence in a society fraught with traditional constraints. This research paper aims to analyze the various norms and traditions depicted in Naga-Mandala, study the factors influencing their implementation, and critically assess the exploitation of women within these frameworks.*

***Keywords:*** *Mythology, Gender oppression, Folklore, Identity crisis, Patriarchy.*

## Introduction

During the 1800s, colonial India faced challenges due to the pervasive influence of European theatre. Prominent writers such as Michael Madhusudan Dutt, Annasaheb Kirloskar, and Vishnudas Bhave engaged with verse narrations and explored regional art forms like the Kannada folk art Yakshagana. Girish Karnad, a renowned Indian playwright, acknowledges his unique role in Indian theatre and the fusion of diverse dramatic traditions. Karnad's deep engagement with Indian mythology and history in his works transforms theatrical performances into profound aesthetic experiences, rooted in human emotions and natural impulses. In

***Please cite this article as:*** Rohitkumar, G.N. (2024). Girish Karnad's *Naga-Mandala*: Mythological Aspects and Identity Crisis. *SRUJANI: Indian Journal of Innovative Research and Development.* 3(2), 164–168

universal and timeless plays such as *Naga-mandala* and The *Fire and the Rain*, Karnad blurs the boundaries between myth and reality, highlighting the interconnectedness of the world and the significance of communication within modern societal and cultural contexts. Like Shakespeare, Karnad reimagines myths, traditional stories, and historical narratives to portray human emotions and sentiments, while also addressing complex issues of gender identity and existential dilemmas.

Girish Karnad's unique dramatic vision positions him as a significant figure in the post-independence "modern" era of Indian theatre, alongside prominent playwrights like Badal Sircar, Vijay Tendulkar, K.N. Panikkar, and Indira Parthasarathi. Indian playwrights have a long tradition of portraying society through myths, parables, and tales, with early figures such as Kailasam and Sri Aurobindo drawing themes from Indian literature. Karnad, a renowned Indian playwright writing in Kannada, drew inspiration from these myths and stories to create innovative and thought-provoking works. His exposure to Western theatre in Bombay and street plays in Karnataka villages during his formative years spurred him to modernize Indian religious mythology. Karnad's vibrant energy allows him to examine contemporary issues by seamlessly blending meaningful narratives with historical context, making his works resonate deeply with modern audiences.

In *Naga-Mandala*, Girish Karnad portrays Naga as the embodiment of kindness, love, and protection, leading Rani to trust and ultimately surrender herself to him. However, the true fault lies with Appanna, who abandons Rani, locking her in a house while indulging with a concubine, making Rani the victim rather than the villain. The play examines the identity, status, and dignity of women through Rani's experiences, which serve as a metaphor for a young bride in a joint family who sees her husband in two contrasting roles: a stranger during the day and a lover at night. Karnad uses this dynamic to explore the position of women in a male-dominated society.

Drawing from South Indian folktales about snakes, Karnad incorporates folkloric techniques into *Naga-Mandala*. Unlike Shakespeare, who often uses myths and stories to engage with historical themes, Karnad tackles contemporary issues through these ancient narratives, earning him the prestigious Sahitya Akademi Award. He also integrates Brechtian techniques, prioritizing critical thought over emotional involvement. The drama challenges societal norms by blending fantastical elements with complex characters, prompting audiences to reflect on their own judgments and perspectives. Karnad uses the theme of human-animal conflict, particularly through the characters of Cobra and Rani, to evoke a sense of alienation and present contrasting viewpoints.

As Rani resorts to supernatural means to reclaim her unfaithful husband's love, she unwittingly attracts the attention of the King Cobra disguised as a man, exposing the gender inequality she faces. When accused of infidelity, Rani is subjected to a trial by the local council, where her loyalty is proven, ultimately securing her marriage and societal acceptance. Through *Naga-Mandala*, Karnad delves into the deceptive nature of reality, encouraging the audience to view issues from multiple perspectives and question entrenched social norms.

Girish Karnad, who transitioned from screenwriter to acclaimed folk theatre playwright, adeptly addressed modern challenges in his plays by drawing on Indian history and mythology. His incorporation of myths and historical events transforms them into contemporary social and political narratives, evoking powerful emotions from audiences. By deeply engaging with mythology and history, Karnad offers writers a rich source of inspiration to explore themes such as love, existentialism, patriarchy, and the caste system. Through his works, he critically examines societal structures from antiquity to the present, highlighting the roles and struggles of women in male-dominated civilizations. Karnad’s ability to use mythology and history to illuminate pressing contemporary issues showcases his talent for making ancient narratives relevant to today's world.

**The significance of Myths and Identity Crisis**

The significance of myths in society is thoroughly examined in Girish Karnad's *Naga-Mandala*, particularly in how they shape interpersonal relationships and cultural beliefs. The protagonist, Rani, seeks love and happiness in her marriage to Appanna, who embodies patriarchal culture, by turning to mythology and her heritage. In rural areas, the use of love roots and other mystical elements is common, as mythology is deeply embedded in the local culture. Karnad uses these myths to expose the darker realities hidden beneath conventional beliefs, highlighting the tension between personal aspirations and societal norms. Despite understanding the reality of their relationship, both Rani and Appanna adhere to social expectations, raising questions about the truth of these beliefs by exploring the complexities of relationships, superstitions, and cultural expectations.

Karnad challenges readers to reflect on their own cultural beliefs and customs by highlighting the flaws of patriarchal society through Rani and Appanna's story. The play critiques cultural norms and the psychological impact of myths, emphasizing the enduring power of these ideas over time. Within a patriarchal society that confines and isolates women, Rani endures mistreatment and violence at the hands of her husband, Appanna, who symbolizes the oppressive forces of patriarchy where women's rights are

curtailed and they are deemed inferior. Appanna's dual nature—cruel by day and kind by night—illustrates the conflict between his animalistic and human instincts. Conversely, the serpent Naga represents fertility, love, and affection, bringing a sense of fulfillment to Rani's life. The use of animal metaphors, such as bringing a dog and mongoose for protection, underscores Appanna's fears and insecurities.

Naga's tenderness towards Rani, contrasted with Appanna's harsh treatment, challenges the norms of patriarchal society. Themes of parenthood, sexuality, and reproduction are also explored through Naga's role in Rani's life. By delving into issues of identity, patriarchy, and societal systems, Karnad invites the audience to question conventional wisdom. The drama intricately examines interpersonal relationships, power dynamics, and the influence of cultural standards on individuals.

Karnad's play retells a Hindu myth in which a snake, after a hundred years, can transform into a human. In the story, Rani attracts a cobra by pouring curry on an anthill, and the cobra transforms into her husband, Appanna. Rani and the cobra, now disguised as Appanna, fall in love due to a magical root in the curry. The cobra symbolizes the ideal partner many women long for, while the real Appanna falls short, being unfaithful and neglectful. Despite her husband's failings, Rani yearns for a "prince charming" to rescue her from her loneliness, exacerbated by his actions. The drama highlights the psychological strain and frequent disappointment experienced by women who desire a perfect marriage, examining the complex emotions and aspirations of women in relationships.

The play also explores the identity of stories and their continuity through retelling. Personifying the story as a woman, Karnad emphasizes its individuality and existence. V. Rangan suggests that a story is born, grows, and possesses an independent character. The narrative underscores the role of the reader in constructing meaning, aligning with reader-response theory, which posits that a story gains existence only through the reader's perception. The act of being "told" and "re-told" is an interpretation and reinterpretation process.

The backdrop of the flames symbolizes the concept of "passing on," with the flames representing the story's enduring nature. Karnad, a male playwright, personifies the story as a woman, implying that men shape women's identities. The story, like a woman, has its own existence and thrives through meaningful interpretation and re-interpretation. The narrative framework mirrors the main story's theme, as Rani's role is inverted by the end, with Appanna becoming a means to prove her divinity. The roles of the playwright and the story are also reversed, as the playwright listens to the story, a woman.

**Conclusion**

In conclusion, *Naga-Mandala* delves into women's experiences of desire and self-expression within dominant discourses, exposing the limitations of these narratives. The play suggests that myths are inherently rooted in contradictions. *Naga-Mandala* serves as an excellent example of how Karnad addressed these concerns using the postmodern theatrical technique of multiple endings, resonating with the postmodern mindset of the late twentieth century. In Indian society and culture, where rules and traditions are ingrained from an early age, the concept of mythology is far from new. This paper connects mythological elements to contemporary issues, showing how Karnad skillfully illuminates these topics without overtly criticizing society.

**References**


- Apeksha. (2015). *Girish Karnad: Feminism and plight of subalterns*. K Y Publications.
- Beauvoir, S. de. (1953). *A history of sex* (H. M. Parshley, Ed.). Malcomson Ltd.
- Dahiya, J. (2013). Naga-Mandala: A story of marriage and love. *Galaxy International Multidisciplinary Research Journal*.
- Karnad, G. (1990). *Naga-Mandala*. Oxford University Press.
- Karnad, G. (2002). *Three plays: Naga-Mandala, Hayavadana, Tughlaq*. Oxford University Press.
- Krishnaveni, P. (2013). A comparative study of myth and folk elements in Girish Karnad's *Nagamandala* and *Hayavadana*. *RSIRJLE*.
- Sreekumar, S., & Bindu, K. C. (2006). Adapting *Nagamandala* for a feminist theatre. In T. Mukherjee (Ed.), *Girish Karnad’s plays: Performance and critical perspectives* (pp. 220). Pencraft International.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 169-176
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೊಯ್ಸಳ ರಾಣಿಯರ ಕೊಡುಗೆಗಳು

**ಡಾ. ಅನಿತ ಟಿ**

ಅತಿಥಿ ಉಪನ್ಯಾಸಕರು, ಬಿ.ಎ, ಹಾನರ್ಸ್, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

***Abstract:***

*ಕರ್ನಾಟಕವನ್ನು ಬಹುಕಾಲದವರೆಗೆ ಆಳ್ವಿಕೆ ಮಾಡಿದವರಲ್ಲಿ ಹೊಯ್ಸಳರು ಪ್ರಮುಖರು. ನಾಡಿನ ಉದ್ದಗಲಕ್ಕೂ ಇರುವ ಅನೇಕ ಕಟ್ಟಡಗಳ ನಿರ್ಮಾಣದಲ್ಲಿ ಹೊಯ್ಸಳರ ಕೊಡುಗೆಯನ್ನು ಗುರುತಿಸಬಹುದು. ಹೊಯ್ಸಳರ ವಾಸ್ತುಶಿಲ್ಪವು 11ನೇ ಮತ್ತು 14ನೇ ಶತಮಾನದ ನಡುವೆ ತನ್ನದೇ ಆದ ಶೈಲಿಯನ್ನು ಜಗತ್ತಿಗೆ ಪರಿಚಯಿಸಿತು. ಇವರ ಕಾಲದ ದೇವಾಲಯಗಳಲ್ಲಿ ಕಂಡುಬರುವ ಸೂಕ್ಷ್ಮ ಕೆತ್ತನೆಗಳಿರುವ ವಿಗ್ರಹಗಳು, ಶಿಲಾಬಾಲಿಕೆಯರು, ಮದನಿಕೆಯರು, ರಾಮಾಯಣ, ಮಹಾಭಾರತ ಮತ್ತು ಪುರಾಣಕಥೆಗಳನ್ನು ಕಲ್ಲಿನಲ್ಲಿ ಅರಳಿಸಿರುವುದು ಇವರ ಕಲೆಯ ಕೈಚಳಕವನ್ನು ತೋರಿಸುತ್ತದೆ ಹಾಗೂ ಈ ಕಲಾ ಕುಸುರಿಯು ಕಣ್ಣಿಗೆ ಕಟ್ಟುವಂತೆ ಕಲ್ಲಿನಲ್ಲಿ ಮೂಡಿಬಂದಿರುವುದು ಜನರನ್ನು ಆಕರ್ಷಿಸುತ್ತದೆ. ವಿಗ್ರಹಗಳ ಕೆತ್ತನೆ ಮುನ್ನ ಅದರ ನೀಲನಕ್ಷೆಯನ್ನು ತಯಾರಿಸಿ ನಂತರ ವಿಗ್ರಹದ ಸೂಕ್ಷ್ಮ ಕೆತ್ತನೆಗಳನ್ನು ಕೈಗೊಳ್ಳುತ್ತಿದ್ದರು. ಹೊಯ್ಸಳರ ನಿರ್ಮಾಣದಲ್ಲಿ ಅನೇಕ ದೇವಾಲಯಗಳ ಕೆತ್ತನೆಯನ್ನು ಗಮನಿಸಿದಾಗ ಇಂದಿನ ಪೀಳಿಗೆಯ ತಾಂತ್ರಿಕತೆಯು ಅಂದಿನ ಕಾಲಕ್ಕೆ ಹೋಲಿಸಿದರೆ ಏನೂ ಅಲ್ಲ ಅನಿಸುತ್ತದೆ. ಇವರ ಕಾಲದ ಕಲಾ ಕೌಶಲ್ಯಕ್ಕೆ ಅನೇಕ ದೇವಾಲಯಗಳೇ ಸಾಕ್ಷಿಯಾಗಿವೆ. ಬೆಳವಡಿ, ಅಮೃತಾಪುರ, ಹೊಸಹೊಳಲು, ಮೊಸಳೆ, ಅರಸೀಕೆರೆ, ಬಸರಾಳು, ಕಿಕ್ಕೇರಿ ಮತ್ತು ದುದ್ದ ಮುಂತಾದ ದೇವಾಲಯಗಳ ರಚನೆ ಮುಖ್ಯವಾಹಿನಿಗೆ ಬಾರದಿದ್ದರೂ ಸಹ ತನ್ನ ಕಲಾ ಹಿರಿಮೆಯನ್ನು ಇನ್ನೂ ಉಳಿಸಿಕೊಂಡಿವೆ. ಪ್ರಸ್ತುತ ಲೇಖನದಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೊಯ್ಸಳ ರಾಣಿಯರ ಕೊಡುಗೆಯನ್ನು ವಿಶ್ಲೇಷಿಸಲಾಗಿದೆ.*

***Keywords:*** *ಕರ್ನಾಟಕ ಇತಿಹಾಸ, ಹೊಯ್ಸಳರು, ಕಲೆ ಮತ್ತು ವಾಸ್ತುಶಿಲ್ಪ, ದೇವಾಲಯಗಳು.*

**ಪೀಠಿಕೆ**

ಕರ್ನಾಟಕದ ಚರಿತ್ರೆಯಲ್ಲಿ ಹೊಯ್ಸಳರ ಇತಿಹಾಸವು ಹೆಚ್ಚು ಗಮನಾರ್ಹವಾದುದಾಗಿದೆ. ಈ ಮನೆತನವು ನಾಡಿನಾದ್ಯಂತ ತನ್ನ ಕಲಾ ಸೊಬಗಿನ ಕಂಪನ್ನು ಎಲ್ಲೆಡೆ ಹರಡುತ್ತಿದೆ. ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಮತ್ಯಾವ ರಾಜಮನೆತನದ ಕಲಾಸೊಬಗು ಸಾಟಿ ಎನಿಸಲಾರವು. ಕಲ್ಲಲ್ಲಿ ಕಲೆಯನ್ನು ಅರಳಿಸುವ ಕಲಾಪ್ರೌಢಿಮೆಯ ಪ್ರತೀಕವೇ ಹೊಯ್ಸಳರ ವಾಸ್ತುಶಿಲ್ಪಕ್ಕೆ ಮೇರುಗರಿಯೆನಿಸಿದೆ. ಅಂದಿನ ಕಾಲದಲ್ಲಿ ಪಟ್ಟದ ಅರಸಿ ಮತ್ತು ಯುವರಾಣಿಯರು ಕಲಾ ಸೇವೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದವರ ಬಗ್ಗೆ ಬಹುಶಃ ಕೆಲವು ಶಾಸನಗಳು ಬೆಳಕು ಚೆಲ್ಲುತ್ತವೆ. ಆದರೆ ಮೌಖಿಕ ಇತಿಹಾಸವು ರಾಣಿಯರ ಮತ್ತು ಸಾಮಾನ್ಯ ವರ್ಗದವರ ಕೊಡುಗೆಗಳ ಬಗೆಗೂ ವಿವರಣೆಯನ್ನು

***Please cite this article as:*** ಅನಿತ ಟಿ. (2024). ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೊಯ್ಸಳ ರಾಣಿಯರ ಕೊಡುಗೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 169–176

ನೀಡುತ್ತದೆ. ಸಾಮಾಜಿಕ ಕ್ಷೇತ್ರದಲ್ಲಿ, ಕೃಷಿ, ನೀರಾವರಿ, ವಾಣಿಜ್ಯ – ವ್ಯಾಪಾರ, ಕೆರೆ, ಕಾಲುವೆ ಮತ್ತು ಕಟ್ಟೆಗಳ ನಿರ್ಮಾಣ, ದೇವಾಲಯ ಮತ್ತು ಬಸದಿಗಳ ನಿರ್ಮಾಣಗಳ ಕಾರ್ಯದಲ್ಲಿ ರಾಣಿಯರ ಪಾತ್ರ ಬಹು ಮಹತ್ತರವಾದ ಕೊಡುಗೆಯನ್ನು ನೀಡಿದೆ. ಇವುಗಳ ಜೊತೆಗೆ ಮೂಲ ಸೌಕರ್ಯಗಳ ಅಭಿವೃದ್ಧಿ ಮತ್ತು ಪುಣ್ಯಪ್ರಾಪ್ತಿಗಾಗಿ ಸ್ವತಃ ರಾಣಿಯರೇ ಕಾಳಜಿವಹಿಸಿ ಸಾಮಾಜಿಕ ಕಾರ್ಯಗಳಲ್ಲಿ ಯಶಸ್ವಿಯಾಗಿರುವುದನ್ನು ಉಲ್ಲೇಖಿಸಬಹುದು. ಉನ್ನತ ಮತ್ತು ಸಾಮಾನ್ಯ ವರ್ಗದ ಮಹಿಳೆಯರು ವೃತ್ತಿ ಕಸುಬುಗಳಲ್ಲಿ ಭಾಗಿಯಾಗುತ್ತಿದ್ದರು ಮತ್ತು ಅವರಿಗೆ ಅನೇಕ ಸೌಕರ್ಯಗಳನ್ನು ರಾಣಿಯರು ನೀಡುತ್ತಿದ್ದರು ಎಂಬುದಕ್ಕೆ ರಾಣಿಯರ ಹೆಸರಿನಲ್ಲಿ ನೀಡುತ್ತದ್ದ ಭೂದಾನವನ್ನು ಇಲ್ಲಿ ನಿದರ್ಶಿಸಬಹುದು.

ವಿಷ್ಣುವರ್ಧನನ ರಾಣಿ ಜೈನಧರ್ಮದ ಶಾಂತಲೆಯನ್ನು ದಾನಚಿಂತಾಮಣಿ ಅತ್ತಿಮಬ್ಬೆಗೆ ಹೋಲಿಸಿದ್ದಾರೆ. ಶ್ರವಣಬೆಳಗೋಳ ಶಾಸನದಲ್ಲಿ ಇರುವಂತೆ,

***ಶಾಂತಲಾದೇವಿಯ ಗುಣಮಂ***
***ಶಾಂತಲಾ ದೇವಿಯ ಸಮಸ್ತ ದಾನೋನ್ನತಿಯಂ***
***ಶಾಂತಲಾ ದೇವಿಯ ಶೀಳೆಮ***
***ಚಿಂತ್ಯ ಭುವನೈಕ್ಯ ದಾನ ಚಿಂತಾಮಣಿ ಯಂ।***

ಎಂದು ಬಣ್ಣಿಸಲಾಗಿದೆ.

ಅತ್ತಿಮಬ್ಬೆಯು ದಾನಕ್ಕೆ ಹೆಸರುವಾಸಿಯಾಗಿದ್ದು ಕಲೆ ಮತ್ತು ನೃತ್ಯಕ್ಕೆ ಹೆಸರುವಾಸಿಯಾಗಿದ್ದಳು. ವಿಷ್ಣುವರ್ಧನನ ಕಾಲದಲ್ಲಿ ಕಲಾ ಹಿರಿಮೆ ಮುಗಿಲು ಮುಟ್ಟುತ್ತಿದ್ದ ಕಾಲವದು. ಅತ್ಯಂತ ಪ್ರಬಲ ಹಾಗೂ ಕಲೆಯ ಪೋಷಕನಾದ ವಿಷ್ಣುವರ್ಧನನು ತನ್ನ ಆಡಳಿತದ ಅವಧಿಯಲ್ಲಿ ಜನತೆಗೆ ನೆಮ್ಮದಿ ಸಿಗುವಂತ ದೇವಾಲಯಗಳ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದನ್ನು ಗಮನಿಸಿದಾಗ ಆತನ ರಾಣಿಯೂ ಹಾಗೂ ಧರ್ಮಪತ್ನಿಯೂ ಆದ ಶಾಂತಲೆಯೂ ಆತನನ್ನು ಹಿಂಬಾಲಿಸಿರುವುದನ್ನು ಗಮನಿಸಬಹುದು. ಇದಕ್ಕೆ ಶಾಂತಲೆಯು ನಿರ್ಮಿಸಿರುವ ದೇವಾಲಯಗಳೇ ಸಾಕ್ಷಿಯಾಗಿವೆ.

ವಿಷ್ಣುವರ್ಧನನು ತನ್ನ ಹಿರಿಯ ರಾಣಿ ಶಾಂತಲೆಯ ಜೊತೆಗೂಡಿ ಬೇಲೂರಿನಲ್ಲಿ ಚನ್ನಕೇಶವ ದೇವಾಲಯ ನಿರ್ಮಿಸಿದನು.[1] ಮತ್ತು ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ನಿರ್ಮಿಸಿದನು.[2] ಬೇಲೂರಿನ ಚನ್ನಕೇಶವ ದೇವಾಲಯದ ಸನಿಹದಲ್ಲೇ ಇರುವ ಕಪ್ಪೆಚೆನ್ನಿಗರಾಯನ ದೇವಾಲಯವನ್ನು ಸ್ವತಃ ಶಾಂತಲೆಯೇ ನಿರ್ಮಿಸಿದ್ದಾಳೆ.[3] ಬೇಲೂರಿನ ಚನ್ನಕೇಶವ ದೇವಾಲಯದ ಕಲಾ ಕುಸುರಿ ಮತ್ತು ಸೂಕ್ಷ್ಮ ಕೆತ್ತನೆಯು ಮಂತ್ರ ಮುಗ್ಧರನ್ನಾಗಿಸುತ್ತದೆ. ಆದ ಕಾರಣದಿಂದಲೆ ಈ ದೇವಾಲಯವನ್ನು "ಲಲಿತ ಕಲೆಗಳ ವಸ್ತುಸಂಗ್ರಹಾಲಯ" ಎಂಬುದಾಗಿ ಎಂ.ಹೆಚ್.ಕೃಷ್ಣರವರು ಕರೆದಿದ್ದಾರೆ ಮತ್ತು ಹೆನ್ರಿಕ್ ಕಸಿನ್ಸ್ ಎಂಬುವವರು "ಚಿನ್ನ, ಬೆಳ್ಳಿಯ ಕೆತ್ತನೆಯ ನುಣುಪುಗಳು ಈ ದೇವಾಲಯಗಳಲ್ಲಿರುವ ಕೆತ್ತನೆಗಳಿಗಿಂತ ಸೊಗಸಾಗಿರಲಾರವು" ಎಂದಿದ್ದಾರೆ ಹಾಗೂ ಇತಿಹಾಸಕಾರರು ಈ ದೇವಾಲಯವನ್ನು "ಶಿಲೆಯಲ್ಲಿನ ಭಾವಗೀತೆ" ಎಂದು ವರ್ಣಿಸಿದ್ದಾರೆ.



**ಚೆನ್ನಕೇಶವ ದೆ ೀವಾಲಯದ ಮುಖ್ಯ ಗೋಪುರ**

[1] ಎ.ಕ.v.ಬೇಲೂರು, ಶಾ.ಸಂ.58.ಕ್ರಿ.ಶ.117

[2] ಎ.ಕ.v. ಟಿ.ನರಸೀಪುರ, ಶಾ.ಸಂ.151. ಕ್ರಿ.ಶ.117

[3] ಗೋಪಾಲ್, ಬಾ.ರಾ. (1993). *ಕರ್ನಾಟಕದ ಕಲೆಗಳು. ಸಂ–4,* ಕನ್ನಡ ಸಾಹಿತ್ಯ ಪರಿಷತ್ತು.



**ನಕ್ಷತ್ರಕಾರದಲ್ಲಿರುವ ದೇವಾಲಯ**

ಹಾಸನ ಜಿಲ್ಲೆ ಬೇಲೂರು ತಾಲೂಕಿನ ಯಗಚಿ(ಬದರಿ) ನದಿಯ ದಡದಲ್ಲಿರುವ ಚೆನ್ನಕೇಶವ ದೇವಾಲಯವನ್ನು ವಿಜಯ ನಾರಾಯಣ ದೇವಾಲಯ ಎಂತಲೂ ಕರೆಯುತ್ತಾರೆ. ಹಿಂದೆ ಈ ದೇವಾಲಯವನ್ನು ವಿಷ್ಣುವಿನ ನಿವಾಸ, ಐಹಿಕ ವೈಕುಂಠ ಮತ್ತು ದಕ್ಷಿಣ ವಾರಾಣಾಸಿ ಎಂದು ಕರೆಯಲಾಗುತ್ತಿತ್ತು. ಚನ್ನಕೇಶವ ಎಂದರೆ ಬೆಳಕು ಮತ್ತು ಸುಂದರ ಕೇಶವ ಎಂದರ್ಥವಾಗಿದ್ದು, ಇದು ವೈಷ್ಣವ ದೇವಾಲಯವಾಗಿದೆ. ವಿಷ್ಣುವರ್ಧನನು ಇದನ್ನು ಕ್ರಿ.ಶ 1117ರಲ್ಲಿ ನಿರ್ಮಿಸಿದ್ದಾನೆ. ಇದು ನಕ್ಷತ್ರಾಕಾರದ ತಳವಿನ್ಯಾಸವಿದ್ದು ಗೋಪುರವು ದ್ರಾವಿಡ ಶೈಲಿಯಲ್ಲಿದೆ. ತಲಕಾಡಿನಲ್ಲಿ ಚೋಳರ ಸೇನಾಪತಿ ಆದಿಯಮನನ್ನು ಸೋಲಿಸಿ ಅದರ ವಿಜಯದ ಸವಿನೆನಪಿಗಾಗಿ ಮತ್ತು ಜೈನಧರ್ಮವನ್ನು ತ್ಯಜಿಸಿ ವೈಷ್ಣವ ಧರ್ಮವನ್ನು ಸ್ವೀಕರಿಸಿದ ನೆನಪಿಗಾಗಿ ಈ ದೇವಾಲಯವನ್ನು ನಿರ್ಮಿಸಿದನೆಂದು ದಾಖಲೆಗಳಿವೆ. ಈ ದೇವಾಲಯದ ಶಿಲ್ಪಿಗಳು ದಾಸೋಜಾ, ಚಾವಣ, ಮಲ್ಲಿಯನ್ನಾ, ಮಲ್ಲೋಜಾ ಹಾಗೂ ನಾಗೋಜಾ ಎಂಬುವವರು.

“ಬೇಲೂರಿನಲ್ಲಿ ಶಿಲಾಬಾಲಿಕೆಯರ ಕೆತ್ತನೆ ಹೆಚ್ಚು, ಹಳೆಬೀಡಿನಲ್ಲಿ ಮಹಾಭಾರತ ಕಥೆಯ ಕೆತ್ತನೆ ಹೆಚ್ಚು” ಎಂದಿರುವುದು ದೇವಾಲಯಗಳ ಸೂಕ್ಷ್ಮ ಕೆತ್ತನೆಯ ವರ್ಗೀಕರಣವನ್ನು ತಿಳಿಸುತ್ತದೆ. ಬೇಲೂರಿನ ಚನ್ನಕೇಶವ ದೇವಾಲಯವನ್ನು ಕಲೆಯ ಆಧಾರದ ಮೇಲೆ ಜೀವಾತ್ಮ (ಮನುಷ್ಯನಿಗೆ ಸಂಬಂಧಿಸಿದ ಕಲೆಗಳು) ಮತ್ತು ಪರಮಾತ್ಮ (ದೇವರಿಗೆ ಸಂಬಂಧಿಸಿದ ಕಲೆಗಳು) ಎಂದು ವರ್ಗೀಕರಿಸಬಹುದು. ಇದು ಗರ್ಭಗುಡಿಗೆ ಸೇರಿದ ಸ್ಥಳವಾಗಿರುತ್ತದೆ. ಈ ಭಾಗದ ಕಟ್ಟಡದ ಕೆಳಗೆ ಹೆಚ್ಚಾಗಿ ಶಕ್ತಿಯ ಸಂಕೇತವಾದ ಆನೆ, ಶೌರ್ಯದ ಸಂಕೇತವಾದ ಸಿಂಹ ಮತ್ತು ವೇಗದ ಸಂಕೇತವಾದ ಕುದುರೆಗಳ ಕೆತ್ತನೆ ಸುಂದರವಾಗಿದೆ.

ಸುಮಾರು 900 ವರ್ಷಗಳ ಹಿಂದೆ ನಿರ್ಮಿಸಿರುವ ಈ ದೇವಾಲಯ ಬಳಪದ ಕಲ್ಲಿನಿಂದ ನಿರ್ಮಾಣವಾಗಿದೆ. ಸುತ್ತಲೂ ಮತ್ಸ್ಯ, ಕೂರ್ಮ, ಹಂಸ ಹೀಗೆ ಇತರೆ ದಶಾವತಾರಿ ಕೆತ್ತನೆ ಆಕರ್ಷಕವಾಗಿದೆ.

ದರ್ಪಣ ಹಿಡಿದಿರುವ ಶಿಲಾಬಾಲಿಕೆಯ ವಿಗ್ರಹ ಹೆಚ್ಚು ಆಕರ್ಷಕ ಮತ್ತು ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ. ಇದನ್ನು ಕರ್ನಾಟಕದ ಪ್ರವಾಸೋದ್ಯಮ ಇಲಾಖೆಯು ತನ್ನ ಲೋಗೋವಾಗಿ ಬಳಸುತ್ತಿದೆ. ಇದೇ ರೀತಿ ಹೋಲಿಕೆಯಾಗುವ ಸುಮಾರು 42 ಮದನಿಕೆಯರಿರುವ ಶಿಲ್ಪಗಳು ದೇವಾಲಯದ ಸುತ್ತಲೂ ಇವೆ ಹಾಗೂ 644ಕ್ಕೂ ಹೆಚ್ಚು ಆನೆಗಳ ಸಾಲಿದ್ದು ಇದರ ಸೂಕ್ಷ್ಮ ವಿನ್ಯಾಸವಿರುವ ಶಿಲ್ಪಗಳು ಹಾಗೂ ತ್ರಿಭಂಗ ನರ್ತನ ಶಿಲೆಯೂ ಹೆಚ್ಚು ಆಕರ್ಷಿಸುತ್ತದೆ.



**ಶಿಲಾಬಾಲಿಕೆ (ದರ್ಪಣ ಸುಂದರಿ)**

ಹೊಯ್ಸಳರ ನಂತರ ಬಂದ ವಿಜಯನಗರದ ಅರಸರಲ್ಲಿ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಲಕ್ಷ್ಮಿ ದೇವಾಲಯ ಮತ್ತು ಭೂದೇವಿ ದೇವಾಲಯ ಮತ್ತು ಕಲ್ಯಾಣಮಂಟಪದ ನಿರ್ಮಾಣವಾಗಿದೆ. ಈ ಮೂರು ದೇವಾಲಯಗಳ ಜಗತಿ ಚೌಕಾಕಾರವಿದ್ದರೆ ಹೊಯ್ಸಳರ ಶೈಲಿ ನಕ್ಷತ್ರಾಕಾರದ ಸಮ್ಮಿಲನವನ್ನು ಇಲ್ಲಿ ನೋಡಬಹುದು. ಚೆನ್ನಕೇಶವ ದೇವಾಲಯದ ರಚನೆಯಲ್ಲಿ 32 ನಕ್ಷತ್ರಾಕಾರದ ಮೂಲೆ (Corner) ಯನ್ನು ನೋಡಬಹುದು. ದೇವಸ್ಥಾನದ ಒಳಭಾಗದಲ್ಲಿ ನಾಟ್ಯ ಮಂಟಪವಿದೆ (Dancing stage) ಇದು ದೇವರಿಗೆ ನಾಟ್ಯ ಅಥವಾ ನೃತ್ಯ ಸೇವೆ ಮಾಡಲು ಬಿಟ್ಟಿರುವ ಸ್ಥಳ. ಇಲ್ಲಿ 42 ಬೆಣಚು ಕಲ್ಲುಗಳನ್ನು ಬಳಸಿ ಒಳ ಚಾವಣಿ (celling )ಮಾಡಲಾಗಿದೆ ಹಾಗೂ ಇಲ್ಲಿ ತ್ರಿಮೂರ್ತಿಗಳ ಸಂಕೇತವಿರುವುದರಿಂದ ಇದನ್ನು ಭುವನೇಶ್ವರಿ ಎನ್ನುತ್ತಾರೆ. 12 ಅಡಿ ಅಗಲ 24 ಅಡಿ ಸುತ್ತಳತೆ, 4–5 ಅಡಿ ಆಳವಾದ ಕಮಾನಿದೆ. ಇದಕ್ಕೆ ಹೊಂದಿಕೊಂಡಂತೆ ಕಂಬದಲ್ಲಿ ನಾಟ್ಯರಾಣಿ ಶಾಂತಲಾ ದೇವಿಯ ವಿಗ್ರಹವಿದೆ. ಈ ವಿಗ್ರಹದ ಕೆಳಗೆ ಶಿಲ್ಪಿಯ ಹೆಸರನ್ನು ಕೆತ್ತಲಾಗಿದೆ. 9 ಅಡಿ ಚೆನ್ನಕೇಶವನ ವಿಗ್ರಹವಿದೆ ಹಾಗೂ ಮಕರ ತೋರಣ ಹೆಚ್ಚು ಆಕರ್ಷಣೆಯುತವಾಗಿದೆ. ಇಲ್ಲಿನ ಒಂದೊಂದು ಕಂಬಗಳು ಒಂದೊಂದು ಶೈಲಿಯಲ್ಲಿರುವುದು ಆಸಕ್ತಿಯನ್ನು ಹೆಚ್ಚಿಸುತ್ತದೆ. ಉಯ್ಯಾಲೆ ಮಂಟಪ ಹಾಗೂ ದೀಪಸ್ತಂಭ ಇಲ್ಲಿ ಮತ್ತೊಂದು ಆಕರ್ಷಣೆ. ಈ ದೇವಾಲಯವು ಸುಮಾರು 4 ರಿಂದ 5 ಎಕರೆ ವಿಸ್ತೀರ್ಣದಲ್ಲಿದ್ದು, ಇಂದಿನ ಕಾಲದವರ ನಂಬಿಕೆಯಂತೆ ವಾಸ್ತು ಪ್ರಕಾರವನ್ನು (ಕೆಲ ಮಂದಿ ಪ್ರತಿಯೊಂದಕ್ಕೂ ನೋಡುವುದು) ಹೊಂದಿದೆ. ಇಂದಿಗೂ ಯಾವುದೇ ಪ್ರಾಕೃತಿಕ ವಿಕೋಪಕ್ಕೂ ಒಳಗಾಗದೇ ಬಲಿಷ್ಠವಾದ ದೇವಾಲಯವಾಗಿದೆ. ಈ ದೇವಾಲಯದ ನಯ ನಾಜೂಕನ್ನು ಹಾಗೆಯೇ ನೋಡುತ್ತಾ ಸಾಗಿದರೆ ವಿಜ್ಞಾನ ಮತ್ತು ಗಣಿತದ ಬಗ್ಗೆ ಅಂದು ಜನರಲ್ಲಿ ಇದ್ದ ಜ್ಞಾನದ ಅಗಾಧತೆ ತಿಳಿಯುತ್ತದೆ. ಪ್ರತಿಯೊಂದು ಕೆತ್ತನೆಯೂ ಸರಿಯಾದ ಅಳತೆ ಮತ್ತು ಪ್ರಮಾಣಬದ್ಧ ಚಾಕಚಕ್ಯತೆಯನ್ನು ತಿಳಿಸುತ್ತದೆ. ಮಳೆಗಾಲದಲ್ಲಿ ನೀರು ಸರಾಗವಾಗಿ ಹರಿಯಲು ಉತ್ತರ ದಿಕ್ಕಿಗೆ ಹರಿವಿನ ದಿಕ್ಕನ್ನು ನಿಗಧಿ ಮಾಡಲಾಗಿದೆ ಮತ್ತು ಗೋಪುರದಲ್ಲಿ 5 ಕಿಟಕಿಗಳಿದ್ದು ಬಿರುಗಾಳಿಯನ್ನು ಸರಾಗವಾಗಿ ಹೊರ ಹೋಗಿ ಬರುವಂತೆ ನಿರ್ಮಿಸಿರುವುದು ಅವರ ಜ್ಞಾನ ಭಂಡಾರದ ವಿಸ್ತಾರವನ್ನು ತೋರಿಸುತ್ತದೆ.



**ಚೆನ್ನಕೇಶವ ದೇವರ ಮೂರ್ತಿ**



**ಮದನಿಕೆ ಮತ್ತು ಹೊಯ್ಸಳರ ಲಾಂಛನ**

**ತಲಕಾಡಿನ ಕೀರ್ತಿ ನಾರಾಯಣ ದೇವಾಲಯ**

ಮೈಸೂರು ಜಿಲ್ಲೆ ಟಿ. ನರಸೀಪುರ ತಾಲೂಕಿನ ಕೀರ್ತಿನಾರಾಯಣ ದೇವಾಲಯದಲ್ಲಿ ಹೊಯ್ಸಳರ ಕಲೆಯನ್ನು ನೋಡಬಹುದು. ತಲಕಾಡಿನಲ್ಲಿ ಸುಮಾರು 30ಕ್ಕೂ ಹೆಚ್ಚು ದೇವಾಲಯಗಳು ಮತ್ತು ಬಸದಿಗಳು ಇದ್ದವೆಂದು ಹೇಳಲಾಗುತ್ತದೆ. ಆದರೆ ಪ್ರಸ್ತುತ ಅದರ ಸಂಖ್ಯೆಯಲ್ಲಿ ಇಳಿಮುಖವಾಗಿರುವುದನ್ನು ಗುರುತಿಸಬಹುದು. ತಲಕಾಡನ್ನು ಹಿಂದೆ ಗಂಗರು ಮತ್ತು ಚೋಳರು ಆಡಳಿತ ನಡೆಸುತ್ತಿದ್ದ ಪ್ರದೇಶವಾಗಿತ್ತು. ನಂತರ ಹೊಯ್ಸಳರು ಈ ಪ್ರದೇಶವನ್ನು ವಶಪಡಿಸಿಕೊಂಡರು. ಬಿಟ್ಟಿದೇವನ ರಾಣಿಯಾದ ಶಾಂತಲೆ ಈ ಸ್ಥಳದಲ್ಲಿನ ಮಹಿಮೆಯನ್ನು ತಿಳಿದು ಇಲ್ಲಿ ಕೀರ್ತಿ ನಾರಾಯಣ ದೇವಾಲಯವನ್ನು ನಿರ್ಮಾಣ ಮಾಡಿದರೆಂಬ ಪ್ರತೀತಿ ಇದೆ.

ಈ ದೇವಾಲಯವು ಸುಮಾರು 1911ರ ವರೆಗೂ ಮರಳಿನಿಂದ ಮುಚ್ಚಿ ಹೋಗಿತ್ತು ನಂತರ ಇದನ್ನು ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ ಸಂಸ್ಥೆಯ ಸಹಯೋಗದೊಂದಿಗೆ ಉತ್ಖನನ ಮಾಡುವ ಮೂಲಕ ಹೊರತರಲಾಯಿತು. ಚೋಳರ ಮೇಲೆ ವಿಜಯ ಸಾಧಿಸಿದ ನೆನಪಿಗೆ ಇದೇ ಸ್ಥಳದಲ್ಲಿ ಕೀರ್ತಿನಾರಾಯಣನ ದೇವಾಲಯವನ್ನು ನಿರ್ಮಿಸಲಾಗಿದೆ ಹಾಗೂ ಚೋಳರ ಸೋಲು ಮತ್ತು ವಿಷ್ಣುವರ್ಧನನ ಗೆಲುವಿನ ಸಂಕೇತವಾಗಿ "ತಲಕಾಡುಗೊಂಡ" ಎಂಬ ಬಿರುದು ಧರಿಸುತ್ತಾನೆ. ಮದ್ದೂರು ತಾಲೂಕು ಅರೆತಿಪ್ಪೂರು ಗ್ರಾಮದಲ್ಲಿರುವ ಶಾಸನದ ಪ್ರಕಾರ ತಲಕಾಡು ಯುದ್ಧದ ಗೆಲುವಿಗೆ ಕಾರಣನಾದಂತ ದಂಡನಾಯಕ ಗಂಗರಾಜನಿಗೆ ಅನೇಕ ಪ್ರದೇಶಗಳನ್ನು ಬಿಟ್ಟುಕೊಡುತ್ತಾನೆ. ಸುಮಾರು 800 ಎಕರೆ ಪ್ರದೇಶ ವ್ಯಾಪ್ತಿಯು ಮರಳು ಮಿಶ್ರಿತ ಪ್ರದೇಶವಾಗಿದೆ. ಪಂಚಲಿಂಗೇಶ್ವರ ದೇವಾಲಯ ಇಲ್ಲಿನ ಪ್ರಮುಖ ದೇವಾಲಯ. ಇಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ಸುಮಾರು 12ನೇ ಶತಮಾನದಲ್ಲಿ ಅಂದರೆ ಕ್ರಿ.ಶ 1117 ರಲ್ಲಿ ನಿರ್ಮಾಣ ಮಾಡಲಾಗಿದೆ. ಇಲ್ಲಿ ದೇವಾಲಯಕ್ಕೆ ವಿಶಾಲವಾದ ಸ್ಥಳ ಇರುವುದಿಲ್ಲ ಬದಲಿಗೆ ಕೀರ್ತಿ ನಾರಾಯಣ ದೇವಾಲಯ ನಕ್ಷತ್ರಾಕಾದ ತಳ ವಿನ್ಯಾಸವನ್ನು ಹೊಂದಿದ್ದು ಇದರ ವಿರುದ್ಧ ದಿಕ್ಕಿನಲ್ಲಿ ಸುಂದರವಲ್ಲಿ ಅಮ್ಮನವರ ಗುಡಿ ಇದೆ. ಇದನ್ನು ಕೀರ್ತಿ ನಾರಾಯಣನ ಪತ್ನಿ ಎಂದು ಹೇಳಲಾಗುತ್ತದೆ. ಸನಿಹದಲ್ಲೊಂದು ಪುಟ್ಟ ಬಾವಿಯೂ ಇದೆ. ಶಿವನ 5 ವಿವಿಧ ಮುಖಗಳನ್ನು ಹೊಂದಿರುವ ಪುಣ್ಯ ಕ್ಷೇತ್ರ ತಲಕಾಡು. ತಲ ಮತ್ತು ಕಾಡು ಎಂಬ ಇಬ್ಬರು ಬೇಟೆಗಾರರಿಂದ ಈ ಹೆಸರು ಬಂದಿದೆ ಮತ್ತು ಆ ಶಿವನ 5 ಮುಖಗಳ ಶಿವನ ಸ್ಥಾಪನೆಗೂ ಇವರೇ ಕಾರಣ ಎಂಬ ಮೌಖಿಕ ಮಾಹಿತಿ ಇದೆ. ಸದ್ಯೋಜ್ಯೋತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಐದು ಮುಖಗಳಿರುವುದು ಹೆಚ್ಚು ಆಸಕ್ತಿಯನ್ನು ಉಂಟು ಮಾಡುತ್ತದೆ. ಇಲ್ಲಿ 9 ಅಡಿ ಎತ್ತರದ ಕೀರ್ತಿ ನಾರಾಯಣನ ವಿಗ್ರಹವಿದೆ.



**ತಲಕಾಡಿನ ಕೀರ್ತಿ ನಾರಾಯಣ ದೇವಾಲಯ**

**ಧರ್ಮೇಶ್ವರ ದೇವಾಲಯ**

ಹಾಸನ ಜಿಲ್ಲೆ ಮತ್ತು ತಾಲೂಕಿನ ಶಾಂತಿ ಗ್ರಾಮದಲ್ಲಿ ಧರ್ಮೇಶ್ವರ ದೇವಾಲಯವಿದೆ. ಈ ದೇವಾಲಯ ವಿಷ್ಣುವರ್ಧನನ ರಾಣಿಶಾಂತಲೆಗೆ ಸಂಬಂಧಿಸಿದ್ದು ಮತ್ತು ಇಲ್ಲಿ ಶಾಂತಲೆಯು ನಿರ್ಮಿಸಿದ ಬಸದಿ ಇತ್ತು ಎಂದು ಹೇಳಲಾಗುತ್ತದೆ ಆದರೆ ಪ್ರಸ್ತುತ ಇಲ್ಲಿ ಬಸದಿ ಎಲ್ಲೂ ಕಂಡು ಬರುವುದಿಲ್ಲ ಬದಲಿಗೆ ಶಾಂತಲೆಯ ತಂದೆಯವರಾದ ಹೆಗ್ಗಡೆ ಮಾರಸಿಂಹಯ್ಯನು "ಧರ್ಮೇಶ್ವರ

ದೇವಾಲಯವನ್ನು ಕಟ್ಟಿಸಿದ ಮಾಹಿತಿ ದೊರೆಯುತ್ತದೆ. ಕ್ರಿ.ಶ. 1123 ರಲ್ಲಿ ನಿರ್ಮಾಣವಾಗಿರುವ ಈ ದೇವಾಲಯದ ತಳಪಾಯವು ಆಯತಾಕಾರದಲ್ಲಿದೆ. ಈಶ್ವರನ ಗರ್ಭಗುಡಿಯ ಮುಂದೆ ನಂದಿ ವಿಗ್ರಹವಿದೆ. ಈ ದೇವಾಲಯವನ್ನು ನೋಡಿದಾಗ ಹೊಯ್ಸಳರ ಇತರೆ ದೇವಾಲಯಗಳಿಗಿರುವಂತೆ ಯಾವುದೇ ಕಲಾ ನೈಪುಣ್ಯತೆ ಗುರುತಿಸಲು ಸಾಧ್ಯವಿಲ್ಲ ಮತ್ತು ಇಲ್ಲಿ ಜೀರ್ಣೋದ್ಧಾರದ ಕೊರತೆ ಕಾಣುತ್ತದೆ. ದೇವಾಲಯದ ಸುತ್ತಲಿನ ಅವಶೇಷಗಳು ಚೆಲ್ಲಾಪಿಲ್ಲಿಯಾಗಿವೆ. ಸ್ಥಳಿಯರು ದೇವಾಲಯದ ಕಂಬಗಳಿಗೆ ಜಾನುವಾರುಗಳನ್ನು ಕಟ್ಟಲು ಬಳಸಿಕೊಳ್ಳುತ್ತಿದ್ದಾರೆ. ದುರಂತ ಎಂದರೆ ಈ ದೇವಾಲಯದ ಇರುವಿಕೆಯನ್ನು ಮುಖ್ಯವಾಹಿನಿಗೆ ಪರಿಚಯಿಸುವ ಯಾವ ಪ್ರಯತ್ನವು ನಡೆಯದೆ ಇರುವುದು.



**ಧರ್ಮೇಶ್ವರ ದೇವಾಲಯ**

**ಕಪ್ಪೆ ಚೆನ್ನಿಗರಾಯನ ದೇವಾಲಯ**

ಬೇಲೂರಿನ ಚನ್ನಕೇಶವ ದೇವಾಲಯದ ಬಲ ಭಾಗಕ್ಕೆ ಅಂದರೆ ದಕ್ಷಿಣ ದಿಕ್ಕಿನಲ್ಲಿ ಶಾಂತಲೆ ಕ್ರಿ.ಶ.1117 ರಲ್ಲಿ ಅದೇ ವರ್ಷ ಕಟ್ಟಿಸಿದ ಕಪ್ಪೆ ಚೆನ್ನಿಗರಾಯನ ದೇವಾಲಯವಿದೆ. ಕೇಶವ ದೇವಾಲಯಕ್ಕೆ ಇರುವ ಕಲಾ ಕುಸುರಿ ಈ ದೇವಾಲಯಕ್ಕೆ ಇರುವುದಿಲ್ಲ ಈ ದೇವಾಲಯಕ್ಕೆ ಕಪ್ಪೆ ಚೆನ್ನಿಗರಾಯ ಎಂದು ಹೆಸರು ಬರಲು ಕಾರಣ ಒಂದು ದಂತ ಕತೆಯ ಪ್ರಕಾರ ವಿಷ್ಣುವಿನ ಸ್ಥಳವಾದ ಚೆನ್ನಕೇಶವ ದೇವಾಲಯದ ನಿರ್ಮಾಣ ಕಾರ್ಯದಲ್ಲಿ ಕೆತ್ತನೆಯ ಕೆಲಸ ನಡೆಯುತ್ತಿರುವಾಗ ಅಮರಶಿಲ್ಪಿ ಜಕಣಾಚಾರಿ ಮತ್ತು ಆತನ ಮಗ ಡಂಕಣಾಚಾರಿಯ ನಡುವೆ ಶಿಲ್ಪದ ಕೆತ್ತನೆಯ ವಿಚಾರವಾಗಿ ವಾಗ್ವಾದ ನಡೆದಾಗ ಡಂಕಣಾಚಾರಿ ಶಿಲ್ಪದ ಪ್ರತಿಮೆಯಲ್ಲಿ ಜೀವ ಇರುವ ವಸ್ತುವಿದೆ ಎಂದು ವಾದ ಮಾಡುತ್ತಾನೆ ಮತ್ತು ಈ ನ್ಯೂನ್ಯತೆಯ ಬಗ್ಗೆ ಅವಮಾನ ಎದುರಿಸಬೇಕಾಗುತ್ತದೆ.

ಚೆನ್ನಕೇಶವ ಪ್ರತಿಮೆಯಲ್ಲಿ ದೋಷವೇನಾದರು ಇದ್ದರೆ ಮತ್ತು ಅದು ರುಜುವಾತಾದರೆ ತನ್ನ ಬಲಗೈಯನ್ನು ಕತ್ತರಿಸುವುದಾಗಿ ಹೇಳುತ್ತಾನೆ ಮತ್ತು ಅದು ಸಾಭೀತಾಗುತ್ತದೆ. ತನ್ನ ಮಾತಿನಂತೆ ಜಕಣಾಚಾರಿ ತನ್ನ ಬಲಗೈಯನ್ನು ಕತ್ತರಿಸಿಕೊಳ್ಳುತ್ತಾನೆ. ಇದನ್ನು ಗಮನಿಸಿದ ಶಾಂತಲೆಯು ಇದೇ ರೀತಿಯ ಮರು ಪ್ರತಿಮೆಯ ಕೆತ್ತನೆ ಆಗಬೇಕೆಂದು ಆಜ್ಞೆ ಮಾಡಿದ ಕಾರಣ ಆ ದೇವಾಲಯಕ್ಕೆ ಕಪ್ಪೆ ಚೆನ್ನಿಗರಾಯನ ದೇವಾಲಯ ಎಂದು ಹೆಸರಾಗುತ್ತದೆ. ಈ ದೇವಾಲಯದ ವಿಸ್ತೀರ್ಣದಲ್ಲಿ 4 ಅಡಿಗಳ ಎತ್ತರದ ಜಗತಿ ಇದೆ. ನವರಂಗ, ನಕ್ಷತ್ರಾಕಾರದ ತಳ ವಿನ್ಯಾಸ, ಗೋಪುರ, ವಿಮಾನ, ಎತ್ತರದ ಬಾಗಿಲುಗಳಿವೆ. ನವರಂಗದಲ್ಲಿ ತೆರೆದ ಬಾಗಿಲುಗಳಿದ್ದವು ಅವುಗಳನ್ನು ಇಮ್ಮಡಿ ಬಲ್ಲಾಳ 1206 ರಲ್ಲಿ ಮುಚ್ಚಿಸಿದ ಎಂದು ಹೇಳಲಾಗುತ್ತದೆ.ಅಲಂಕಾರ ರಹಿತ ಗರ್ಭಗುಡಿಯೊಳಗೆ 6 1/2 ಅಡಿಗಳ ಎತ್ತರದ ಕಪ್ಪೆ ಚೆನ್ನಿಗರಾಯನ ವಿಗ್ರಹ, ದಶಾವತಾರ, ಅಷ್ಟದಿಕ್ಪಾಲಕರ ಮೂರ್ತಿಗಳಿಂದ ಅಲಂಕೃತವಾದ ಪ್ರಭಾವಳಿ ಪೀಠದ ಮೇಲೆ ಗರುಡ ಇದ್ದು ಇಲ್ಲಿ ಶಾಂತಲೆಯು ಹೊರಡಿಸಿದ ಶಾಸನ ಇದೆ.

ಈ ದೇವಾಲಯದ ಸಂಕೀರ್ಣದಲ್ಲಿ 2 ಗರ್ಭಗುಡಿಗಳು(ಚಿಟಿಛಿಣಣಥ) ಇವೆ. ಒಂದು ಕಪ್ಪೆ ಚೆನ್ನಿಗರಾಯನಿಗೆ ಮತ್ತೊಂದು ವೇಣುಗೋಪಾಲ ಸ್ವಾಮಿಗೆ ಅರ್ಪಿತವಾಗಿವೆ. ಇದು ದ್ವಿಕೂಟ ದೇವಾಲಯವಾಗಿದೆ. 2 ಗರ್ಭಗೃಹಗಳಲ್ಲಿ ಒಂದು ಪಶ್ಚಿಮ ದಿಕ್ಕಿನಲ್ಲಿದೆ ಮತ್ತೊಂದು ದಕ್ಷಿಣ ದಿಕ್ಕಿನಲ್ಲಿದೆ

ಕ್ರಮವಾಗಿ ಇವು ಎರಡೂ ದೇವರಿಗೆ ನಿರ್ಮಿಸಲಾಗಿದೆ. ಕಪ್ಪೆ ಚೆನ್ನಿಗರಾಯನ ದೇವಾಲಯವು ಮುಖ್ಯ ದೇವಾಲಯದಂತೆ ವಿಷ್ಣುವಿಗೆ ಅರ್ಪಿತವಾಗಿದೆ. ಹೀಗೆ ಕಪ್ಪೆ ಚೆನ್ನಿಗರಾಯನ ದೇವಾಲಯದ ನಿರ್ಮಾದಲ್ಲಿ ರಾಣಿ ಶಾಂತಲೆಯ ಪಾತ್ರ ಬಹು ಮಹತ್ವ ಪಡೆದಿದೆ.



**ಕಪ್ಪೆ ಚೆನ್ನಿಗರಾಯ ದೇವಾಲಯ**

ಒಟ್ಟಾರೆಯಾಗಿ ಹೇಳುವುದಾದರೆ ಹೊಯ್ಸಳರ ಕಾಲವು ದೇವಾಲಯಗಳ ನಿರ್ಮಾಣದಲ್ಲಿ ಸುವರ್ಣಯುಗ ಎಂದೇ ಹೇಳಬಹುದು. ನಾಡಿನ ಸುತ್ತಲೂ ಇರುವ ಪ್ರತಿಯೊಂದು ದೇವಾಲಯದ ಕೆತ್ತನೆಯೂ ವಿಸ್ಮಯ ಅನುಭವ ನೀಡುತ್ತದೆ. ಈ ದೇವಾಲಯಗಳು ಪ್ರವಾಸಿಗರನ್ನು ತನ್ನತ್ತ ಸೆಳೆಯುವಲ್ಲಿ ಯಶಸ್ವಿಯಾಗಿವೆ ಮತ್ತು ಕಲಾ ರಸಿಕರಿಗೆ ಸೌಂದರ್ಯದ ಸ್ವರ್ಗವನ್ನು ಕಣ್ಮುಂದೆ ಸೂರೆಗೊಳಿಸುತ್ತದೆ. ಈ ದೇವಾಲಯಗಳ ಶಿಲ್ಪಗಳು ಸರಸ್ವತಿಯ ಪುತ್ರರೆ ಸರಿ. ಹೊಯ್ಸಳರ ಅರಸನಾದ ವಿಷ್ಣುವರ್ಧನನಿಂದ ಬೆಳೆದುಬಂದ ದೇವಾಲಯಗಳ ನಿರ್ಮಾಣ ಕಾರ್ಯವು ಇಮ್ಮಡಿ ಬಲ್ಲಾಳನ ಕಾಲದಲ್ಲಿ ಮೇರು ಶಿಖರ ತಲುಪಿತು. ಇಮ್ಮಡಿ ಬಲ್ಲಾಳನು ತನ್ನ ರಾಣಿ ಹಿರಿಯ ಕೇತಲದೇವಿಯ ಮಹದಾಸೆಯಂತೆ ದ್ವಾರ ಸಮುದ್ರದಲ್ಲಿ ಕೇದಾರೇಶ್ವರ ದೇವಾಲಯವನ್ನು ಕ್ರಿ.ಶ.1219 ರಲ್ಲಿ ಕಟ್ಟಿಸಿದನು.[4] ಕ್ರಿ.ಶ.1235 ರಲ್ಲಿ ವೀರಸೋಮೇಶ್ವರನು ತನ್ನ ತಾಯಿ ಕಾಳಲಾದೇವಿಯವರಿಗೆ ಪುಣ್ಯಪ್ರಾಪ್ತಿಯಾಗಲೆಂದು ಕಣ್ಣೂರಿನಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ನಿರ್ಮಿಸಿದನು.[5] ಕ್ರಿ.ಶ.1233 ರಲ್ಲಿ ಪುನಃ ವೀರ ಸೋಮೇಶ್ವರನು ಕಣ್ಣೂರಿನಲ್ಲಿಯೇ ಜಂಬುಕೇಶ್ವರ ದೇವಾಲಯದ ಸಂಕೀರ್ಣದಲ್ಲಿ ತನ್ನ ಸಂಬಂಧಿಕರ ನೆನಪಿಗಾಗಿ ವಲ್ಲಾಳೇಶ್ವರ, ಪದಮಲೇಶ್ವರ, ವೀರನರಸಿಂಗೇಶ್ವರ ಮತ್ತು ಸೋಮಲಿಂಗೇಶ್ವರ ಲಿಂಗಗಳನ್ನು ನಿರ್ಮಿಸಿದನು.[6]

ಚಿಕ್ಕ ಶಾಂತಲೆ ಮತ್ತು ಮಗಳು ಬೊಪ್ಪುಲೆಯರು ಸಾವನ್ನಪ್ಪಿದಾಗ ಇವರ ತಾಯಿ ಜಕ್ಕಿಯಬ್ಬೆಯು ಮಗಳು ಮತ್ತು ಮೊಮ್ಮಗಳ ಹೆಸರಿನಲ್ಲಿ ಶಾಂತಳೇಶ್ವರ ದೇವಾಲಯವನ್ನು ನಿರ್ಮಿಸಿದಳು.[7] ವಿಷ್ಣುವರ್ಧನನ ರಾಣಿ ಬಮ್ಮಲಾದೇವಿ ನಾಗಮಂಗಲದಲ್ಲಿ ಶಂಕರನಾರಾಯಣ ದೇವಾಲಯವನ್ನು ನಿರ್ಮಿಸಿದ್ದಾಳೆ.[8] ಹೊಯ್ಸಳ ನಾರಸಿಂಹನ ಪ್ರೇಯಸಿ ಮಹಾದೇವಿಯು ಸಾಮಾನ್ಯ ವರ್ಗದ ಮಹಿಳೆಯಾಗಿದ್ದು, ಈಕೆಯೂ ಸಹ ಚಟ್ಟೇಶ್ವರ ದೇವಾಲಯವನ್ನು ನಿರ್ಮಿಸಿದ್ದಾಳೆ.[9]

ಹೀಗೆ ಹೊಯ್ಸಳರ ಕಲಾ ಮತ್ತು ವಾಸ್ತುಶಿಲ್ಪವು ಕೇವಲ ರಾಜರಿಂದ ಮಾತ್ರವೇ ನಿರ್ಮಾಣವಾಗಿರದೆ ಅವುಗಳ ನಿರ್ಮಾಣ ಕಾರ್ಯದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ರಾಣಿಯರು, ಸಾಮಾನ್ಯ ವರ್ಗದ ಮಹಿಳೆಯರೂ ಕಾರಣರಾಗಿರುವುದನ್ನು ಇಲ್ಲಿ ಸ್ಮರಿಸಬೇಕಾಗುತ್ತದೆ. ಹೊಯ್ಸಳರ ಕಲೆಯು ಪ್ರಸ್ತುತ ದಿನಗಳಲ್ಲಿ ಅಂತರ್ ರಾಷ್ಟ್ರಿಯಮಟ್ಟವನ್ನು ತಲುಪಿರುವುದು ಹೆಮ್ಮೆಯ ವಿಷಯ. ಹಾಗಾಗಿ ಹೊಯ್ಸಳ ರಚನೆಯ ಅನೇಕ ದೇವಾಲಯಗಳ ನಾಡಿನಾದ್ಯಂತ ಹರಡಿದ್ದು ಇನ್ನಾದರೂ ಅವುಗಳನ್ನು ರಕ್ಷಿಸಬೇಕಾದ ಜವಾಬ್ದಾರಿ ಸರ್ಕಾರ ಮತ್ತು ನಮ್ಮೆಲ್ಲರ

---

[4] ಸಿಂದಗಿ ರಾಜಶೇಖರ್. (1988). *ಕರ್ನಾಟಕದ ವಾಸ್ತುಶಿಲ್ಪ ಚಿತ್ರಕಲೆ.*

[5] ಎ.ಕ.v ಬೇಲೂರು ಶ.ಸಂ.115, ಕ್ರಿ.ಶ.1235

[6] ಎ.ಕ.iii, ಪುಟ 8.

[7] ಎ.ಕ.v ಹಾಸನ, 89,ಯಲಗುಂದ, ಕ್ರಿ.ಶ.1136

[8] ಗೋಪಾಲ್, ಬಾ.ರಾ. (1993). *ಕರ್ನಾಟಕದ ಕಲೆಗಳು. ಸಂ–4,* ಕನ್ನಡ ಸಾಹಿತ್ಯ ಪರಿಷತ್ತು.

[9] ಎ.ಕ. v.ಬೇಲೂರು, ಶಾ.ಸಂ 193, ಹುಲಿಕೆರೆ, ಕ್ರಿ.ಶ. 1160

ಆದ್ಯ ಕರ್ತವ್ಯವಾಗಬೇಕು. "ನಮ್ಮ ನಾಡು ನಮ್ಮ ಹೆಮ್ಮೆ" ಎಂಬಂತೆ ಇಡೀ ವಿಶ್ವವೇ ಹೊಯ್ಸಳ ಕಲೆಯತ್ತ ತಿರುಗಿ ನೋಡುವಂತಾಗಿದೆ. ಇದಕ್ಕೆ ವಿಶ್ವ ಪಾರಂಪರಿಕ ತಾಣಗಳ ಪಟ್ಟಿಗೆ ಕನ್ನಡ ನಾಡಿನ 4 ನೇ ತಾಣವಾಗಿ ಮತ್ತು ಭಾರತದ 42 ನೇ ತಾಣವಾಗಿ 2023 ನೇ ಸಾಲಿನಲ್ಲಿ ಹೊಯ್ಸಳ ಶೈಲಿಯ ಬೇಲೂರು, ಹಳೆಬೀಡು ಮತ್ತು ಸೋಮನಾಥಪುರದ ದೇವಾಲಯಗಳು ಯುನೆಸ್ಕೊಗೆ ಸೇರ್ಪಡೆಯಾಗಿರುವುದು ಸಾಕ್ಷಿಯಾಗಿವೆ.

**ಆಕರ ಗ್ರಂಥಗಳು**


- ಚಿದಾನಂದ ಮೂರ್ತಿ, ಎಂ. (1965). *ಕನ್ನಡ ಶಾಸನಗಳು ಮತ್ತು ಸಾಂಸ್ಕೃತಿಕ ಅಧ್ಯಯನ.* ಪ್ರಸಾರಂಗ, ಮೈಸೂರು ವಿಶ್ವವಿದ್ಯಾಲಯ.
- ಗೋಪಾಲ್ ಬಾ.ರಾ. (1993). ಕರ್ನಾಟಕದ ಕಲೆಗಳು. ಕನ್ನಡ ಸಾಹಿತ್ಯ ಪರಿಷತ್ತು.
- ಕೃಷ್ಣಪ್ಪ ಆರ್ ಎನ್. (1986). *ಶ್ರೀ ಶಿವಗಂಗಾ ಬೆಟ್ಟದಲ್ಲಿ ಶಾಂತಲಾದೇವಿಯ ಅಮರತ್ವ.* ಶ್ರೀರುದ್ರಾರಾಧ್ಯ.
- ಶಿವಣ್ಣ, ಎಸ್.ಕೆ. (1996). *ಹೊಯ್ಸಳ ಕಾಲದ ಸಂಸ್ಕೃತಿ ಹೊಯ್ಸಳ ಸಂಪದ.* ಕನ್ನಡ ಸಾಹಿತ್ಯ ಪರಿಷತ್ತು.
- ವಸಂತಲಕ್ಷ್ಮಿ, ಕೆ. (2006). *ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು.* ಸುಮುಖ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 177-180
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಯುಗ ಸಂಪರ್ಕ ಸೇತುವಾಗಿ ಸುವರ್ಣಗಿರಿ

**ಡಾ. ಮಹೇಶ್ ಕುಮಾರ್ ಡಿ. ಹೆಚ್**
ಇತಿಹಾಸ ವಿಭಾಗ, ಕಲಾ ಕಾಲೇಜು, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು

**Abstract:**
*ತುಮಕೂರು ಜಿಲ್ಲೆಯ ಪ್ರತಿ ಗ್ರಾಮವು ತನ್ನದೇ ಆದ ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾಗಿ ಸಾಕಷ್ಟು ಸಾಮಗ್ರಿಗಳನ್ನು ತನ್ನಲ್ಲಿ ಒಳಗೊಂಡಿದೆ. ಇಲ್ಲಿನ ಆಕರಗಳು ನಾಡಿನ ಸಮಗ್ರ ಇತಿಹಾಸದ ರಚನೆಗೆ ಸಹಾಯಕವಾಗಿವೆ. ಈ ನಿಟ್ಟಿನಲ್ಲಿ ಇತಿಹಾಸ ಸಂಶೋಧಕನು ಹೊಸದನ್ನು ಅನ್ವೇಶಿಸುವ ಸಂದರ್ಭದಲ್ಲಿ ಸಾಂಪ್ರದಾಯಿಕ ಹಾಗು ಪುರಾತತ್ವ ಆಧಾರಗಳ ಜೊತೆಗೆ ಮೌಖಿಕ ಕಥನರೂಪದ ಆಧಾರಗಳನ್ನು ಭಿನ್ನವಾದ ದೃಷ್ಟಿಕೋನದಲ್ಲಿ ಅಧ್ಯಯನ ಮಾಡುವ ಅವಶ್ಯಕತೆ ಇದೆ. ಮೌಖಿಕ ಪರಂಪರೆಗೆ ಮನುಷ್ಯನ ಚಟುವಟಿಕೆಗಳನ್ನು ಜೀವಂತವಾಗಿಸುವ ಶಕ್ತಿಯಿದ್ದರೆ, ಪುರಾತತ್ವಕ್ಕೆ ಭೌತಿಕವಾಗಿ ಉಳಿದುಕೊಂಡು ಬಂದಿರುವ ಹೆಮ್ಮೆಯಿದೆ. ಆದ್ದರಿಂದ ಇತಿಹಾಸ ಮತ್ತು ಪುರಾತತ್ವ ವಿಷಯದಲ್ಲಿ ಅಧ್ಯಯನ ಮಾಡುವಾಗ ಐತಿಹ್ಯವನ್ನು ಇತಿಹಾಸದ ಕೊಂಡಿಯಾಗಿಸಿಕೊಂಡು ವಸ್ತುನಿಷ್ಠವಾದ ಅಧ್ಯಯನ ಮಾಡುವ ಅವಶ್ಯಕತೆಯಿದೆ.*

**Keywords:** *ಸುವರ್ಣಗಿರಿ, ಸಿದ್ದರಬೆಟ್ಟ, ಇತಿಹಾಸ ಮತ್ತು ಪುರಾತತ್ವ, ಪುರಾತತ್ವ ನೆಲೆಗಳು, ಮೌಖಿಕ ಕಥನ.*

**ಪೀಠಿಕೆ**

ತುಮಕೂರು ಜಿಲ್ಲೆಯು ಪ್ರಾಗೈತಿಹಾಸ ಕಾಲದಿಂದಲೂ ಮಾನವನ ವಾಸಕ್ಕೆ ಯೋಗ್ಯವಾದ ಪರಿಸರವನ್ನು ಹೊಂದಿದೆ. ಕರ್ನಾಟಕದ ಹಳೇಶಿಲಾಯುಗದ ಮಾನವನ ನೆಲೆಗಳ ಪಟ್ಟಿಯಲ್ಲಿ ಜಿಲ್ಲೆಯ ಕಿಬ್ಬನಹಳ್ಳಿ, ಬಾಣಸಂದ್ರ ಸಾಕ್ಷಿಯಾಗಿವೆ.[1] ತುಮಕೂರು ಜಿಲ್ಲಾ ವ್ಯಾಪ್ತಿಗೆ ಸೇರಿದ ಪ್ರತಿ ತಾಲೂಕು ಕೇಂದ್ರವು ತನ್ನದೇ ಆದ ಐತಿಹ್ಯ, ಕಾವ್ಯ, ಮೊದಲಾದ ಐತಿಹಾಸಿಕ ಅಂಶಗಳನ್ನು ಹೊಂದಿರುವುದನ್ನು ನಾವು ಕಾಣಬಹುದಾಗಿದೆ. ಜಿಲ್ಲೆಯ ಇತಿಹಾಸಕ್ಕೆ ಸಂಬಂಧಿಸಿದಂತೆ ಸಾಕಷ್ಟು ಕೃತಿಗಳು ರಚನೆಯಾಗಿದ್ದರೂ ಕೂಡ, ಅಗೆದಷ್ಟು ಇತಿಹಾಸದ ಆಕರಗಳು ದೊರೆಯುತ್ತಿರುವುದನ್ನು ನೋಡಿದಾಗ ಜಿಲ್ಲೆಯ ಇತಿಹಾಸ ಪ್ರಾಚೀನವಾಗುವುದರ ಜೊತೆಗೆ ಸ್ಪಷ್ಟತೆಗೆ ಸಾಕ್ಷಿಯಾಗಿದೆ.[2] ಇಂತಹ ಸಾಕ್ಷಿಗಳು ಜಿಲ್ಲೆಯ ಪ್ರತಿ ತಾಲೂಕಿನಲ್ಲೂ ಕಾಣಬಹುದಾಗಿದೆ. ಅದರಲ್ಲೂ ವಿಶೇಷವಾಗಿ ಕೊರಟಗೆರೆ ತಾಲೂಕಿನ ಸಿದ್ದರಬೆಟ್ಟವು ಪುರಾಣದ ಹಿನ್ನೆಲೆಯನ್ನು ಹೊಂದಿರುವುದರ ಜೊತೆಗೆ ಅಂದಿನ ಪ್ರಾಚೀನ ಮಾನವನು ಬದುಕಿ ಬಾಳಲು ಆತ ಬಳಸಿದ ವಸ್ತುಗಳು ಇಂದು ಐತಿಹಾಸಿಕ ಕುರುಹುಗಳಾಗಿ ಸಾಕ್ಷಿ ಹೇಳಲು ಮುಂದಾಗಿವೆ.

ಸುವರ್ಣಗಿರಿ ಅಥವಾ ಸಿದ್ದರಬೆಟ್ಟವು ತುಮಕೂರು ಜಿಲ್ಲಾ ಕೇಂದ್ರದಿಂದ ಸುಮಾರು 28 ಕಿ.ಮೀ. ಉತ್ತರಕ್ಕೆ ಚಲಿಸಿದರೆ ಕೊರಟಗೆರೆ ತಾಲೂಕು ಕೇಂದ್ರ ಸಿಗುತ್ತದೆ. ಇಲ್ಲಿಂದ ಸುಮಾರು 6 ಕಿ.ಮೀ. ದೂರದ ತುಂಬಾಡಿ ಗ್ರಾಮದಿಂದ ಎಡಭಾಗಕ್ಕೆ 8

***Please cite this article as:*** ಮಹೇಶ್ ಕುಮಾರ್ ಡಿ.ಹೆಚ್. (2024). ಯುಗ ಸಂಪರ್ಕ ಸೇತುವಾಗಿ ಸುವರ್ಣಗಿರಿ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(2), 177–180

ಕಿ.ಮೀ. ಕ್ರಮಿಸಿದರೆ ಚನ್ನರಾಯನದುರ್ಗ ಹೋಬಳಿ ವ್ಯಾಪ್ತಿಯಲ್ಲಿ ಬರುವ ಗ್ರಾಮವೇ ಸಿದ್ದರಬೆಟ್ಟ. ಅಥವ ಸುವರ್ಣಗಿರಿ. ಇದು ಹಲವು ಗುಹೆ, ಕಂದರ, ದಟ್ಟ ಅರಣ್ಯದಿಂದ ಕೂಡಿದ್ದು, ಸಮುದ್ರ ಮಟ್ಟದಿಂದ 2900 ಅಡಿ ಎತ್ತರದಲ್ಲಿದೆ. ಈ ಪ್ರದೇಶವು ಸಿದ್ಧಗಿರಿ, ಸುವರ್ಣಗಿರಿ, ಬೂದುಗವಿ, ರಸಸಿದ್ದರಬೆಟ್ಟ, ಬೆಳ್ಳಿಬೆಟ್ಟ, ಸಂಜೀವಿನಿಬೆಟ್ಟ, ಕುರ್‍ರಮ್ಮನಬೆಟ್ಟ, ಕುರ್‍ರಂಗನಬೆಟ್ಟ ಎಂಬ ಹಲವು ಹೆಸರುಗಳಿಂದ ಪ್ರಖ್ಯಾತಿ ಹೊಂದಿದೆ.[3] ಸುವರ್ಣಗಿರಿಯ ಪ್ರದೇಶವು ಸುವರ್ಣಮುಖಿ ನದಿಯ ಉಗಮ ಸ್ಥಾನವಾಗಿದ್ದು, ಅನೇಕ ಗಿಡ ಮೂಲಿಕೆಗಳ ತಾಣವಾಗಿ, ಸಿದ್ಧರ ತಪೋವನವಾಗಿ ಇಂದಿಗೂ ಉಳಿದಿದೆ. ಬಹುದಿನಗಳಿಂದಲೂ ಅನೇಕ ರೋಗರುಜಿನಗಳಿಂದ ದಣಿದ ರೋಗಿಗಳು ಈ ಗಿರಿಯಲ್ಲಿ ಸಿಗುವ ಗಿಡಮೂಲಿಕೆಯನ್ನು ಸೇವಿಸುವುದರ ಜೊತೆಗೆ, ಸುವರ್ಣಮುಖಿ ನದಿಯ ನೀರಿನಿಂದ ಮಿಂದು ಗುಣಮುಖರಾಗಿದ್ದಾರೆ. ನದಿಯ ಉಗಮಸ್ಥಾನದ ಎದುರಿಗೆ ಶ್ರೀ ಸಿದ್ದೇಶ್ವರರ ಗದ್ದುಗೆಯನ್ನು ಕಾಣಬಹುದಾಗಿದೆ.

ಸ್ಥಳ ಪುರಾಣದ ಪ್ರಕಾರ ಶ್ರೀರಾಮ–ರಾವಣರ ಯುದ್ಧದ ಸಂದರ್ಭದಲ್ಲಿ ಲಕ್ಷ್ಮಣ ಮೂರ್ಛೆ ಹೋದಾಗ ಹನುಮಂತ ಸಂಜೀವಿನಿ ಪರ್ವತವನ್ನೆತ್ತಿಕೊಂಡು ಬರುತ್ತಾನೆ, ಹಾಗೆ ಬರುವಾಗ ಸಂಜೀವಿನಿ ಪರ್ವತದ ತುಣುಕೊಂದು ಸಿದ್ದರಬೆಟ್ಟದ ಮೇಲೆ ಬಿದ್ದಿತೆಂಬ ಪ್ರತೀತಿ ಇದೆ. ಸ್ಥಳಪುರಾಣ ಇಲ್ಲಿಗೆ ಮುಗಿಯದೇ, ಇಂದ್ರನ ಮಗ ಜಯಂತ ಮುನಿಯೋರ್ವ ಶಾಪಕ್ಕೆ ಗುರಿಯಾಗಿ ಕಾಕಾಸುರನಾಗಿ ಸುವರ್ಣಗಿರಿಯಲ್ಲಿ ಅಲೆದಾಡುತ್ತಾನೆ. ಆತ ತನ್ನ ತಪ್ಪಿಗೆ ಕ್ಷಮೆ ಕೋರಿದಾಗ, ಮುನಿಗಳು ರಾಮನ ಪಾದ ಸ್ಪರ್ಶದಿಂದ ನಿನಗೆ ಮುಕ್ತಿ ದೊರಕಲಿ ಎನ್ನುತ್ತಾನೆ. ಅದರಂತೆ ರಾಮ ಸೀತೆ ಈ ಸ್ಥಳಕ್ಕೆ ಬಂದಾಗ ಸೀತೆಯನ್ನು ಕಾಕಾಸುರ ಕುಕ್ಕುತ್ತಾನೆ. ಆಗ ರಾಮ ಕೈಗೆ ಸಿಕ್ಕಿದ ಒಂದು ದರ್ಭೆಯನ್ನು ಮಂತ್ರಿಸಿ ಕಾಕಾಸುರನ ಮೇಲೆ ಪ್ರಯೋಗಿಸುತ್ತಾನೆ. ಅದರ ಹೊಡೆತಕ್ಕೆ ತಾಳಲಾರದೆ ಕಾಕಾಸುರ ಶ್ರೀರಾಮನ ಕಾಲಿಗೆ ಬೀಳುತ್ತಾನೆ. ಜಯಂತನಿಗೆ ಶಾಪ ವಿಮೋಚನೆಯಾಗುತ್ತದೆ. ಶ್ರೀರಾಮ ಆತನನ್ನು ಕ್ಷಮಿಸಿ ಈ ಪ್ರದೇಶದಲ್ಲಿ ಕಾಕಾಸುರನಿಗೆ ಸುಳಿಯದಂತೆ ಹೇಳುತ್ತಾನೆ. ಇದಕ್ಕೆ ಸಾಕ್ಷಿಯಾಗಿರುವಂತೆ ಇಂದಿಗೂ ಈ ಬೆಟ್ಟದಲ್ಲಿ ಕಾಗೆಗಳ ಸಂಚಾರವಿಲ್ಲ ಎಂಬ ಅಂಶವನ್ನು ಇಲ್ಲಿನ ಸ್ಥಳೀಕರು ನುಡಿಯುತ್ತಾರೆ.

ಇತಿಹಾಸದ ವಿದ್ಯಾರ್ಥಿಯಾಗಿ ಸುವರ್ಣಗಿರಿಯ ಸ್ಥಳಪುರಾಣ ಹಾಗು ಐತಿಹ್ಯಗಳನ್ನು ಗಮನಿಸಿದಾಗ ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಕಾಲಮಾನವು ಕ್ರಿ.ಪೂ. 3 ರಿಂದ 4ನೇ ಶತಮಾನವೆಂಬುದು ತಿಳಿದ ವಿಷಯ. ಇಂತಹ ಪ್ರಾಚೀನ ನೆಲೆಗಳನ್ನು ಸ್ಥಳಿಯರು ರಾಮಾಯಣ ಮಹಾಭಾರತದ ಸನ್ನಿವೇಶಗಳಿಗೆ ಹೋಲಿಸುವುದರ ಮೂಲಕ ಕಾಲಮಾನದ ಕುರುಹು ನೀಡಿದ್ದಾರೆಂದು ಭಾವಿಸಲಾಗಿದೆ. ಉದಾಹರಣೆಗೆ ಪಾಂಡವರು ವನವಾಸದ ಸಂದರ್ಭದಲ್ಲಿ ವಾಸ ಮಾಡಿದ ಸ್ಥಳವೆಂದು ಬೃಹತ್ ಶಿಲಾಯುಗದ ಸಮಾಧಿಗಳನ್ನು ಕುರಿತು ಹೇಳುತ್ತಾರೆ. ಇಂತಹ ನೆಲೆಗಳನ್ನು ಪಾಂಡವರ ಗುಡ್ಡ ಎಂಬುದಾಗಿ ಕರೆಯುತ್ತಾರೆ. ಅಂದರೆ ಈ ಸ್ಥಳದ ಕಾಲಮಾನವನ್ನು ನಿರ್ದಿಷ್ಟವಾಗಿ ಹೇಳಲಾಗದೆ ಅಂದಿನ ಸಮಕಾಲೀನ ಸನ್ನಿವೇಶಗಳನ್ನು ಐತಿಹ್ಯದ ರೂಪದಲ್ಲಿ ತಿಳಿಸುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಇದನ್ನು ಒಮ್ಮೆ ಗಮನಿಸಿದಾಗ ಸಿದ್ದರಬೆಟ್ಟವು ಸೂಕ್ಷ್ಮಶಿಲಾಯುಗ, ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ನೆಲೆಯಿಂದ ಹೊರತಾಗಿಲ್ಲವೆಂದು ಸ್ಪಷ್ಟಿಕರಿಸಲು ನಮಗೆ ಅನೇಕ ಕುರುಹುಗಳು ಕಾಣಸಿಗುತ್ತವೆ. ಇದಕ್ಕೆ ಸಂಬಂದಿಸಿದಂತೆ ಡಾ. ಕೆ ಶಿವತಾರಕ್ ರವರು ಕರ್ನಾಟಕದ ಪುರಾತತ್ವ ನೆಲೆಗಳು ಎಂಬ ಒತ್ತಿಗೆಯಲ್ಲಿ ದಾಖಲಿಸಿದ್ದಾರೆ.[4] ಅದರಂತೆ ನೀಳಚೆಕ್ಕೆ ಹೆರೆಚಕ್ಕೆ ಉಪಕರಣಗಳನ್ನು ಬೆಣಚು ಕಲ್ಲಿನಲ್ಲಿ ತಯಾರಿಸಲಾದ ಆಯುಧಗಳು ದೊರೆತಿವೆ. ಸುವರ್ಣಗವಿಯ ಒಳನಡೆದರೆ ಸುಮಾರು

ಎಂಟರಿಂದ ಒಂಭತ್ತು ಸಮಾಧಿಗಳ ಗುಂಪನ್ನು ಕಾಣಬಹುದಾಗಿದೆ. ಇದರ ಲಕ್ಷಣಗಳು ಬೃಹತ್ ಶಿಲಾಸಮಾಧಿಗೆ ಹೋಲಿಕೆಯಾಗಿದ್ದು ಪ್ರಾಚೀನ ಮಾನವನ ನೆಲೆಯಾಗಿತೆಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಸುವರ್ಣಗಿರಿಗೆ ಸಂಬಂಧಿಸಿದ ಮತ್ತೊಂದು ಐತಿಹ್ಯದ ಪ್ರಕಾರ ಹಿಂದೆ ವಾಸವಾಗಿದ್ದ ರಸಸಿದ್ದರು ಈ ಗಿರಿಯಲ್ಲಿ ಚಿನ್ನವನ್ನು ತಯಾರಿಸುತ್ತಿದ್ದರು ಆದ್ದರಿಂದ ಸುವರ್ಣಗಿರಿ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ.[5] ಇದನ್ನು ಗಮನಿಸಿದಾಗ ಈ ಭಾಗದಲ್ಲಿ ಅಂದಿನ ಮಾನವರು ಕಬ್ಬಿಣ ಅಥವ ಇತರೆ ಲೋಹವನ್ನು ಶುದ್ಧೀಕರಿಸುವ ಪಾಂಡಿತ್ಯವನ್ನು ಕರಗತ ಮಾಡಿಕೊಂಡಿದ್ದರು, ಹಾಗಾಗಿ ಈ ಬೆಟ್ಟವನ್ನು ರಸಸಿದ್ದರಬೆಟ್ಟ ಎಂದು ಕರೆಯುತ್ತಿದ್ದರು.[6] ಕಾಲಾಂತರದಲ್ಲಿ ಜನಪದರ ಬಾಯಲ್ಲಿ ಸಿದ್ದರಬೆಟ್ಟ ಎಂದು ರೂಢಿಗತವಾಗಿರಬಹುದು. ಈ ವಿಚಾರದ ಬೆನ್ನತಿದಾಗ ನಮಗೆ ದೊರೆತದ್ದು ಪ್ರಾಚೀನ ವಸತಿನೆಲೆ ಸೀಗೆಹಳ್ಳಿ. ಇಲ್ಲಿ ತಾಮ್ರ ಲೋಹವನ್ನು ತಯಾರಿಸುತ್ತಿದ್ದರು ಎಂಬುದಕ್ಕೆ ಅನೇಕ ಕುರುಹುಗಳಿವೆ. ಸಾಮಾನ್ಯವಾಗಿ ತಾಮ್ರಯುಗದ ನೆಲೆಗಳು ಹೆಚ್ಚಾಗಿ ದೊಡ್ಡನದಿ ಉಪನದಿಗಳ ದಂಡೆಯ ಮೇಲೆ ಅಥವಾ ಸಮೀಪದಲ್ಲಿರುತ್ತವೆ. ಸುತ್ತೆಲ್ಲ ಫಲವತ್ತಾದ ಭೂಮಿ ಮತ್ತು ದನಕರುಗಳಿಗೆ ಬೇಕಾದ ಹುಲ್ಲುಗಾವಲು ಪ್ರದೇಶವಾಗಿರುತ್ತದೆ. ಅಲ್ಲದೆ ಸುತ್ತಮುತ್ತಲೂ ಬೆಟ್ಟಗುಡ್ಡಗಳಿಂದ ಆವೃತವಾದ ವಿಶಾಲ ಬಯಲು ಪ್ರದೇಶವಾಗಿರುತ್ತದೆ. ಅದೇ ರೀತಿ ಸೀಗೆಹಳ್ಳಿ ನೆಲೆಯು ಸುವರ್ಣಮುಖಿ ನದಿಯ ಉಗಮಸ್ಥಾನದ ಸಮೀಪದಲ್ಲಿದೆ. ನೆಲೆಯ ಸುತ್ತಲೂ ದೊಡ್ಡಬರಕ, ಚಿಕ್ಕಬರಕ, ಕೊಡಗಲ್ಲು, ಚಿಕ್ಕಾವಳ್ಳಿ ಬೆಟ್ಟ, ದೊಡ್ಡಕೋಳಿ ಬೆಟ್ಟ, ವಾಲ್ಗದೋರ್‌ಬಂಡೆ, ಆರನ್ಕಟ್ಟೆ ಬಾರೆ, ಕರೆಕಲ್ಲುಗಳು ಎಂಬ ಸಣ್ಣ ಬೆಟ್ಟಗುಡ್ಡ ಪ್ರದೇಶಗಳ ಮಧ್ಯದ ಬಯಲು ಪ್ರದೇಶವಾಗಿದೆ.[6] ಅಲ್ಲಿಂದ ಸುಮಾರು ನೂರು ಮೀಟರ್ ದೂರದಲ್ಲಿ ನೆಲಕೋಟೆಯ ಕುರುಹುಗಳನ್ನ ಕಾಣಬಹುದಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸೀಗೇನಹಳ್ಳಿಯ ವಸತಿ ನೆಲೆಯಲ್ಲಿ ಸಿಕ್ಕ ಕೊಳವೆಗಳ ಅವಶೇಷಗಳನ್ನು ಗೆಳೆಯ ಕಾಂತರಾಜು ಗುಪ್ಪಟ್ಟ ನನ್ನೊಂದಿಗೆ ಹಂಚಿಕೊಂಡರು. ತಾಮ್ರವನ್ನು ಕರಗಿಸುವ ಕೇಂದ್ರವಾಗಿತ್ತೆಂದು ಹೇಳಲು ಅನೇಕ ಕುರುಹುಗಳಿವೆ. ಅವುಗಳಲ್ಲಿ ಮುಖ್ಯವಾಗಿ ತಾಮ್ರವನ್ನು ಕರಗಿಸಿ ಪ್ರತ್ಯೇಕಿಸುವ ಕೆಂಪು ಮತ್ತು ಬೂದು ಬಣ್ಣಗಳಿಂದ ಕೂಡಿದ ಕೊಳವೆಗಳಿವೆ. ಇವು ಸುಮಾರು ಒಂದುವರೆ ಅಡಿ ಉದ್ದ, ಒಂದು ಅಡಿ ಅಗಲ ವಿಸ್ತೀರ್ಣವನ್ನು ಒಳಗೊಂಡಿದೆ. ಅದೇ ರೀತಿಯಾಗಿ ಸಿಲಿಂಡರ್ ಆಕೃತಿಯನ್ನು ಒಳಗೊಂಡ ನಳಿಕೆಗಳು ದೊರೆತಿದ್ದು ಅವುಗಳನ್ನು ಒಡೆದರೆ ಒಳಭಾಗದಲ್ಲಿ ಮರಳು ಮಿಶ್ರಿತ ಬೂದಿಯನ್ನು ತುಂಬಲಾಗಿದ್ದು ಗಾಳಿಯಾಡದ ಹಾಗೆ ಮುಚ್ಚಲಾಗಿದೆ. ಇವು ತಾಮ್ರವನ್ನು ಕರಗಿಸಿ ಪ್ರತ್ಯೇಕಿಸಲು ಬಳಸುತ್ತಿದ್ದ ಉಪಕರಣಗಳಾಗಿವೆ. ಈ ನೆಲೆಯಲ್ಲಿ ಬೂದು ಬಣ್ಣದ ಮಡಿಕೆ ಚೂರುಗಳು ಹಾಗೂ ತಾಮ್ರದ ಕಿಟ್ಟದ ಅವಶೇಷಗಳನ್ನು ನಾವು ಕಾಣಬಹುದಾಗಿದೆ.[7] ದೊಡ್ಡ ಪ್ರಮಾಣದಲ್ಲಿ ಇದರ ಅವಶೇಷಗಳು ಕಂಡುಬಂದಿರುವುದರಿಂದ ಇದು ತಾಮ್ರ ಲೋಹದ ತಯಾರಿಕ ಕೇಂದ್ರವಾಗಿತ್ತೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಹೀಗೆ ಕೊರಟಗೆರೆ ತಾಲೂಕು ಪ್ರದೇಶವು ಒಂದೊಂದು ರೀತಿಯ ವಿಶೇಷತೆಯನ್ನು ಒಳಗೊಂಡಿರುವುದರ ಜೊತೆಗೆ ತಾಲೂಕಿನ ಪ್ರದೇಶದ ಸಂಸ್ಕೃತಿ ಆಚಾರ ವಿಚಾರಗಳ ಒಳಹೊಕ್ಕಾಗ ನಮ್ಮ ಆಚರಣೆ ಮತ್ತು ಇತಿಹಾಸಕ್ಕಿರುವ ಸಂಬಂಧವನ್ನು ಅರ್ಥಪೂರ್ಣವಾದ ತಿಳಿದು ಇತಿಹಾಸ ರಚನೆಗೆ ಶ್ರಮಿಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದು ತಿಳಿಸುವ ಆಶಯ ಈ ಲೇಖನದ ಆಶಯವಾಗಿದೆ.

**ಕೊನೆಟಿಪ್ಪಣಿಗಳು**

1. ಗೋಪಾಲ್ ಆರ್. (ಸಂ.). (2009). *ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*. ಪುರಾತತ್ವ ಸರ್ವೇಕ್ಷಣ ಇಲಾಖೆ. ಪುಟ. 31

2. ರವೀಂದ್ರ, ಕೆ. (2000). *ಕನ್ನಡ ದಾಖಲು ಸಾಹಿತ್ಯ.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಪುಟ. 25
3. ಮಹೇಶ್‌ಕುಮಾರ್ ಡಿ. ಹೆಚ್. *ಸ್ಟಡೀಸ್ ಇನ್ ಕರ್ನಾಟಕ ಇಸ್ಟರಿ ಅಂಡ್ ಕಲ್ಚರ್* ಪರಿಸರದ ಪುರಾತತ್ವೀಯ ಅವಲೋಕನ ಪುಟ.87
4. ಶಿವತಾರಕ್ ಕೆ.ಬಿ. (2001). *ಕರ್ನಾಟಕದ ಪುರಾತತ್ವ ನೆಲೆಗಳು.* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಪುಟ. 234.
5. ಚಿಕ್ಕವೀರಯ್ಯ, ವೀ. (1991). *ಸಿದ್ದರಬೆಟ್ಟ ಒಂದು ದರ್ಶನ.* ಪುಟ.45.
6. ನಾಗರಾಜು. ಒ. (2011). *ಕುರಂಗರಾಜ ವೈಭವ.* ಪುಟ. 5
7. ಮಹೇಶ್ ಕುಮಾರ್. ಡಿ. ಹೆಚ್. (2022). *ಕೊರಟಗೆರೆ ತಾಲೂಕಿನ ಇತಿಹಾಸ ಮತ್ತು ಪುರಾತತ್ವ.* ಅಪ್ರಕಟಿತ ಪ್ರಬಂಧ, ಬೆಂಗಳೂರು ವಿಶ್ವವಿದ್ಯಾನಿಲಯ. ಪುಟ. 56.
8. ವಕ್ತೃ: ಕಾಂತರಾಜು ಗುಪ್ಪಟ್ನರವರನ್ನು ಸಂದರ್ಶನ ಮಾಡಿ ವಿಷಯ ಸಂಗ್ರಹಿಸಲಾಯಿತು.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 2, May-June 2024, Pp. 181-190
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕುರಿಗಾಹಿ ಕುರುಬ ಸಮುದಾಯದ ಜೀವನ ಪದ್ಧತಿ: ಸಮಾಜಶಾಸ್ತ್ರೀಯ ವಿಶ್ಲೇಷಣೆ

**ಡಾ. ನಿಂಗಪ್ಪ**
ಅತಿಥಿ ಉಪನ್ಯಾಸಕರು, ಸಮಾಜಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿಂಧನೂರು.

***Abstract:***
*ಪ್ರಪಂಚದ ಮೊದಲ ವೃತ್ತಿ ಪಶುಪಾಲನೆಯಾಗಿದ್ದು, ನಾಗರಿಕತೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಅವಲೋಕಿಸಿದಾಗ ನದಿ ಬಯಲು ಫಲವತ್ತಾದ ಪ್ರದೇಶವಾಗಿರುವುದರಿಂದ ಮಾನವ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ನೀರಿನ ಮೂಲ ಪ್ರದೇಶಗಳನ್ನು ಹುಡುಕುತ್ತಾ, ಸಾಕುಪ್ರಾಣಿಗಳನ್ನು ಸಾಕಿ ಪಳಗಿಸುತ್ತಾ ಜೀವನಕ್ಕೆ ಮುನ್ನುಡಿಯಾಡಿಕೊಂಡು ಬಂದಿರುವುದು ತಿಳಿದುಬಂದಿದೆ. ಈ ಪಶುಪಾಲನೆಯಿಂದ ಮನುಷ್ಯನಿಗೆ ಕೃಷಿ, ಹಾಲು, ಉಣ್ಣೆ, ಚರ್ಮ, ಮಾಂಸ ಇತ್ಯಾದಿ ಅತ್ಯವಶ್ಯಕತೆಯನ್ನು ಮನಗಂಡ ಮಾನವ ಪಶುಪಾಲನೆಯನ್ನು ಪರಸ್ಪರ ಅವಲಂಬನೆ ಅಥವಾ ವೃತ್ತಿಯ ಮೇಲಿನ ಮನೋಭಾವನೆಯಿಂದ ಇರುವುದನ್ನು ಕಾಣಬಹುದು. ಕುರಿ ಇಲ್ಲದ ಹಳ್ಳಿ ಇಲ್ಲ, ನಮ್ಮ ದೇಶದಲ್ಲಿ ಹಸುವಿನಷ್ಟು ಕುರಿಯು ತುಂಬಾ ಉಪಕಾರಿ ಕ್ರಿಶ್ಚಿಯನ್ನರ ಬೈಬಲ್ ಗ್ರಂಥದಲ್ಲಿ ಕುರಿಯನ್ನು ಸಾಧು ಎನ್ನುತ್ತಾರೆ. ಸಾಧುತ್ವಕ್ಕೂ ಕುರಿಗೂ ತುಂಬಾ ನಂಟು. ಕುರಿ ತನ್ನನ್ನು ತಾನು ಕಾಪಾಡಿಕೊಳ್ಳದೆ ಮನುಷ್ಯನನ್ನು ಅವಲಂಬಿಸಿದೆ. ವ್ಯವಸಾಯ ಪ್ರಧಾನವಾದ ಪ್ರದೇಶಗಳಲ್ಲಿ ಜಾನುವಾರುಗಳು ಮತ್ತು ಕುರಿ ಸಾಕಾಣಿಕೆ ಇದ್ದೇ ಇರುತ್ತದೆ. ಮನುಷ್ಯನ ಆಸರೆ ಪಡೆದ ಪ್ರಾಣಿಗಳಲ್ಲಿ ಕುರಿ ಮೊದಲನೆಯದಾಗಿದೆ. ಮಾನವ ತನ್ನ ಆಹಾರ ಸಂಗ್ರಹಣೆ ಕಷ್ಟಸಾಧ್ಯವಾದಾಗ ತನ್ನ ಆಹಾರಕ್ಕಾಗಿ ಕುರಿ, ಆಡು, ಆಕಳು, ಕುದುರೆ ಇತ್ಯಾದಿ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸಿದ. ಪ್ರಸ್ತುತ ಲೇಖನದಲ್ಲಿ ಕುರಿಗಾಹಿ ಕುರುಬ ಸಮುದಾಯದ ಹಿನ್ನೆಲೆ ಮತ್ತು ಜೀವನ ಪದ್ಧತಿಯ ಬಗ್ಗೆ ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ವಿವರಿಸಲಾಗಿದೆ..*

***Keywords:*** *ಕುರಿಗಾಹಿ, ಕುರುಬ, ಮೂಲನಿವಾಸಿಗಳು, ಹಾಲಮತ.*

**ಪೀಠಿಕೆ**

ಕುರುಬರು ದಕ್ಷಿಣ ಭಾರತದ ಮೂಲನಿವಾಸಿಗಳು, ಅಲೆಮಾರಿ ಹಾಗೂ ನೆಲೆಗೊಂಡ ಬುಡಕಟ್ಟು ಸಮುದಾಯವಾಗಿ ಜೀವಿಸುತ್ತಿದ್ದು, ಪ್ರಾಚೀನ ಕಾಲದಲ್ಲಿ ಕೆಲವರು ಅರಣ್ಯ ಹಾಗೂ ಬೆಟ್ಟ ಪ್ರದೇಶಗಳಲ್ಲಿ ನೆಲೆಸಿ ಬಯಲು ಪ್ರದೇಶಕ್ಕೆ ವಲಸೆ ಬಂದವರು. ಕಾಲ ನಂತರ ಇತರೆ ಜನರಂತೆ ತಮ್ಮ ಜೀವನ ಕ್ರಮ ಹಾಗೂ ಉದ್ಯೋಗ ಬದಲಿಸಿಕೊಂಡು ಕೃಷಿಕರಾದರು. ಹಾಗೆಯೇ ಕೆಲವರು ಮೂಲ ವೃತ್ತಿಯಾದ ಕುರಿ ಸಾಕಾಣಿಕೆ ಹಾಗೂ ಕೃಷಿ ಎರಡನ್ನು ಅನುಸರಿಸಿಕೊಂಡು ಬಂದರು. ಕುರುಬ ಜನಾಂಗದವರು ಆರ್ಯ ಮೂಲದವರೆಂದು ಹೇಳಿದರೆ ಇನ್ನೂ ದ್ರಾವಿಡ ಮೂಲದವರೆಂದು ಹೇಳುತ್ತಾರೆ, ಮತ್ತೆ ಕೆಲವರು ದ್ರಾವಿಡ ಪೂರ್ವ ಗುಂಪಿಗೆ ಸೇರಿದವರೆಂದು ಹೇಳುತ್ತಾರೆ.

ದಕ್ಷಿಣ ಪ್ರದೇಶದ ಮೇಲುವಲಯಗಳಲ್ಲಿ ಪಶುಸಂಗೋಪನೆಯು ಒಂದು ಪ್ರಮುಖವಾದ

***Please cite this article as:*** ನಿಂಗಪ್ಪ. (2024). ಕುರಿಗಾಹಿ ಕುರುಬ ಸಮುದಾಯದ ಜೀವನ ಪದ್ಧತಿ: ಸಮಾಜಶಾಸ್ತ್ರೀಯ ವಿಶ್ಲೇಷಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(2), 181–190

ವೃತ್ತಿಯಾಗಿದೆ. ವಾರ್ಷಿಕವಾಗಿ 600 ರಿಂದ 800 ಮಿ.ಮೀ. ಮಳೆ ಬೀಳುವ ತೆಲಂಗಾಣದ ರಾಯಲ್ ಸೀಮೆ ಹಾಗೂ ಕರ್ನಾಟಕದ ಅರೆ ಒಣ ಪ್ರಸ್ತಭೂಮಿ ಪ್ರದೇಶವಾಗಿದೆ. ಮಹಾರಾಷ್ಟ್ರದ ಬೇಲನದಿ ದಂಡೆಯ ಮೇಲಿರುವ ಕರಣಿಯ ಲಖಮೇಶ್ವರ ಸೋಮನಾಥ ದೇಗುಲ ಕರ್ನಾಟಕದ ಲಕ್ಷ್ಮೇಶ್ವರದಿಂದ ವಲಸೆ ಹೋದ ಪಶುಪಾಲಕ ಕುರುಬರಿಂದ ನಿರ್ಮಾಣವಾಗಿದೆ ಎಂಬ ಅಭಿಪ್ರಾಯವಿದೆ. ಇದಕ್ಕೆ ಕಾಕಣಪುರ ಎಂದು ಕರೆಯಲಾಗುತ್ತದೆ. ಕೊಲ್ಲಾಪುರದ ಲಕ್ಷ್ಮಿನಿವಾಸ ಅರಮನೆಯಲ್ಲಿದ್ದ ಶಿಲಾಶಾಸನದ ಪ್ರಕಾರ ಕುರುಂ ಬೆಟ್ಟದ ಪ್ರದೇಶದಲ್ಲಿ ಕುರುಂಬರ ಪ್ರಾಬಲ್ಯವಿತ್ತು. ಕುರುಬ ಗೌಳಿಗಳು ಮರಾಠ ರಾಜ್ಯದ ಭದ್ರಬುನಾದಿ ಹಾಕಿದರು. 1999ರ ಮೇ ಜೂನ್ ತಿಂಗಳಲ್ಲಿ ಸಂಭವಿಸಿದ ಕಾರ್ಗಿಲ್ ಯುದ್ಧ ಸಂಭವಿಸುವುದಕ್ಕೂ ಮೊದಲು ಅಲ್ಲಿಗೆ ಪಾಕ್ ಸೇನೆ ಭಾರತ ಗಡಿಯೊಳಗೆ ನುಸುಳಿ ಇರುವುದನ್ನು ಪತ್ತೆ ಮಾಡಿ ಭಾರತೀಯ ಸೇನೆಗೆ ಸುದ್ದಿ ತಲುಪಿಸಿದವರು ಕುರಿಗಾಹಿಗಳು ಎಂಬುದು ಉಲ್ಲೇಖನೀಯ ಸಂಗತಿಯಾಗಿದೆ.

**ಕುರಿಗಾಹಿಯ ಪರಿಕಲ್ಪನೆ ಮತ್ತು ಪದನಿಷ್ಪತ್ತಿ**

ಕುರುಬ ಎಂಬ ಪದವನ್ನು "ಇಂಗ್ಲೀಷ್ ಭಾಷೆಯಲ್ಲಿ ಶಫರ್ಡ್ (Shepherd), ಜರ್ಮನ್ ಭಾಷೆಯಲ್ಲಿ ಸೆಫಿರಿಟ್ (Shiophirt) ಮತ್ತು ಈಜಿಪ್ಟ್ ಭಾಷೆಯಲ್ಲಿ ಪಾಸ್ (Shos, Hykoss, Shepherd King) ಎಂದು ಕರೆಯುತ್ತಾರೆ".

ಕುರು ಎಂಬುದಕ್ಕೆ ಎತ್ತರ ಎಂದು ಅರ್ಥ ಕೂ/ಕು ಎಂದರೆ ಪರ್ವತ ಎಂಬ ಅರ್ಥವಿದೆ ಇದರಿಂದ ಕುರುಂಬ/ಕುರುಬ ಎಂದರೆ ಪರ್ವತವಾಸಿ ಸೂಚಿಸುತ್ತದೆ. ಕುರು ಎನ್ನುವ ಶಬ್ದ 'ಪ' ಪದದೊಂದಿಗೆ ದ್ರಾವಿಡ ಭಾಷೆಯಲ್ಲಿ ಒಡೆಯ, ಅರಸ, ಕುರಿಯ ಯಜಮಾನ, ಗೋಪಾಲ ಎಂಬ ಅರ್ಥವಿದೆ. ಕಾಲಾಂತರದಲ್ಲಿ 'ಕುರುಪ' ಪದ ಬಳಕೆಗೆ ಬಂದಿತು. ಕುರು ಎಂದರೆ ಬೆಟ್ಟಗಳಲ್ಲಿ ವಾಸಿಸುವವರು, ಕುರುಪ ಪದದಿಂದ ಕುರುಬ ಎನ್ನುವ ಪದ ಉಗಮಗೊಂಡಿರಬೇಕು.

ದ್ರಾವಿಡ ಭಾಷೆಯಲ್ಲಿ 'ಕು' ಎಂದರೆ ಬೆಟ್ಟಗುಡ್ಡಗಳೆಂದು 'ಕೋ' ಎಂದರೆ ಕುರಿ ಎಂದು, ಕುರಿ ಎಂದರೆ ಕುರ್ಚಾ ಕುಳ್ಳ ಎಂಬ ಅರ್ಥವಿರುವುದು. ಪ್ರಾಚೀನ ತಮಿಳು ಕಾವ್ಯಗಳಲ್ಲಿ ಕುರುಬರನ್ನು ಮಲೆಯರು ಎಂದು ವರ್ಣಿಸಿದ್ದಾರೆ. ಕುರುಪ ಎಂಬ ಪದಕ್ಕೆ ತೆಲುಗಿನಲ್ಲಿ 'ಉಣ್ಣಿ ನೇಕಾರ' ಎಂಬ ಅರ್ಥವಿದೆ. ಸಂಸ್ಕೃತ ಸಾಹಿತ್ಯದಲ್ಲಿ ಕುರುದೇಶ ಎನ್ನುವ ಪದವಿದ್ದು ಕುರುವಂಶಕ್ಕೆ ಸೇರಿದ ಕೌರವರು ಕಾಲಾಂತರದಲ್ಲಿ ಕೌರವ > ಕುರುವ > ಕುರುಬ ಎಂಬುದಾಗಿ ಬದಲಾಗಿರಬಹುದು.

ಋಗ್ವೇದದಲ್ಲಿ 'ಯದು' ಮತ್ತು 'ತುರ್ವಶರು' ಎಂಬ ಪದಗಳು ಬರುವುದರಿಂದ ಇವುಗಳು ವ್ಯಕ್ತಿಗಳ ಹೆಸರುಗಳಾಗಿರದೆ ಜನಾಂಗದ ಹೆಸರಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ ಆಂಧ್ರದಲ್ಲಿ ಕುರಿಗಾಹಿಗಳಿಗೆ ಯಾದವಲು ಎಂದು ಕರೆಯುತ್ತಾರೆ. ಮೆಕ್ಕೆಂಜಿಯವರ (ಸಂಗ್ರಹಿಸಿದ ಹಸ್ತಪ್ರತಿಗಳಲ್ಲಿ ಸಂಖ್ಯೆ 14 ಸೆ.ಮೀ. 768) ಸ್ವಾರಸ್ಯಕರ ಅಂಶ ಸುಮಾರು 24 ಕೋಟೆಗಳ ಅಧಿಪತ್ಯದ ಉತ್ತಮ ನೀರಾವರಿ ವ್ಯವಸ್ಥೆ ಹಾಗೂ ನೌಕರಿ, ವ್ಯಾಪಾರವನ್ನು ಮಾಡಿ ಪ್ರಸಿದ್ಧನಾದ ರಾಜನೊಬ್ಬನ ಬಗ್ಗೆ ತಿಳಿದುಬರುತ್ತದೆ. ಆತನೇ ಕಾಮಾಂಡ ಕುರುಂಬ ಪ್ರಭು ಎಂದು ವರ್ಣಿಸಿದ್ದಾರೆ.

ಥರ್ಸ್ಟನ್ ಅವರು ಕುರುಬ ಜನಾಂಗದ ಆದಿಪುರುಷ ಉಂಡಾಲ ಪದ್ಮಣ್ಣ ಅಥವಾ ಪದ್ಮರಸ ವೀರಶೈವ ಪ್ರಭಾವಿತ ಪುರಾಣಗಳಲ್ಲಿ ರೇಣುಕಾರಾಧ್ಯ ಅಥವಾ ರೇವಣಸಿದ್ಧೇಶ್ವರನು ಕುರುಬರ ನಾಯಕನಾದ ಪದ್ಮರ ಸತ್ವಪದ್ಮಣ್ಣನನ್ನು ತಮ್ಮ ಅನುಯಾಯಿಯಾಗಿ ಮಾಡಿಕೊಂಡನು ಎಂದು ಹೇಳಲಾಗಿದೆ. ಎ.ಎಚ್. ಕೀನ್ ಅವರು ಆರ್ಯನ್ ಮಾತನಾಡುವ ಹಿಂದೂಗಳಿಗಿಂತಲೂ ಮೊದಲು ಬಂದವರು, ಅವರೇ ಡೆಕ್ಕನ್ನಿನ ನಿಜವಾದ ಮೂಲ ನಿವಾಸಿಗಳಿಗಿಂತ ಅವರಿಗಿಂತ ಮೊದಲು 'ಕಪ್ಪು

ಜನರು' ಬಹುಶಃ 'ನೆಗ್ರೈಟ್' ಮಾದರಿಯವರು ಬಂದಿದ್ದರು ಎಂದು ಅಭಿಪ್ರಾಯಪಟ್ಟಿದ್ದಾರೆ. ಆರ್. ಸಿಮನ್ ಅವರು ಆಸ್ಟ್ರೇಲಿಯಾದ ಪೂರ್ವಜರು ಈ ಖಂಡಕ್ಕೆ 'ವಲಸೆ' ಬಂದ ಸಮಯದಲ್ಲಿ ಅವರ ಹಿಂದಿನ ಪ್ರತಿನಿಧಿಗಳು ಸಂಸ್ಕೃತಿಯಲ್ಲಿ ಇರುವುದಕ್ಕಿಂತ ಒಂದು ಹಂತ ಕೆಳಗಡೆ ಇದ್ದರೂ, ಎಲ್ಲಿಂದ ಮತ್ತು ಯಾವ ರೀತಿಯಲ್ಲಿ ವಲಸೆ ಬಂದರು ಎನ್ನುವುದನ್ನು ನಿರ್ಣಯಿಸುವುದು ಕಠಿಣ ಎಂದಿದ್ದಾರೆ. ಸಿ.ಜೆ. ಬ್ರೌನ್ ಅವರು ದಕ್ಷಿಣ ಭಾರತದಲ್ಲಿ ಸಿಗುವ ಅತ್ಯಂತ ಪುರಾತನ ನಾಣ್ಯಗಳೆಂದರೆ 'ಕುರುಂಬ ನಾಣ್ಯ'ಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಉತ್ತರ ಹಿಂದೂಸ್ಥಾನದ ಬಿಹಾರದ ಗುಡ್ಡಗಾಡುಗಳಲ್ಲಿ ಮಾಲ್ತೋ (ಮಾಲರು>ಮಲವರು) ಕುಖರ್ (ಕುರುಬರು) ಎಂಬ ಹೆಸರಿನ ವನವಾಸಿಗಳಿದ್ದಾರೆ. ಇವರ ಭಾಷೆ ಕಂನುಡಿಗೆ (ಕನ್ನಡ) ಹತ್ತಿರದ್ದೆಂದು ತಜ್ಞರ ಅಭಿಪ್ರಾಯವಾಗಿದೆ. ಇರಾವತಿ ಕರ್ವೆ ಅವರು ಮಹಾರಾಷ್ಟ್ರದ ಧನಗಾರರು ಕಂನಾಡು (ಕರ್ನಾಟಕ) ಬಳಗದವರೆಂದು ಅಭಿಪ್ರಾಯಪಟ್ಟಿದ್ದಾರೆ.

1859ರ ಮುಂಬೈ ಕರ್ನಾಟಕ ಗೆಜೆಟಿಯರ್ ದಕ್ಷಿಣ ಮಹಾರಾಷ್ಟ್ರ ಸೇರಿ ಧಾರವಾಡ ಬೆಳಗಾವಿ ಬಿಜಾಪುರ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕುರುಬ ಜನಾಂಗದವರು ಬಹುಸಂಖ್ಯೆಯಲ್ಲಿದ್ದಾರೆ. ಇವರೇ ಈ ಭಾಗದ ಮೂಲ ನಿವಾಸಿಗಳು ಎಂದು ಉಲ್ಲೇಖಿಸಲಾಗಿದೆ. 1891ರ ಮೈಸೂರು ಜನಗಣತಿ ವರದಿಯ ಪ್ರಕಾರ ಕುರುಬ ಎಂಬ ಬುಡಕಟ್ಟಿನ ಹೆಸರನ್ನು ಆ ಸಮುದಾಯದ ಪ್ರಾಚೀನ ವೃತ್ತಿ ಮೂಲದಲ್ಲಿ ಕಾಣಬಹುದು. ಕುರಿಗಳನ್ನು ಸಾಕುವುದು ಬಹುಶಃ ಇತಿಹಾಸ ಪೂರ್ವದ ಮನುಷ್ಯ ಪಶುಪಾಲನೆಯ ಹಂತಕ್ಕೆ ತಲುಪಿದ್ದನ್ನು ಸೂಚಿಸುತ್ತದೆ. ಕುರುಬರು ಈ ನೆಲದ ಅತಿ ಪುರಾತನ ನಿವಾಸಿಗಳು ಎಂದು ಪರಿಗಣಿಸಲಾಗಿದೆ. ಫರ್ಡಿನೆಂಡ್ ಕಿಟ್ಟೆಲ್ ಅವರು ಕನ್ನಡ ಇಂಗ್ಲೀಷ್ ನಿಘಂಟಿನಲ್ಲಿ ಕುರುಬ ಎಂಬ ಪದವನ್ನು ಕುಟುಂಬ ಶಬ್ದದೊಂದಿಗೆ ಸಮೀಕರಿಸಿದ್ದಾರೆ.

ಶಂ.ಬಾ. ಜೋಶಿಯವರ ಪ್ರಕಾರ 'ಕುರು' ಎಂದರೆ ಮರಡಿಗಳಲ್ಲಿರುವ ಪ್ರಾಣಿಗಳನ್ನು, ತಾನಿದ್ದ ಬೆಟ್ಟಗಳಲ್ಲಿ ಅವುಗಳನ್ನು ಪ್ರತಿದಿನ ಬೇಟೆಯಾಡಿ ತರುವ ಬದಲು ಅವುಗಳನ್ನು ಸಾಕಿ ತಳಿ ಬೆಳೆಸುವ ಉಪಾಯ ಕಂಡುಕೊಂಡ ಯಶಸ್ಸು ಈ ಜನರದ್ದಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಗಸ್ಟುವ ಒಪ್ಪೆರ್ಟ್ ಅವರು ತಮ್ಮ 'Original Inhabitants of India' ಎಂಬ ಗ್ರಂಥದಲ್ಲಿ ಕುರುಬರು ಅತ್ಯಂತ ಪ್ರಾಚೀನ ಜನಾಂಗವೆಂದು, ಭಾರತದಲ್ಲಿ ನೆಲೆಸಿದ ತೀರ ಹಳೆಯ ನಿವಾಸಿಗಳಾಗಿದ್ದು, ಈ ನೆಲದ ಉದ್ಯೋಗ ಪ್ರಾಶಸ್ತ್ಯದಲ್ಲಿ ದ್ರಾವಿಡ ವಂಶಜರು ಸಂಪರ್ಕಕ್ಕೆ ಬಂದರವರೆಂದು ತಿಳಿಸಿದ್ದಾರೆ.

ರಿಸ್ಲೆ ಮತ್ತು ಹಟ್ಟನ್ ಅವರು ಕುರುಬರು ಆರ್ಯ ಮೂಲದವರು ಏಕೆ ಆತ್ಮೀಯರಾದರು ಎಂದು ತಿಳಿಯಲು ಎರಡು ಭಾಗ ಮಾಡಿ, ಮೊದಲ ವರ್ಗ ಕುರುಬರು ಉತ್ತರದಲ್ಲಿ, ಎರಡನೇ ವರ್ಗ ಕುರುಬರು ದಕ್ಷಿಣದಲ್ಲಿ ನೆಲೆಸಿದರು, ಆದರೆ ಒಂದೇ ಬಗೆಯ ಉದ್ಯೋಗ ಪಶುಪಾಲನೆ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಹೊಂದಿದ್ದಾರೆ. Indeed the Kurubas must be regarded as very old inhabitants of this land who can contest with their Dravidian Kinsman. The priority of occupation of the Indian soil. They (The Kurubas) are modern Representatives of the ancient Kurubas are Pallavas, who were once so powerful throughout South India. ವಂಶಶಾಸ್ತ್ರಜ್ಞರಾದ ಹ್ಯಾಂಡೋನ್ ಅವರು ಕುರುಬರು ನಿಸ್ಸಂದೇಹವಾಗಿ ದ್ರಾವಿಡರೆಂದು ಹೇಳುತ್ತಾರೆ. 'Cambridge History of India' ಕೃತಿಯ ಲೇಖಕರು ವೇದಕಾಲದ ಆಂಧ್ರರು ದ್ರಾವಿಡರೆಂದು

ಪ್ರತಿಪಾದಿಸಿದ್ದಾರೆ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರ ಪ್ರಕಾರ ಪಾಲಿ ಗ್ರಂಥದಲ್ಲಿ ಅಂಧ, ಅಂಧಕರು ಆಂಡಾರರು (ಕುರುಬ ಜನಾಂಗದ ಪಂಗಡ) ಒಂದೇ ಎಂದು ಇವರೇ ಆಂಧ್ರರೆಂದು ಪ್ರತಿಪಾದಿಸಿದ್ದಾರೆ.

ಶರತ್‌ಚಂದ್ರ ರಾಯ್ ಅವರು ಕುರಿಗಾಹಿಗಳಿಗೆ (ಕುರುಬ) ಓರಯನ್ ಎಂಬ ಮತ್ತೊಂದು ಹೆಸರಿದೆ ಎಂದು ಪ್ರತಿಪಾದಿಸಿದ್ದಾರೆ. ಟಾಲೆಮಿ ಅವರು ಕ್ರಿಸ್ತಶಕ ಎರಡನೇ ಶತಮಾನದಲ್ಲಿ 'ಆಂಡರ್' ಎಂದು ಉಲ್ಲೇಖಿಸಿರುವುದರಿಂದ ಕುರುಬ ಜನಾಂಗವು ತನ್ನದೇ ಆದ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಂಡಿತ್ತು ಎಂದು ಉಲ್ಲೇಖಿಸಿದ್ದಾರೆ. ಅದರಂತೆ ಈಗಲೂ ಸಹ ಕುರುಬರಲ್ಲಿ ಆಂಡೇಯರೆಂಬ ಒಂದು ಪಂಗಡವಿದೆ. ಡಬ್ಲ್ಯೂ.ಆರ್. ಕಿಂಗ್ ಅವರು 'ಅಬೊರಿಜಿನಲ್ ಟ್ರೈಬ್ಸ್ ಆಫ್ ನೀಲಗಿರಿ ಹಿಲ್ಸ್' ಕುರುಂಬರು – ಕುರಿಗಾಹಿ ಕುರುಬರಲ್ಲಿ ಮತ್ತೊಂದು ಜನಾಂಗವಾಗಿದೆ ಎಂದಿದ್ದಾರೆ. ಹೆಚ್.ಎ. ಸ್ಟುವರ್ಟ್ ಅವರು ಕುರುಬ ಎಂಬ ಹೆಸರು ಕನ್ನಡ ಮೂಲ 'ಕುರು' ಎಂಬ ಪದದಿಂದ ಉಗಮಗೊಂಡಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇಲಿಯಟ್ ಅವರು ಭಾರತದ ಪೂರ್ವಿ ಜನಸಂಖ್ಯೆಯ ಮಹತ್ವದ ಮೂಲಗಳಲ್ಲಿ ಓರ್ವ ಜನಾಂಗ (ಕುರುಬ)ವಾಗಿರುವುದೆಂದು ಅಭಿಪ್ರಾಯಪಟ್ಟಿದ್ದಾರೆ.

ಭಗವಾನ್ ಇಂದ್ರಜಿಯವರ ಪ್ರಕಾರ 'ಡಂಗರ್' ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಸಂಸ್ಕೃತ ಮೂಲದ ಡಂಗ ಎಂದರೆ 'ಬೆಟ್ಟ' ಎಂಬ ಶಬ್ದದ ಹಿನ್ನೆಲೆ ಹೊಂದಿದೆ ಎಂದು ನಂಬಿದ್ದಾರೆ. ಪ್ರಾಣಿ ಸಂಪತ್ತಿನ ಹಿನ್ನೆಲೆಯಲ್ಲಿ 'ಡಂಗರ್' ಎಂಬ ಶಬ್ದ ನಿಷ್ಪತ್ತಿ ಹೊಂದಿ 'ಗರ' ಎಂಬ ಪ್ರತ್ಯಯವು ಪ್ರಾಣಿಗಳನ್ನು ಮೇಯಿಸುವವರು/ಕುರುಬರು ಎಂಬುದನ್ನು ಸೂಚಿಸುತ್ತದೆ.

ಶಂ.ಬಾ. ಜೋಶಿ ಅವರು ಕರ್ನಾಟಕಕ್ಕೆ ವಲಸೆ ಬಂದ ಧನಗರರು ಮಹಾರಾಷ್ಟ್ರದ ಆದಿವಾಸಿಗಳಾದ ಡಂಗೆ ಕುರುಬ ಮೆಂಡಕೆ ಜಂಡ ಜನಾಂಗದ ಶಾಖೆಗೆ ಸೇರಿದ್ದಾರೆ. ಹಾಲು ಮಾರುತ್ತಿರುವುದರಿಂದ ಅವರನ್ನು ಕರ್ನಾಟಕದಲ್ಲಿ ಗೌಳಿಗರು ಎಂದು ಕರೆಯಲಾಗುತ್ತದೆ. ಈಗ ಕರ್ನಾಟಕದ ಧನಗರರನ್ನು ಗೌಳಿಗಳು ಎಂದು ಕರೆಯುತ್ತಾರೆ. ಕರೋಲಿಯ ಅರಸು ಮನೆತನ ಕುರುಬ ಸಮುದಾಯದೊಂದಿಗೆ ಸಂಬಂಧ ಹೊಂದಿತ್ತು. ಈ ಸಮುದಾಯದ ಮುದ್ದಿನ ಪ್ರಾಣಿಯಾದ ಕುರಿ ಇವರ ಸಾಮ್ರಾಜ್ಯದ ಲಾಂಛನವಾಗಿತ್ತು. ಗಾಲ್ವೇರದ ಗೌಸಿಪುರ ರೈಲು ನಿಲ್ದಾಣಕ್ಕೆ ಈ ಸಮುದಾಯದ ಹೆಸರಿಡಲಾಗಿದೆ. ಸಂಸ್ಕೃತ ಶಬ್ದ 'ಕಂದಕ' ಎಂದರೆ 'ಕಾಡು' ಅಥವಾ 'ಅರಣ್ಯದಲ್ಲಿ ವಾಸಿಸುವವರು' ಎಂದಿದ್ದಾರೆ.

***ಕುರುಬ ಹುಟ್ಟುವ ಮುನ್ನ***

***ಕುಲವಿಲ್ಲ ಗೋತ್ರವಿಲ್ಲ***

***ಕುರುಬ ಫಲ ಕಾಣೋ ಬಸವಣ್ಣ***

ಕುರಿಗಾಹಿ ಎಂದರೆ ಜ್ಞಾನಿ ಕುರಿಗಾಹಿ ಹುಟ್ಟುವ ಮುನ್ನ ಕುಲಗೋತ್ರಗಳು ಇರಲಿಲ್ಲ. ಆದ್ದರಿಂದ ಈ ಭೂಮಂಡಲಕ್ಕೆ ಮೊದಲಿಗ ಕುರಿಗಾಹಿ>ಕುರುಬ ಎಂದು ಹೆಸರಿಸಿದ್ದಾರೆ.

ಮಿಶ್ರ (1975) ಅವರು ಕಾಡು ಕುರುಬರು ಜೇನು ಕುರುಬರು ಬೆಟ್ಟ ಕುರುಬರು ಪಲ್ಲವರ ಸಂತತಿಯಾಗಿ ದಕ್ಷಿಣ ಭಾರತದ ಕೆಲವು ಭಾಗದಲ್ಲಿ ರಾಜ್ಯಭಾರ ಮಾಡುತ್ತಿದ್ದರು ಎಂದು ತಿಳಿಸಿದ್ದಾರೆ. ಮತ್ತು ಉತ್ತರ ಮಲಬಾರ್‌ನ್ನು ಕುರುಬರ ನಾಡು (ಕುರುಬ ಬಾಸ್ಪ) ಎಂಬುದಾಗಿ 1891ರ ಮದ್ರಾಸ್ ಜನಗಣತಿಯ ವರದಿಯಲ್ಲಿ ಪ್ರಕಟಿಸಲಾಗಿದೆ.

ಪ್ರಾಚೀನ ಕಾಲದಿಂದಲೂ ಪಶುಪಾಲನೆ ಅದರಲ್ಲಿಯೂ ಕುರಿಗಳ ಪಾಲನೆ ಪೋಷಣೆ, ಕಂಬಳಿ ನೇಯುವುದು ಮತ್ತು ಕೃಷಿ ಇವರ ಮೂಲವೃತ್ತಿಗಳಾಗಿವೆ. ಹೀಗಾಗಿ ಕುರಿ ಸಾಕಾಣಿಕೆ ಮಾಡುವುದರಿಂದ ಇವರಿಗೆ ಕುರುಬರೆಂದು ಹೆಸರು ಬಂದಿದೆ. ಇವರು ತಮ್ಮ ಜೀವನ ಹಾಗೂ ಹಸುಗಳ ಸಂರಕ್ಷಣೆಗಾಗಿ ಗುಡ್ಡ–ಬೆಟ್ಟಗಳ ಎತ್ತರವಾದ ಹುಲ್ಲಿನ ಪ್ರದೇಶದ ಜಲಾಶಯವುಳ್ಳ ಪ್ರದೇಶವನ್ನು ಅರಿಸಿಕೊಂಡು ಹೋಗಿ ಈ ಜನಾಂಗ

ಬದುಕಬೇಕಾಗುತ್ತದೆ. ಪ್ರಾಚೀನ ತಮಿಳು ಕಾವ್ಯಗಳಲ್ಲಿ ಕುರುಬರಿಗೆ ಮಲೆಯರು ಎಂದು ವರ್ಣಿಸಲಾಗಿದೆ. ಆದ್ದರಿಂದ ಕುರುಬರು ಎಂದರೆ ಎತ್ತರವಾದ ಪ್ರದೇಶಗಳಲ್ಲಿ ಬೆಟ್ಟ-ಗುಡ್ಡಗಳಲ್ಲಿ ವಾಸವಾಗಿದ್ದವರು ಎಂಬ ಅರ್ಥವಿದೆ. ಕುರುಬ ಸಮುದಾಯವನ್ನು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಹಲವಾರು ಭಾಷೆಗಳಲ್ಲಿ ಮತ್ತು ವಿವಿಧ ಹೆಸರುಗಳಿಂದ ಕರೆಯುವುದನ್ನು ಗುರುತಿಸಬಹುದು.

**ಕುರಿಗಾಹಿಗಳ ಪರ್ಯಾಯ ಹೆಸರುಗಳು**

ಕರ್ನಾಟಕದಲ್ಲಿ ಕುರುಬ, ಕುರುಬರ, ಕುರುಬನ್, ಕಾಡು ಕುರುಬ, ಜೇನು ಕುರುಬ, ಹಾಲುಮತ, ಗೊರವಗೊಂಡ, ಮಧ್ಯಗೊಂಡ, ರಾಜಗೊಂಡ, ಗೋಡಾರಿ, ಕುರ್ಮಿ, ಕುರ್ಮ; ಆಂಧ್ರಪ್ರದೇಶದಲ್ಲಿ ಕುರುಬ, ಹೆಗಡೆ, ಕುರುಮನ್, ಯಾದವುಲು, ಗೊಲ್ಲವಾಡು, ಕುರುಮಾ, ಕುರುಮವರು; ಅಸ್ಸಾಂನಲ್ಲಿ ಗೊಂಡ್ಲಾ ಧನವಾರ್; ಗುಜರಾತ್‌ನಲ್ಲಿ ಗಡಾಲಿಯ, ಕಡಲು, ಆರ್ಯ, ಧನಗರ್, ಅಹಿರರು, ಬಿಹಾರದಲ್ಲಿ ಗಡೇರಿಯ, ಧನಗರ್; ಹರಿಯಾಣದಲ್ಲಿ ಬಂಗಿಲ, ಬರೇಲಾ, ಬಿಯರ್, ಬಿಲ್ರಾ, ಹರನಾಟಲ್, ಕಲನಾಲಿಯ, ಹೋಡ್ನುವಾಲ್; ಹಿಮಾಚಲದಲ್ಲಿ ಗದೇರಿಯ; ಜಮ್ಮು ಕಾಶ್ಮೀರದಲ್ಲಿ ಗಡ್ಡಿ; ಕೇರಳದಲ್ಲಿ ರಾಜಗೊಂಡ, ಗೋಧಾರಿ, ಹೆಗಡೆ, ಮಧ್ಯಗೊಂಡ, ಗೊಂಡಿ, ಪುಲಯನ್; ಮಧ್ಯಪ್ರದೇಶದಲ್ಲಿ ಧನಗರ್, ಬಾಗ್ಲ, ಗಾಡ್ರಿ, ಹತಗಾರ, ಹತ್ಕಾರ್, ಪಾಲ್, ಕುರುಯಾರ್. ಮಹಾರಾಷ್ಟ್ರದಲ್ಲಿ ಧನಗಾರ್, ಕುರುಬರ, ಗಢಾರಿಯ; ಮೇಘಾಲಯದಲ್ಲಿ ಕುರುಮಾರ್, ರುದ್ರಪಾಳ್, ಗೊಂಡ; ಪಂಜಾಬ್‌ನಲ್ಲಿ ಗಡಾರಿಯ, ಗದಾರಾಯ; ರಾಜಸ್ಥಾನದಲ್ಲಿ ಗಡಾರಿಯ, ಚಾಂಡಾಲಿಯ, ಗಾವಳ, ಗೋಶಿ, ಕಬೀರಿಯಾ, ಗೊಂಡ, ಕುಮರ್; ತಮಿಳುನಾಡಿನಲ್ಲಿ ಕುರುಂಬ, ಗೊಂಡ, ಹೆಗಡ; ತ್ರಿಪುರದಲ್ಲಿ ಗೊಂಡ, ಕುರಾರಿಯರ್; ಉತ್ತರ ಪ್ರದೇಶದಲ್ಲಿ ಗಡ್ಡಿ, ಗಡಾರಿಯ, ಪಾಲ್; ಪಶ್ಚಿಮ ಬಂಗಾಳದಲ್ಲಿ ಗೊಂಡ, ಗುಡೇರಿ, ಪಾಲ್; ಚಂಡಿಗಡ್‌ದಲ್ಲಿ ಗಡಾರಿ, ಗಡ್ಡಿ; ದೆಹಲಿಯಲ್ಲಿ ಗಡ್ಡಿ, ಗಾರ್ರಿ, ಕುಮಾರ್; ಗೋವಾ ದಮನ್ ದ್ವೀಪದಲ್ಲಿ ಧನಗರ; ಪಾಂಡಿಚೇರಿಯಲ್ಲಿ ಕುರುವ, ಮಧ್ಯಗೊಂಡ್, ರಾಜಗೋಡ್; ಒರಿಸ್ಸಾದಲ್ಲಿ ಕುರುವನ, ಕುರುಂಬ, ಮಧ್ಯಗೊಂಡ ಮತ್ತು ರಾಜಮಹಲ್ ಗುಡ್ಡಗಳು ಛೋಟಾ ನಾಗಪುರದಲ್ಲಿ ಶೋ ನದಿ ತೀರ ಕುರ್ರೈ ಎಂದು ಕರೆಯುತ್ತಾರೆ.

**ಕುರುಬ ಜನಾಂಗದ ಒಳಭೇದಗಳು**

ಎಲ್ಲಾ ಸಮುದಾಯಗಳಲ್ಲಿ ಇರುವಂತೆ ಈ ಸಮುದಾಯದಲ್ಲಿಯೂ ಸಹ ಒಳಭೇದಗಳು ವೃತ್ತಿ ಆಚರಣೆಗೆ ಅನುಗುಣವಾಗಿ ನಾಮ ವಿಶೇಷಗಳು ಬೆಳೆದು ಬಂದಿರುವುದನ್ನು ಕಾಣಬಹುದು.

**ಹಾಲುಮತದವರು:** ಹಾಲನ್ನು ಮಾರಿ ಜೀವಿಸುವುದರಿಂದ ಕುರುಬರಿಗೆ ಹಾಲುಮತದವರು ಈ ಹೆಸರು ಬಂದಿದೆ ಎಂದು ಹಲವಾರು ಸಂಶೋಧನೆಗಳು ಹೇಳುತ್ತವೆ. ಪಾರ್ವತಿ ಪರಮೇಶ್ವರ ವಿವಾಹ ಕಾಲದಲ್ಲಿ ಕೆಳಗೆ ಸೀಳು ಬಿದ್ದ ದಾರಿಯ ಹಾಲಿನಲ್ಲಿ ಉತ್ಪತ್ತಿಯಾದುದರಿಂದ ಈ ಹೆಸರು ಬಂದಿರಬಹುದು, ಪಾರ್ವತಿ ಪರಮೇಶ್ವರರು ಭೂಲೋಕದಲ್ಲಿ ವನವಿಹಾರ ಮಾಡುತ್ತಿರಲು ಕಾರಣಾಂತರಗಳಿಂದ ಮಲೆ ಹಾಲು ಧಾರೆಯಾಗಿ ಶ್ರಮಿಸಿ ಭೂಮಿಯ ಮೇಲೆ ಬೀಳಲು ಆಗ ಗಿರಿಜೆ ಈ ಹಾಲು ವ್ಯರ್ಥವಾಗಬಾರದೆಂದು ಗಿರಿಜೇಶ್ವರನನ್ನು ಪ್ರಾರ್ಥಿಸಲು, ಈಶ್ವರನು ಹಾಲು ಬಿದ್ದ ಕಡೆ ತನ್ನ ಎರಡು ಹಸ್ತಗಳನ್ನು ಜಾತಿ ಎರಡು ಹಿಡಿ ಮಣ್ಣನ್ನು ತೆಗೆದುಕೊಂಡು ಎರಡು ಮುದ್ದೆಗಳನ್ನು ಮಾಡಿ ಅವುಗಳಿಗೆ ಕ್ರಮವಾಗಿ ಮುದ್ದಪ್ಪ ಮತ್ತು ಮುದ್ದವ ಎಂಬ ದಂಪತಿಗಳನ್ನು ಮಾಡಿದನು ಎಂಬ ಪೌರಾಣಿಕ ಕಥೆಗಳಿವೆ.

**ಕಂಬಳಿ ಕುರುಬರು**: ಕಂಬಳಿಗಳನ್ನು ನೇಯ್ದು ಜೀವನ ಮಾಡುವ ಹಾಗೂ ಕಂಬಳಿಯನ್ನು ಉಡುವ ಮತ್ತು ಹೊದಿಕೆಯನ್ನಾಗಿ ಉಪಯೋಗಿಸುವ, ಇವರನ್ನು ಕೆಲವು ಕಡೆ ಹಳೆ ಕುರುಬರು ಎಂದು

ಕರೆಯಲಾಗುತ್ತದೆ ಇವರು ಕೋಲಾರ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ.

**ಕನಕಯ್ಯ ಜಾತಿಯವರು:** ಪ್ರಸಿದ್ಧ ಹರಿದಾಸರು ಸಂತರು ವರ ಕವಿಯು ಆಗಿದ್ದ ಕನಕದಾಸರು ಹಾಲುಮತದಲ್ಲಿ ಅಂದರೆ ಕುರುಬ ಜಾತಿಯಲ್ಲಿ ಹುಟ್ಟಿದವರಾಗಿದ್ದಾರೆಂದು ಅವರ ಅಭಿಮಾನದ ಸೂಚಕವಾಗಿ ಕನ್ನಯ್ಯನ ಜಾತಿಯವರೆಂದು ಹೇಳಿಕೊಳ್ಳುವ ರೂಢಿ ಬಂದಿದೆ, ತಮಿಳುನಾಡಿನಲ್ಲಿಯೂ ಸಹ ಕನ್ನಯ್ಯ ಜಾತಿಯವರಿದ್ದಾರೆ.

**ಅಂಡೆ ಕುರುಬರು:** ಅಂಡೆ ಕುರುಬರು ಅಥವಾ ಅಂಡೆ ವಜೇರರು ಎನ್ನುವುದು ಕುರುಬರಲ್ಲೊಂದು ಕುಲ ಬೆಡಗು ಇವರು ಲಿಂಗವನ್ನು ಧಾರಣೆ ಮಾಡಿಕೊಂಡಿರುವವರು, ಕರ್ನಾಟಕದ ಹಲವಾರು ಸ್ಥಳಗಳಲ್ಲಿದ್ದಾರೆ. ಇವರು ಕುರಿಗಳನ್ನು ಕಾಯುವುದಿಲ್ಲ ಬದಲಿಗೆ ಕಂಬಳಿಯನ್ನು ನೇಯುವುದು ಇವರ ಪ್ರಮುಖ ಉದ್ಯೋಗ, ಕುರಿಗಳನ್ನು ಸಾಕುವ ಬದಲು ಆಕಳು ಎಮ್ಮೆಗಳನ್ನು ಸಾಕಿಕೊಂಡು ಅವುಗಳ ಹಾಲು, ಮೊಸರು ತುಪ್ಪ ಮೊದಲಾದವನ್ನು ಮಾರಿ ಜೀವನ ಸಾಗಿಸುತ್ತಾರೆ. ಬಿದರಿನ ಹಂಡೆಗಳಲ್ಲಿ ಹಾಲು ಮೊಸರು ಮುಂತಾದವುಗಳನ್ನು ಉಪಯೋಗಿಸುವುದರಿಂದ ಇವರಿಗೆ ಅಂಡೆ ಕುರುಬರೆಂದು ಹೆಸರು ಬಂದಿದೆ, ಇವರು ದೈವಾಂಶ ಸಂಭೂತರಾಗಿರುವುದರಿಂದ ಲಿಂಗಧಾರಣೆ ಮಾಡಿಕೊಳ್ಳದೆಯೇ ತಮ್ಮ ಶೈವ ಧರ್ಮವನ್ನು ಪಾಲಿಸಿಕೊಂಡು ಬಂದಿದ್ದಾರೆ.

**ಒಡೆಯರು:** ಇವರು ಸಾಮಂತ ಕುರುಬರ ಬುಡಕಟ್ಟಿಗೆ ಸೇರಿದವರಾಗಿದ್ದಾರೆ. ಕುರುಬರ ಕುಲಗುರುವಾದ ರೇವಣಸಿದ್ಧರ ಅನುಯಾಯಿಗಳು ಇವರೇ ಕುರುಬರಿಗೆ ಕುಲಗುರುಗಳಾಗಿದ್ದಾರೆ. ಇವರು ಲಿಂಗಧಾರಣೆಯನ್ನು ಮಾಡಿಕೊಂಡು ಕುರುಬರ ಮನೆಗಳಲ್ಲಿ ಭೋಜನಾಧಿಗಳನ್ನು ಮಾಡುವರು. ಇವರು ಕುರುಬರ ಜೊತೆ ವೈವಾಹಿಕ ಸಂಬಂಧವನ್ನು ಹೊಂದಿದ್ದಾರೆ. ಮದುವೆ ಸಮಾರಂಭಗಳಲ್ಲಿ ಪೌರೋಹಿತ್ಯ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಶ್ರೀ ರೇವಣಸಿದ್ಧರೂ ಬ್ರಾಹ್ಮಣ ಪುರೋಹಿತಶಾಹಿತ್ವವನ್ನು ತಡೆಗಟ್ಟಲು ಮಾಡಿದ ದಿಟ್ಟ ಕ್ರಮವಾಗಿದೆ.

**ಗೊರವಯ್ಯಗಳು:** ಗೊರವಯ್ಯಗಳು ಕುರುಬರಲ್ಲಿ ಗೊರವಯ್ಯಗಳೆಂಬ ಮೈಲಾರಲಿಂಗನ ಭಕ್ತರಿರುವರು, ಮರಾಠಿ ಭಾಷೆಯಲ್ಲಿ ಒಗ್ಗಯ್ಯಗಳೆಂದು ಕರೆಯುತ್ತಾರೆ. ಇವರು ಕೆಲ ಕಾಲ ಭಿಕ್ಷೆಯಿಂದಲೂ ವ್ಯವಸಾಯದಿಂದಲೂ ಮುಂತಾದ ವೃತ್ತಿಗಳಿಂದ ಜೀವನ ನಡೆಸುವವರು. ಭಿಕ್ಷೆಗೆ ಹೋಗುವಾಗ ಕವಡೆಗಳನ್ನು ಒರಸೆವರೆಗೆ ಕಂಬಳಿಯ ನಿಲುವಂಗಿಯನ್ನು ಹಾಕಿಕೊಂಡು ತಲೆಗೆ ಕರಡಿಯ ಚರ್ಮದ ಟೋಪಿಯನ್ನು ಹಣೆಗೆ ವಿಭೂತಿ ಗಂಧ ಭಂಡಾರವನ್ನು ಧರಿಸಿಕೊಂಡು ಕೈಯಲ್ಲಿ ಡಮರುಗವನ್ನು ಬಾರಿಸುತ್ತ ಈಶ್ವರನ ವೀರಭದ್ರನ ದಂಡಕಗಳನ್ನು ಹೇಳುತ್ತಾ ಭಿಕ್ಷೆ ಬೇಡುವವರು ಇವರನ್ನು ಸಿದ್ಧ ಸಂಪ್ರದಾಯದವರೆಂದು ಕರೆಯುತ್ತಾರೆ.

**ದಾಸಯ್ಯಗಳು:** ಕುರುಬರಲ್ಲಿ ಸಂದರ್ಭ ಅನುಸಾರವಾಗಿ ಭಿಕ್ಷೆಯನ್ನು ಬೇಡುವ ದಾಸಯ್ಯಗಳೆಂಬ ಪಂಗಡ ಇರುವುದು ಇವರು ವಿಷ್ಣು ಭಕ್ತರು ಹಣೆಗೆ ನಾಮ ಹಚ್ಚಿಕೊಂಡು ಕೊರಳಿಗೆ ತುಳಿಸಿ ಮಣಿಮಾಲೆಯನ್ನು ಹಾಕಿಕೊಂಡು ಭಿಕ್ಷೆಗೆ ಹೋಗುವಾಗ ಕಂಕುಳಲ್ಲಿ ಭವನ ರಾಶಿ ಕೈಯಲ್ಲಿ ತೆಗೆದುಕೊಂಡು ಬಾಯಲ್ಲಿ ವಿಷ್ಣು ಸ್ತೋತ್ರವನ್ನು ಹೇಳುತ್ತಾ ಕೈಯಲ್ಲಿ ಜಾಗಟಿಯನ್ನು ಬಾರಿಸುತ್ತಾ ಬಾಯಿಂದ ಶಂಖವನ್ನು ಉದುವರು ಇವರ ಆರಾಧ್ಯ ದೈವ ವಿಷ್ಣುವೆಂದು ನಂಬುತ್ತಾರೆ.

**ವಾರದ ಕುರುಬರು:** ಮೈಸೂರು ಮಂಡ್ಯ ಪ್ರದೇಶಗಳಲ್ಲಿ ಸೋಮವಾರ, ಗುರುವಾರ, ಆದಿತ್ಯವಾರ ಎಂಬ ಮೂರು ಬಗೆಯ ಕುರುಬರಿದ್ದಾರೆ. ಆಯಾ ದಿನದಂದು ನೇಮ ನಿಷ್ಠೆಯಿಂದ ಮತ ಪದ್ಧತಿಯ ಪ್ರಕಾರ ಭಕ್ತಿಯಿಂದ

ಆರಾಧಿಸುವವರು ಇವರನ್ನು ಹರಿಹರ ಪರಂಪರೆಯವರ ಎಂದು ಕರೆಯುತ್ತಾರೆ.

**ಹೆಗ್ಗಡೆಗಳು:** ಕರ್ನಾಟಕದ ಕುರುಬರೆಲ್ಲ ಗೌಡ ಹೆಗ್ಗಡೆ ಎಂಬ ಗೌರವ ಶಬ್ದಗಳು ಅವರವರ ಹೆಸರಿನ ಅಂತ್ಯದಲ್ಲಿ ಬರುತ್ತವೆ. ಉದಾಹರಣೆಗೆ ದುರುಗನಗೌಡ, ಅಯ್ಯನಗೌಡ, ಯಲ್ಲನಗೌಡ, ಹೆಂಗಸರಿಗೆ ಹೆಗ್ಗಡತಿ, ಗೌಡಶ್ಯಾನಿ ಪದಗಳನ್ನು ಬಳಸುತ್ತಾರೆ.

**ಮತಾಚಾರ:** ಕುರುಬರಲ್ಲಿ ಶೈವರು ವೈಷ್ಣವರು ಇದ್ದಾರೆ ವಿಷ್ಣುವಿನ ಆರಾಧಕರಿಗಿಂತಲೂ ಶಿವನ ಆರಾಧಕರು ಅಧಿಕವಾಗಿದ್ದಾರೆ. ವಿಷ್ಣು ಈಶ್ವರ ಎಂಬ ಭೇದ ಮಾಡದೆ ಎರಡು ದೇವರುಗಳನ್ನು ಸಮನಾಗಿ ಆರಾಧಿಸುತ್ತಾರೆ.

**ದಳವಾಯಿಗಳು :** ಕುರುಬ ಜನಾಂಗದಲ್ಲಿ ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಒಂದು ದೈವಿಕ ಆಚರಣೆ. ಕುರುಬ ಜನಾಂಗ ಜೀವಂತ ದೈವ ಬುಡಕಟ್ಟಿನ ದೇವಗಣ ಮತ್ತು ಭಕ್ತ ಸಮೂಹವನ್ನು ಧಾರ್ಮಿಕ ಪರಂಪರೆಯಲ್ಲಿ ಮುನ್ನಡೆಸುವ ಧಾರ್ಮಿಕ ನಾಯಕ. ಬೀರದೇವರು ಮತ್ತು ಭಕ್ತರ ನಡುವಿನ ಮೌನ ಮುರಿದು ಭಕ್ತರಿಗೆ **'ಕುರುಹು'** ಎಂಬ ಭಾಷೆಯಾದವನು ಎಂದು ತಿಳಿಸಲಾಗಿದೆ.

**ಕುರಿಗಾಹಿಯ ಹುಟ್ಟಿನ ಬಗೆಗಿನ ಪುರಾಣ ಮತ್ತು ಐತಿಹಾಸಿಕ ಹಿನ್ನೆಲೆ**

ಮೂಲದಲ್ಲಿ ಕುರುಬರು ಕಾಪುಗಳಾಗಿದ್ದರು. ಅವರ ಪೂರ್ವಿಕರು ಪೂರ್ವಘಟ್ಟದಲ್ಲಿ ಸೌದೆ ಮಾರುತ್ತಾ ಜೀವಿಸುತ್ತಿದ್ದ ಮಸಿರೆಡ್ಡಿ ಮತ್ತು ನೀಲಮ್ಮರಾಗಿದ್ದು, ಅವರಿಗೆ ಆರು ಜನ ಗಂಡು ಮಕ್ಕಳಿದ್ದರೂ ಅವರ ಬಡತನ ಕಂಡು ಮನ ಕರಗಿದ ಶಿವ ಜಂಗಮ ವೇಷದಲ್ಲಿ ಅವರ ಮನೆಗೆ ಭಿಕ್ಷಕ್ಕೆ ಬಂದು ನೀಲಮ್ಮಳಿಗೆ ಪವಿತ್ರ ಭಸ್ಮವನ್ನು ನೀಡಿ ಮತ್ತೊಬ್ಬ ಮಗನ ಜನನದ ಮೂಲಕ ನಿಮಗೆ ಸಂಪತ್ತು ಸಮೃದ್ಧಿ ಬರುತ್ತದೆಂದು ಭರವಸೆ ನೀಡಿದ. ಆಗ ಆ ಮಗನನ್ನು ಉಂಡಾಲ ಪದ್ಮಣ್ಣ ಎಂದು ಕರೆಯಲಾಯಿತು. ಕುಟುಂಬದ ಮೂಲ ಕಸುಬು ವ್ಯವಸಾಯವಾಗಿದ್ದು, ಶ್ರೀಮಂತಿಕೆಯಿಂದ ಕೂಡಿತ್ತು. ಆದರೆ ಅವನ ಇತರೆ ಆರು ಸಹೋದರರಂತೆ ಉಂಡಾಲ ಪದ್ಮಣ್ಣ ಹೊಲದಲ್ಲಿ ಕೆಲಸ ಮಾಡಲು ಹೊರಗೆ ಹೋಗುತ್ತಿರಲಿಲ್ಲ. ಅವನನ್ನು ನಿವಾರಿಸಲು ತಂತ್ರ ಹೂಡಿದ ಸಹೋದರರು ಹುತ್ತ ಒಂದನ್ನು ಆವರಿಸಿಕೊಂಡಿರುವ ಪೊದೆಗೆ ಬೆಂಕಿ ಇಡುವಂತೆ ಹೇಳಿದರು. ಆಗ ಹುತ್ತದೊಳಗಿರುವ ಹಾವು ಅವನನ್ನು ಕೊಲ್ಲುತ್ತದೆ ಎಂದು ಆಶಿಸಿದರು. ಆದರೆ ಹಾವಿನ ಬದಲಾಗಿ ಅಸಂಖ್ಯಾತವಾದ ಕುರಿಗಳ ದೊಡ್ಡ ಗುಂಪು ಕಾಣಿಸಿಕೊಂಡಿತು. ಅಪರಿಚಿತವಾದ ಈ ಕಪ್ಪು ಪ್ರಾಣಿಗಳನ್ನು ಕಂಡು ಹೆದರಿದ ಉಂಡಾಲ ಪದ್ಮಣ್ಣ ಕಾಲಿಗೆ ಬುದ್ಧಿ ಹೇಳಿದ ಆದರೆ ಶಿವ ಪ್ರತ್ಯಕ್ಷನಾಗಿ ಅವನ ಜೀವನೋಪಾಯಕ್ಕಾಗಿ ಅವುಗಳನ್ನು ಸೃಷ್ಟಿಸಲಾಗಿದೆ ಎಂದು ಹೇಳಿ, ಅವುಗಳನ್ನು ಪೋಷಿಸಿ ಅವುಗಳ ಹಾಲಿನಿಂದ ಇವನು ಜೀವನ ನೀಗಿಸಿಕೊಂಡು ಇರಲು ಹೇಳಿದ. ಇವನು ಹಾಲು ಕರೆಯುವುದು ಮತ್ತು ಅದನ್ನು ಕಾಯಿಸುವುದು ಹೇಗೆ ಎಂಬುದನ್ನು ಹೇಳಿಕೊಟ್ಟ. ದೂರದಲ್ಲಿ ರಾಕ್ಷಸನೊಬ್ಬನ ಆಕ್ರಮಣದಲ್ಲಿದ್ದ ಪಟ್ಟಣದಿಂದ ಬೆಂಕಿಯನ್ನು ತರಲು ಕಳಿಸಿದ. ಅಲ್ಲಿ ದೈತ್ಯರು ಬ್ರಾಹ್ಮಣ ಹುಡುಗಿಯೊಬ್ಬಳನ್ನು ಬಂಧನದಲ್ಲಿಟ್ಟಿದ್ದರು. ಅವಳಿಗೆ ಉಂಡಾಲ ಪದ್ಮಣ್ಣನ ಬಗ್ಗೆ ಪ್ರೇಮ ಉಂಟಾಯಿತು. ಆಳವಾದ ಗುಂಡಿ ತೆಗೆದು ಅವುಗಳ ಮೇಲೆ ಅವರ ಹಾಸಿಗೆಯನ್ನು ಹಾಸಿ ರಾಕ್ಷಸರನ್ನು ನಾಶ ಮಾಡುವ ಮೂಲಕ ಅವರು ಅಲ್ಲಿಂದ ತಪ್ಪಿಸಿಕೊಂಡರು. ತನ್ನ ಪ್ರೇಮಿಯನ್ನು ಕಾಪಾಡಲಿಕ್ಕಾಗಿ ಆ ಯುವತಿಯು ಹಲ್ಲಿಯಾಗಿ ಮಾರ್ಪಾಡುಗೊಂಡಳು. ನಂತರ ಅವನ ಜೊತೆ ಹೋದಳು. ಉಂಡಾಲ ಪದ್ಮಣ್ಣನ ತನ್ನ ಸ್ವಂತ ಜಾತಿಯ ಹುಡುಗಿ ಒಬ್ಬಳನ್ನು ಮದುವೆಯಾಗಿ ಅವಳಿಗೆ ಮತ್ತು ಈ ಬ್ರಾಹ್ಮಣ ಹುಡುಗಿಗೆ ಇಬ್ಬರು ಗಂಡು ಮಕ್ಕಳಾದರೂ ಈ ಇಬ್ಬರ ಮಕ್ಕಳ ಮದುವೆ ಸಮಯದಲ್ಲಿ ಸ್ವಜಾತಿ ಹೆಂಡತಿಯ ಮಗನಿಗೆ ಒಂದು

ಹತ್ತಿ ಕಂಕಣ ದಾರವನ್ನು ಕಟ್ಟಲಾಯಿತು ಹಾಗೂ ಬ್ರಾಹ್ಮಣ ಹುಡುಗಿಯ ಮಗನ ಕೈಗೆ ಉಣ್ಣಿದಾರದ ಕಂಕಣ ಕಟ್ಟಲಾಯಿತು. ಮೊದಲನೆಯ ಮಗನ ಸಂತಾನವನ್ನು ಹತ್ತಿ ಕಂಕಣದವರು ಎಂದು, ಎರಡನೆಯವಳ ಮಗನ ಸಂತಾನವನ್ನು ಉಣ್ಣೆ ಕಂಕಣದವರು ಎಂದು ಕರೆಯಲಾಯಿತು. ಎರಡನೆಯವರು ಮಿಶ್ರ ಮೂಲದವರಾಗಿದ್ದರಿಂದ ಅವರನ್ನು ಕೆಳ ದರ್ಜೆಯವರೆಂದು ಪರಿಗಣಿಸಲಾಯಿತು, ಮೂರನೆಯ ಉಪ ವಿಭಾಗವನ್ನು ಹಾಲು ಕರೆಯುವಾಗ ಬಳಸುವ ಚಿಕ್ಕ ಪಾತ್ರೆಯೊಂದರ (ಅಂಡೇ) ಹೆಸರಿನಲ್ಲಿ ಕರೆಯಲಾಯಿತು. ಕುರುಬರು ಹಾಲುಮತದವರು ಎಂದು ಪರಿಚಿತರಾಗಿದ್ದಾರೆ. ತಮ್ಮನ್ನು ರೇವಣಸಿದ್ಧೇಶ್ವರನು ಹಾಲಿನಿಂದ ಸೃಷ್ಟಿ ಮಾಡಿದ ಅದರಿಂದ ಹಾಲಿನ ಜಾತಿ ಎಂಬುದು ಬಂದಿದೆ ಎಂದು ಅವರು ನಂಬುತ್ತಾರೆ.

ಎಚ್.ಎ. ಸ್ಟುವರ್ಡ್ ಬರೆಯುವಂತೆ ಕುರುಬರು ಮತ್ತೆ ಬಣ ಅಥವಾ ಗುಂಪುಗಳಾಗಿ ಉಪವಿಭಾಗಿತರಾಗಿದ್ದಾರೆ. ಪ್ರತಿಯೊಂದಕ್ಕೂ ಒಬ್ಬ ಮುಖ್ಯಸ್ಥ ಅಥವಾ ಗುರುವಿದ್ದು ಆತನನ್ನು ಗೌಡ ಎಂದು ಕರೆಯುತ್ತಾರೆ. ಗೌಡನ ಹೆಸರೇ ಆ ಬಣಕ್ಕೆ ಇರುತ್ತದೆ. ಈ ಬಣಗಳು ಮತ್ತೆ ಗೋತ್ರ ಅಥವಾ ಬೆಡಗುಗಳಾಗಿ ಉಪವಿಭಾಗಿತವಾಗಿವೆ. ಅವು ಬಹುಪಾಲು ಬುಡಕಟ್ಟು ಲಾಂಛನದ ಮೂಲವನ್ನು ಹೊಂದಿವೆ, ಇಂದಿಗೂ ಅದೇ ಗುಣಲಕ್ಷಣಗಳು ಉಳಿಸಿಕೊಂಡಿವೆ. ಅರಿಶಿಣ ಗೋತ್ರಂ ಎಂಬುದು ಬಹಳ ಗಮನಾರ್ಹವಾಗಿದೆ. ಅದರ ಅರ್ಥ ಹಳದಿ ಎಂದು ಮೂಲದಲ್ಲಿ ಇದು ಒಂದು ನಿಷೇಧ ಇದರಿಂದ ಅನಾನುಕೂಲವಾಗಿ ಅದಕ್ಕೆ ಬದಲಾಗಿ ಕೊರ್ರ (ನವಣೆ) ಧಾನ್ಯವನ್ನು ಇಟ್ಟುಕೊಂಡು ಬಣದ ಹಳೆಯ ಹೆಸರನ್ನು ಮಾತ್ರ ಹಾಗೆ ಉಳಿಸಿಕೊಳ್ಳುವಂತಾಯಿತು. ಭೀಮ ಕವಿಯ ಹಾಲು ಮತ್ತೋತ್ತೇಜಕ ಪುರಾಣ ಹೆಚ್ಚಿನ ಬೆಳಕು ಚೆಲ್ಲುತ್ತದೆ. ಭೀಮಕವಿ ಕುರುಬ ಸಮಾಜದ ಉಗಮ ಕುರಿತು ಹೇಳಿದ್ದು ಸಂಸ್ಕೃತದಲ್ಲಿ ಬರೆದ ಆಗ್ನೇಯ ಪುರಾಣದ ಮೂಲಾಧಾರ ಕೊಡುತ್ತಾನೆ. ಇದರ ಪ್ರಕಾರ ಒಂದಾನೊಂದು ಕಾಲದಲ್ಲಿ ಕೌರುಭನು ಉಗ್ರ ತಪಸ್ಸು ಮಾಡಿ ಗಳಿಸಿದ ಶಕ್ತಿಯಿಂದಾಗಿ ಕುರುವ ಸಮಾಜ ಹುಟ್ಟಿತೆಂದು ಹೇಳಲಾಗಿದೆ.

ಹಾಲುಮತದ ಚರಿತ್ರೆಯ ಪ್ರಕಾರ ಬ್ರಹ್ಮನಿಂದ ರಚಿತವಾದ ಬ್ರಹ್ಮಾಂಡವನ್ನು ನೋಡಲು ಒಮ್ಮೆ ಶಿವ–ಪಾರ್ವತಿಯರು ಭೂಲೋಕದಲ್ಲಿ ಸಂಚಾರ ಮಾಡುತ್ತ ಸುಂದರ ತಾಣದಲ್ಲಿ ವಿಶ್ರಾಂತಿ ಪಡೆಯುತ್ತಾರೆ. ಆಗ ಈ ಬ್ರಹ್ಮಾಂಡಕ್ಕೆ ಒಬ್ಬ ಕರ್ತನನ್ನು ನೇಮಿಸಿ ಪ್ರಾಣಿಗಳ ಸಂರಕ್ಷಣೆ ಮಾಡಬೇಕೆಂದು ಪಾರ್ವತಿ ಶಿವನನ್ನು ಕುರಿತು ಬೇಡಿಕೊಳ್ಳುತ್ತಾಳೆ. ಹಾಲುಮತ ಉತ್ಪತ್ತಿಯಾಗಬೇಕೆಂಬ ಉದ್ದೇಶದಿಂದ ಪಾರ್ವತಿಯ ಮೊಲೆ ಹಾಲು ನೆಲಕ್ಕೆ ಬೀಳುತ್ತಿದ್ದಂತೆ ನೆಲಕ್ಕೆ ಬಿದ್ದ ಹಾಲು ವ್ಯರ್ಥವಾಗಬಾರದೆಂದು ಬಲ ಮೊಲೆ ಹಾಲ ಕೈಯಲ್ಲಿ ಹಿಡಿದು ಮಣ್ಣಿನಲ್ಲಿ ಬೆರೆಸಿ ಪುರುಷ ರೂಪವನ್ನು ಮಾಡಿದಳು. ಎಡ ಮಲೆಯ ಹಾಲಿನಲ್ಲಿ ಮಣ್ಣನ್ನು ಬೆರೆಸಿ ಮುದ್ದೆಯಿಂದ ಸ್ತ್ರೀ ರೂಪವನ್ನು ಮಾಡಿದ. ಭೃಂಗಿ, ಪಾರ್ವತಿ ಮರಿ ಮಾಂಸಗಳಿಗೆ ತಾನು ಕಾರಣ ಎಂದು ಹೇಳುತ್ತಾಳೆ. ಆಕೆ ಅವನ ಮಜ್ಜೆ ಮಾಂಸಗಳನ್ನು ತಿರುಗಿ ಪಡೆದಾಗ ಅದರಿಂದ ಭೃಂಗಿ ಜೋತಾಡುತ್ತಾನೆ. ಭೃಂಗಿ ಶಿವನ ಸ್ತುತಿಗೈದಾಗ ತನ್ನ ತ್ರಿಶೂಲವನ್ನೇ ಅವನಿಗೆ ನೀಡುವ ಮೂಲಕ ಭಕ್ತರಕ್ಷಕನೆಂಬ ಬಿರುದನ್ನು ಶಿವ ಉಳಿಸಿಕೊಳ್ಳುತ್ತಾನೆ. ಪಾರ್ವತಿಗೆ ಇದರಿಂದ ಅವಮಾನವಾಗಿ ನೆರೆದವರ ಹಾಸ್ಯಕ್ಕೆ ಗುರಿಯಾಗುತ್ತಾಳೆ. ಕೋಪಗೊಂಡ ಪಾರ್ವತಿಯು ಮುಂದೆ ನಕ್ಕವರು ಕುರಿಗಳಾಗಿ ಹಿಂದೆ ನಕ್ಕವರು ಮೇಕೆಗಳಾಗಿ ಭೂಲೋಕದಲ್ಲಿ ಜನಿಸಿರೆಂದು ಶಾಪ ಕೊಡುತ್ತಾಳೆ. ದೇವಾನುದೇವತೆಗಳು ಹಾಗೂ ಪಾರ್ವತಿ ಪರಮೇಶ್ವರರು ಕೆಲಕಾಲ ಕುರಿ ಮೇಕೆಗಳನ್ನು ಕಾಯ್ದು ಬೇಸತ್ತು ಹೋಗುತ್ತಾರೆ.

ಆಗ ಒಂದು ಗವಿಯಲ್ಲಿ ಅವನ್ನು ಕೂಡಿಟ್ಟು ಬಾಗಿಲು ಮುಚ್ಚಿ ಬಾಗಿಲ ಕೊಂಡಿಗೆ ಪಾರ್ವತಿಯ ಮೂಗುತಿಯನ್ನು ಹಾಕಿ ಶಿವ ಪಾರ್ವತಿಯರು

ಕೈಲಾಸಕ್ಕೆ ಹಿಂತಿರುಗುತ್ತಾರೆ. ಕಾಲಾಂತರದಲ್ಲಿ ಮೂಗುತಿ ಮುತ್ತಲ ಮರವಾಗಿ ಬೆಳೆಯುತ್ತದೆ. ಈ ಜಾಗವು ಮಹಾಭಾರತದ ಕುರುಕ್ಷೇತ್ರದ ಸಮೀಪವಿರುವ ಕುರುವೇಶ್ವರ ಹತ್ತಿರವಿತ್ತು. ಹಿಂದೆ ಈ ಪ್ರದೇಶವನ್ನು ಕುರುಪತಿಪುರ ವೆಂದು ಕರೆಯಲಾಗುತ್ತಿತ್ತು. ಅಲ್ಲಿ ಒಕ್ಕಲಿಗ ಜಾತಿಗೆ ಸೇರಿದ ಆದಿಗೊಂಡ ನೆಲೆಸಿದ್ದು ಆತನಿಗೆ ಆರು ಮಕ್ಕಳಿದ್ದರೂ ಆರು ಜನ ಮಕ್ಕಳಲ್ಲಿ ಕೊನೆಯವನು ಉಂಡಾಡಿ ಪದ್ಮಣ್ಣ ಸಹೋದರರ ಒತ್ತಾಯಕ್ಕೆ ಮಣಿದು ಹೊಲ ಹಸನು ಮಾಡುತ್ತಿರುವಾಗ ಅರಿಯದೆಲೇ ಹುತ್ತದ ಮೇಲಿರುವ ಮುತ್ತಲ ಮರ ಕಡಿದೊಡನೆ ಅದರ ಅಡಿಯಿಂದ ನೂರಾರು ಕುರಿಗಳು ಹೊರ ಬಂದಾಗ ಆಶ್ಚರ್ಯಚಕಿತನಾಗಿ ಶಿವನನ್ನು ಪ್ರಾರ್ಥಿಸುತ್ತಾನೆ. ಶಿವ ಪ್ರತ್ಯಕ್ಷನಾಗಿ ಪದ್ಮಣ್ಣನಿಗೆ ಕುರಿ ಕಾಯುವ ವೃತ್ತಿಯನ್ನು ಕೈಗೊಳ್ಳಬೇಕೆಂದು ಹೇಳುವುದಲ್ಲದೆ ಆತನ ರಕ್ಷಣೆಗೆ ಬೀರೇಶನನ್ನು ಕಳಿಸಿಕೊಡುತ್ತಾನೆ. ಹೀಗೆ ಪದ್ಮಣ್ಣನು ಕುರುಬ ಸಮಾಜದ ಮೂಲ ಪುರುಷನಾದರೆ ಆತನ ಕುರಿಗಳ ರಕ್ಷಣೆಗಾಗಿ ಭೂಮಿಯಲ್ಲಿ ಅವತರಿಸಿದ ಬೀರೇಶ ಬೀರದೇವರಾಗಿ ಅಲೆಮಾರಿ ಕುರುಬರಿಂದ ಪೂಜಿಸಲ್ಪಡುತ್ತಾನೆ.

**ಉಪಸಂಹಾರ**

ಕುರಿ ಸಾಕಾಣಿಕೆಯು ಕುರುಬ ಸಮುದಾಯದ ಪ್ರಮುಖ ಮೂಲ ಕಸುಬಾಗಿದೆ. ಅನಾದಿ ಕಾಲದಿಂದಲೂ ರೈತನೊಂದಿಗೆ ಕುರಿ ಮತ್ತು ಮೇಕೆಗಳು ಬೇರ್ಪಡಿಸಲಾಗದ ಸಂಬಂಧವನ್ನು ಹೊಂದಿದ್ದು ಆದಾಯ ಮತ್ತು ಉದ್ಯೋಗದ ಮೂಲವಾಗಿವೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಬಹುತೇಕ ಕುರುಬರು ಕುರಿಸಾಕಾಣಿಕೆಯನ್ನು ಮಾಡುತ್ತಿರುವುದನ್ನು ಇಂದಿಗೂ ಸಹಾ ಕಾಣಬಹುದಾಗಿದೆ.ಯಥೇಚ್ಛವಾಗಿ ಉತ್ತರ ಕರ್ನಾಟಕ ಭಾಗದ ಬಾಗಲಕೋಟೆ, ರಾಯಚೂರು, ಯಾದಗಿರಿ, ಕೊಪ್ಪಳ, ವಿಜಯಪುರ, ಧಾರವಾಡ, ಗದಗ, ಬೆಳಗಾವಿ ಹಾಗೂ ಮಧ್ಯ ಕರ್ನಾಟಕದ ದಾವಣಗೆರೆ, ತುಮಕೂರು, ಚಿತ್ರದುರ್ಗ, ಚಿಕ್ಕಬಳ್ಳಾಪುರ, ಜಿಲ್ಲೆಗಳಲ್ಲಿ ಕುರಿಸಾಕಾಣಿಕೆ ಮಾಡುತ್ತಿರುವುದು ಕಂಡುಬಂದಿದೆ.ದಕ್ಷಿಣ ಕರ್ನಾಟಕದ ಹಾಸನ, ಮಂಡ್ಯ ಮೈಸೂರು, ಚಾಮರಾಜನಗರ, ಕೋಲಾರ, ರಾಮನಗರ, ಚನ್ನಪಟ್ಟಣ ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಕುರಿಸಾಕಾಣಿಕೆ ಮಾಡುತ್ತಿರುವುದನ್ನು ಕಾಣಬಹುದು.

**ಪರಾಮರ್ಶನ ಗ್ರಂಥಗಳು**


- ಚಂದ್ರಪ್ಪ ಅಜ್ಜಂಪ್ಮರ, ಎಚ್. (2011). *ಕುರುಬರ ಕುರುಹುಗಳು.* ವಿದ್ಯಾನಿಧಿ ಪ್ರಕಾಶನ.
- ಗುರುಲಿಂಗಯ್ಯ, ಎಂ. (2016). *ಅಂಚಿನ ಗುಂಪುಗಳ ಸಮಾಜಶಾಸ್ತ್ರ* . ಡಿವಿಟ್ ಪ್ರಕಾಶನ.
- ಲಿಂಗದಹಳ್ಳಿ ಹಾಲಪ್ಪ. (2017). *ಜನಾಂಗೀಯ ಮತ್ತು ರಾಜಕೀಯ ಕುರುಬರ ಸಂಸ್ಕೃತಿ ದರ್ಶನ ಭಾಗ–2.* ಕುರುಬರ ಸಂಸ್ಕೃತಿ ಪರಿಷತ್.
- ಲಿಂಗದಹಳ್ಳಿ ಹಾಲಪ್ಪ. (2019). *ಕರ್ನಾಟಕ ಸಾಮ್ರಾಟ ವಿಜಯನಗರ ಹೊಸಪಾಲನ ಸಂಸ್ಕೃತಿಯ ಅನಾವರಣ.* ಹಾಲುಮತ ಅಕ್ಕ ಬುಕ್ಕ ಪ್ರತಿಷ್ಠಾನ.
- ತಾರೀಹಳ್ಳಿ ಹನುಮಂತಪ್ಪ. (2010). *ಕರ್ನಾಟಕದ ಬುಡಕಟ್ಟುಗಳ ಸಮುದಾಯಗಳು.* ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.
- Enthoven. R E. (1920). The Tribes and Castes of Bombay. Vol.2,
- Governament Central Press, Bombay. Pp 320

- HayavadanaRao C., Mysore gazetteer, Vol.II, Historical part, Govt. press, P. 516
- Luiz A.A.D. (1963). The Tribes of Mysore. Bangalore
- Nanjundayya, H. V., & Anantakrishna Iyer, L. K. (1931). *Mysore Tribes And Castes Vol. 4*. The Mysore University. Mysore.
- Ramesh, M. N. (2019, April 22). *Kuruba community in Karnataka*. LAP LAMBERT Academic Publishing.
- Rice, B.L. (1908). Imperial Gazetteer Vol XI.
- Thurston, Edgar. (1909). Caste and Tribes of southern India. Vol-4